ಮೈಕೈನೋವಿನಿಂದ ನೀವು ಬಳಲಿ ಬೆಂಡಾಗಿರುವಾಗ ಮನೆಮಂದಿಯ
ಆರೈಕೆ, ಅಡಿಗೆ...ಒಂದಿಷ್ಟು ಹರಟೆಯೂ ಬೇಸರವೆನಿಸುತ್ತದೆ

# ಮೈಕೈ ನೋವು ನಿವಾರಿಸಿರಿ
# ಝುಂಡು ಬಾಮ್ ಹಚ್ಚಿರಿ.

## ಬೇಗನೇ ಎದ್ದು ಓಡಾಡಿರಿ.



ಮೈಕೈನೋವು ತಾನೊಂದೇ ಅಲ್ಲ... ಸಂಗಡ, ಓಡಾಡಲು ತೊಂದರೆ, ಎದ್ದು ಕೂರಲು ಅಡಚಣೆ ಇತ್ಯಾದಿ ಇನ್ನೂ ಕೆಲವು ಪೀಡೆಗಳನ್ನೂ ತರುತ್ತದೆ. ಆದರೆ ನೀವೇನು ಚಿಂತಿಸಬೇಕಾಗಿಲ್ಲ.

ಪೀಡಾಹಾರಿ ಝುಂಡು ಬಾಮ್‌ನಲ್ಲಿರುವ ವಿಶೇಷ ಔಷಧಿಯ ಗುಣಗಳು ಆಳಕ್ಕಿಳಿದು ಪರಿಣಾಮ ಬೀರುತ್ತವೆ. ಮೈಕೈನೋವು ಮತ್ತು ಇತರ ಪೀಡೆಗಳನ್ನೂ ಕಿತ್ತೆಸೆಯುತ್ತವೆ.

ಪೀಡಾಹಾರಿ ಝುಂಡು ಬಾಮ್ ಸದಾ ಸಂಗಡವಿರಿಸಿರಿ. ಶೀತ ಮತ್ತು ತಲೆನೋವಿನ ಪೀಡೆಗಳಿಂದಲೂ ತ್ವರಿತ ಆರಾಮ ಪಡೆಯಬಲ್ಲಿರಿ.

ಝುಂಡು ಬಾಮ್ ಝುಂಡು ಬಾಮ್ ಪೀಡಾಹಾರಿ ಬಾಮ್
ಶೀತ, ತಲೆನೋವು, ಪೀಡೆಯಿಂದ ಕ್ಷಣದಲ್ಲಿ ಉಪಶಮನ

30. 10. ಮತ್ತು 5 ಗ್ರಾಮ್ ಪ್ಯಾಕ್‌ನಲ್ಲಿ




**ಬಾಮ್ ಒಂದು ಕೆಲಸ ಮೂರು**

*1 ಶೀತ*
*2 ತಲೆ ನೋವು*
*3 ಮೈಕೈ ನೋವು*

AD PALACE/ZPW/144-92/KAN

# ಸಾಹಿತ್ಯ ಸಂಚಾರ...

## 'ಚದುರಂಗ'ರ ಮೈಸೂರು ಗ್ರಾಮ್ಯಶೈಲಿ

ಉರಿಯುವ ಕೊಳ್ಳಿ ಹಿರಿದು, ಕೆಂಡದ ರಾಶಿಯನ್ನು ನೀರೊಲೆಯ ಈಚೆಗೆ ಬಾಚಿ, ಅದನ್ನು ತಟ್ಟೆ ಮಟ್ಟಮಾಡಿ ಆ ರಾಶಿಯ ಮೇಲೆ ಯಾಂತ್ರಿಕವಾಗಿ ಹರಳೆಣ್ಣೆ ತುಂಬಿದ ಹಿತ್ತಾಳೆ ಬಟ್ಟಲನ್ನಿಟ್ಟಳು. ಕೊತಪೊತ ಕುದಿಯೊ ಎಣ್ಣೇಲಿ ಅಯ್ಯನ ಮೊಕ ಎದ್ದು ಬಿದ್ದು ಅಲ್ಲಾಡಿ ಚೆಲ್ಲಾಡಿ ಕಂಡೂ ಕಾಣದಂಗೆ ಮೂಡಿತು. ಸ್ವಾಮಸ್ವಾಮಾರ ಇಪ್ಪೊತ್ತಿಗೆಲ್ಲ ಅಯ್ಯ ಎಣ್ಣೆ ಒತ್ತಿಸಿಕೊಂಡು ಮೀಣಕ್ಕೆ ಕುಂತುಕೊಬೇಕು. ಅಯ್ಯನ ಮೀಣ ಅಂದರೆ ನಮ್ಮ ಸುತ್ತಿಗೆ ಹೆಸರುವಾಸಿ. ತುಟಿ ಮ್ಯಾಗಿನ ಹೊದೆ ಮೀಸೆ, ಎದೆ ಮ್ಯಾಗಿನ ಕೂದಲ ಬೊಂತೆ ಹಣ್ಣು ಮೆಟ್ಟಿ ನೆರೆಯುತ್ತಿದ್ದರೂ ಬೆನ್ನು ಬಗ್ಗಿಸದೆ ಅಯ್ಯ ನಡೀತಿದ್ದ ಠೀವಿ ನೋಡಿ, ಅವನ ದೃಡ ಕಾಯಕ್ಕೆ ಪ್ರತಿ ಸ್ವಾಮಾರ ತಪ್ಪದೆ ಅವನು ಮಾಡ್ತಿದ್ದ ಎಣ್ಣೆ ಮೀಣವೆ ಕಾರಣ ಅಂತ ಜನ ಆಡಿಕೊಳ್ಳುತ್ತಿದ್ದರು.

ಅಯ್ಯನಿಗೆ ಎಣ್ಣೆ ಒತ್ತೋದರಲ್ಲಿ ಅವಳ ಕೈ ಬಿದ್ದೇ ಹೋಯ್ತಿತ್ತು. ನೀನು ಹಸ್ತ ಕೊಟ್ಟು ತಿಕ್ಕಿದರೆ ನನ್ನ ಮೈ ಕೈ ನೋವೆಲ್ಲ ಮಾಯವಾಯ್ತದೆ. ಹೀಗಂದು ಮೊಕ ತಿರುಗಿಸಿ ಎಣ್ಣೆ ತುಂಬಿದ ಕಣ್ಣಲ್ಲೆ ಒಂದು ತರಾ ನೋಡಿ ನಿನ್ನ ಬುಟ್ಟರೆ ಯಾರೂ ಹಿಂಗೆ ತಿಕ್ಕಕ್ಕಿಲ್ಲ; ನಿನ್ನ ಅವ್ವನ ರಟ್ಟೇಲು ಸಕುತಿ ಇರ್ನಿಲ್ಲ ಅಂದಾಗ, ಸತ್ತೋದವಳ ಸುದ್ದಿ ಈಗ್ಯಾಕೆ ಅಂತಿದ್ದ ಹಾಗೇನೆ ಮಂತೆ ಇಂತ ದೊಡ್ಡ ಘಟದೊಂದಿಗೆ ಇಪ್ಪತ್ತು ವರುಸದ ಮೇಲ್ಪಟ್ಟು ಬಾಳಾಟ ಮಾಡೋದು ಅಂದರೆ ಸಾಮಾನ್ಯವ ? ಅನ್ನಿಸಿ ಫಕ್ಕನೆ ಬಂದ ನಗುವನ್ನು ಸೆರಗಿನ ತುದಿಯಿಂದ ಅದುಮಿದಳು. ನಂಗೂ ತಿಕ್ತಾ ಇದ್ದರೆ ನುರುಜುಗಲ್ಲಿನ ಮ್ಯಾಲೆ ಹಸ್ತ ಉಜ್ಜಿದಂಗಾಗೋದು. ನೀರಂತು ಗಣ ಗಣ ಕಾದಿರಬೇಕು. ಆ ಕುದಿಯೋ ನೀರನ್ನ ಹಿತ್ತಾಳೆ ಕೊಳದಪ್ಪಲೇಲಿ ಮೊಗ ಮೊಗೆದು ಭುಜ, ತೊಡೆ, ತಲೆ ಮ್ಯಾಲೆಲ್ಲ ದಪ್ಪಡಿ ದುಪ್ಪಡಿ ಸುರಿಯೋವಾಗ ಅವಳ ಅಂಗೈ ಮುಂಗೈ ಪೂರ್ತ ಹೊಪ್ಪಳೆ, ಸ್ನಾನ ಮುಗಿಸಿ ಏಳಬೇಕಾದರೆ ಅಯ್ಯನ ಮಯ್ಯಿ ಹಬೆ ಆಡಬೇಕು. ಟುವಲ್ನಲ್ಲಿ ಏರಿಸಿ ಮನಗಿದರೆ ಕಲ್ಯಾಣಿಕೆ ಕಂಬಳಿ ಹೊದಿಕೆನಾಕಾದರೂ ಆಗಲೇಬೇಕು. ತಾನು ಅರ್ಧ ಮುಕ್ಕಾಲು ಗಂಟೆ ಒತ್ಕೊಂಡು ತಂಬ್ಕೊಂಡು ಕುಂತಿರಬೇಕು. ಎದ್ದಾಗ ಹಾಸಿಗೆ ದುಪಟಿ ಪೂರ್ತ ಒದ್ದೆ ಮುದ್ದೆ. ಹೊರಗೆ ಹಟ್ಟಿ ಬಾಗಿಲ ಮುಂದುಗಡೆ ಬೀದಿ ಕಸ ಗುಡಿಸಿ ಹರವಿದ ಹರಳು ಕಾಯಿಗಳು ಪಟ್ ಪಟ್ ಪಟ್ ಸಿಡಿದ ಸದ್ದು ಅವಳನ್ನು ಎಚ್ಚರಗೊಳಿಸಿತು. ಎಣ್ಣೆಯ ಬಟ್ಟಲನ್ನು ಕೆಂಡದಿಂದ ಇಳುಕಿ ಮೇಲೆದ್ದಾಗಲೂ ಅಯ್ಯನ ನೆಪ್ಪೇ ಅವಳೊಳಗೆ ಜಗ್ಗಾಡಿ ನಡು ಮನೆಯ ತೊಲೆಯ ಮೇಲಿದ್ದ ಸೆಬ್ಬೆಯನ್ನೆಳೆದು ಹೊರ ನಡೆದಳು.....

('ಕ್ವಾಟೆ' ಕಥೆಯ ಪ್ರಾರಂಭ ಭಾಗ)


ಸಂಪಾದಕ :
ಟಿ. ಸತೀಶ್ ಯು. ಪೈ

ಸಹಾಯಕ ಸಂಪಾದಕ :
'ಚಿರಂಜೀವಿ'

ಮುದ್ರಣ :
ಟಿ. ಸತೀಶ್ ಯು. ಪೈ
ಉದಯವಾಣಿ ಪ್ರೆಸ್
ನಿರ್ವಹಣೆ : ಪಿ. ಭಾಸ್ಕರ ರಾವ್

ಪ್ರಕಾಶನ :
ಮಣಿಪಾಲ ಪ್ರಿಂಟರ್ಸ್ ಆ್ಯಂಡ್ ಪಬ್ಲಿಷರ್ಸ್ ಲಿ.,
ಉದಯವಾಣಿ ಬಿಲ್ಡಿಂಗ್, ಮಣಿಪಾಲ – 576 119

ಬೆಂಗಳೂರು ಕಛೇರಿ ವಿಳಾಸ :
ತುಷಾರ
ಎಸ್. 201 ನಾರ್ಥ್ ಬ್ಲಾಕ್, ಫ್ರಂಟ್ ವಿಂಗ್,
ಮಣಿಪಾಲ ಸೆಂಟರ್,
47, ಡಿಕನ್‌ಸನ್ ರಸ್ತೆ, ಬೆಂಗಳೂರು – 560 042
ಫೋನ್ : 586658 ಮತ್ತು 588467

ತುಷಾರ, ಪ್ರೆಸ್ ಕಾರ್ನರ್, ಮಣಿಪಾಲ – 576 119

ತುಷಾರ ಸಿಂಚನ

ಅಕ್ಟೋಬರ್ 1992

ಸಂಪುಟ : 20

ಸಂಚಿಕೆ : 7

ಯದುಸಂತಾನಶ್ರೀಃ (ಕಥೆ) ★ ರುಕ್ಮಿಣಿ ಗಿರಿಮಾಜಿ 9

ಹರಕೆ ಸಂದಿತು ? (ಕಥೆ) ★ ಎಂ. ಎನ್. ಸುಮಿತ್ರಾ 20

ವಿಷಾದಿಸುತ್ತೇನೆ... (ಹಾಸ್ಯ) ★ ಶಂಸ 27

ಕಾಡತಾವ ನೆನಪುಗಳು (ಕಥೆ) ★ ಎ. ಸತೀಶ್ ರಾವ್ 40



ಕಾದಂಬರಿ–

ದ್ವಂದ್ವ

★ 'ಮನು' 117

ಧಾರಾವಾಹಿ – 6

ವ್ಯೂಹ

★ 'ಚಿರಂಜೀವಿ' 94

ನಗೆ ಸೀರಿಯಲ್ – 10

ಕಂ.ಕ. ಜೂನಿಯರ್

(ಡಿಪ್ಪು - ಡಿಮ್ಮು ಜೊತೆಗೆ)

★ ಎಂ. ಎಸ್. ನರಸಿಂಹಮೂರ್ತಿ 47



ಪ್ರೊ। ಕೆ. ಎಸ್. ನಿಸಾರ್ ಅಹಮದ್
ಅವರ ವೈಚಾರಿಕ-ಸಾಹಿತ್ಯಿಕ
ಲೇಖನಮಾಲೆ ಪ್ರಾರಂಭ

15

ಅಚ್ಚು ಮೆಚ್ಚು

ನನ್ನೂರು ನನ್ನ ಜನ

## ಮೈಸೂರು ಜಿಲ್ಲೆ


ಗಂಧರ್ವರ ಸೀಮೆ ★ ಡಾ। ಎಚ್. ಕೆ. ರಂಗನಾಥ್ 53

ಓಹ್, ಅಂದಿನ ಮೈಸೂರು ★ ಕಮಲಾ ಎನ್. ಮೂರ್ತಿ 59

ಸುಂದರ ಸೊಬಗಿನ ಬೀಡು ★ ಶೇಷನಾರಾಯಣ 62

ಮೈಸೂರು, ಸಾರ್, ಮೈಸೂರು ★ ವಿ. ಎನ್. ವಿಶ್ವನಾಥ್ 70

ಮದುವೆ ಮೈಸೂರು ಮಲ್ಲಿಗೆಯೊಡನೆಯೇ (ಕಥೆ) ★ ಕೆ. ಎಸ್. ವತ್ಸಲಾ ವಿಶ್ವನಾಥ್ 74

ಮೈಸೂರಿನ ನೆನಪುಗಳು ★ ಡಾ। ಜ್ಯೋತ್ಸ್ನಾ ಕಾಮತ್ 81


## ಕನ್ನಡ ಕಥಾಲೋಕ


'ಅಶ್ವತ್ಥ' ಅವರ ಕಥೆ

**ವ್ಯಭಿಚಾರ – ಭಾಗ-1**

ಆಯ್ಕೆ ವಿಮರ್ಶೆ: 87

ಪ್ರೊ। ಎಲ್. ಎಸ್. ಶೇಷಗಿರಿ ರಾವ್


## ಖೊಕ್ ಧಾರಾವಾಹಿ – 10


**ಶಾಲಿನಿ**

★ ಸಿ. ಎನ್. ಮುಕ್ತಾ 31


## ಸವಿ ವೈವಿಧ್ಯ


ಪಂಚಕಜ್ಜಾಯ 103


## ಸ್ಥಿರಶೀರ್ಷಿಕೆಗಳು


ಬಹುಮಾನಿತ ವ್ಯಂಗ್ಯಚಿತ್ರ 14

ಹಿರಿಯರ ಆಯ್ಕೆ ಕವನಗಳು 38

ಚಿತ್ರಕವನ ಸ್ಪರ್ಧೆ – 111 69

ಬಹುಮಾನಿತ ಚಿತ್ರಕವನ 116

ಮನಮುದ್ರೆ 157


ಮುಖಪುಟ - ಚಾಮುಂಡೇಶ್ವರಿ

ಮೈಸೂರು ಸಾಂಪ್ರದಾಯಿಕ ಶೈಲಿ ಕಲೆ

ಕೃಪೆ: ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು

---


ಕಲೆ: ಸ್ಟುಡಿಯೋ ಸ್ನೇಹಾ, ಟಿ. ಕೆ. ರಾವ್, ಮೋನಪ್ಪ, ಶ್ಯಾಮ್, ಸಾವಿತ್ರಿ

ವಿನ್ಯಾಸ: ನಾಗರಾಜ್

ತುಷಾರ – ಮಾಸಪತ್ರಿಕೆ

ವಾರ್ಷಿಕ ಚಂದಾ: ರೂ. 62

ಸಂಪರ್ಕಿಸಿ: ಪ್ರಸರಣಾಧಿಕಾರಿ

ತುಷಾರ, ಪ್ರೆಸ್ ಕಾರ್ನರ್

ಮಣಿಪಾಲ – 576 119 (ದ.ಕ.)



# ನಿಮ್ಮ ಅನಿಸಿಕೆಗಳು

## ಪತ್ತೇದಾರಿ ವಿಶೇಷಗಳು —

- ಪತ್ತೇದಾರಿ ಸಾಹಿತ್ಯವನ್ನು ಇಷ್ಟಪಡದ ನಾನು 'ತುಷಾರ'ದಂಥ ಶ್ರೇಷ್ಠ ಮಾಸಿಕವೇ ಈ ಪ್ರಕಾರದಲ್ಲಿ ವಿಶೇಷಾಂಕ ತಂದದ್ದನ್ನು ನೋಡಿ ಆಸಕ್ತಿ ಮೂಡಿ ಓದಲಾರಂಭಿಸಿದೆ. ' ಈವರೆಗೆ ಪತ್ತೇದಾರಿ ಸಾಹಿತ್ಯವನ್ನೇಕೆ ನಾನು ಓದಲಿಲ್ಲ ' ಅನ್ನಿಸಿತು. ಖಂಡಿತ ಓದುಗರ ವಾಚನಾಭಿರುಚಿ ವಿಸ್ತರಿಸಲು ಇಂಥ ಪ್ರಯತ್ನಗಳು ಸ್ವಾಗತಾರ್ಹ.

  **— ಎಚ್. ಎಸ್. ಸೂರ್ಯನಾರಾಯಣ (ಪತ್ರಕರ್ತ), ಕಡೂರು**

- 'ಬೇಟೆ' (ಸಾಸ್ಕಾಮೂರ್ತಿ) ಪತ್ತೇದಾರಿಕೆ ಅಂಶಗಳು, ತರ್ಕಬದ್ಧ ನಿರೂಪಣೆ, ಪ್ರಬುದ್ಧ ಶೈಲಿಯ ಉತ್ತಮ ಕಥೆ. ಸಮಯ ಪ್ರಜ್ಞೆ, ಕಾರ್ಯವಿಧಾನ ಚೆನ್ನಾಗಿದೆ.

  **— ಕಮಲಾತನಯ, ತುಮಕೂರು ಜಿಲ್ಲೆ**

- 'ಬೇಟೆ' ಸರಳವಾದರೂ ಅತ್ಯಂತ ಕುತೂಹಲ ವಾಗಿತ್ತು.

  **— ಉಮಾ ಪ್ರಸಾದ್ ರೈ, ನಡುಬೈಲು (ದ.ಕ.)**
  **— ನುಲ್ಲಿಪ್ಪಾಡಿ ರಾಘವೇಂದ್ರ, ಕಾಸರಗೋಡು**
  **— ಚಕ್ರ, ಭದ್ರಾವತಿ**

- ಉಷಾ ನವರತ್ನರಾಮ್ ಕಥೆ 'ಚೇಲಿ ಹೊರಗಿರ ಬೇಕು' ಸ್ವಾರಸ್ಯವಾಗಿತ್ತು.

  **— ಬಿ. ಎಂ. ಜಗದೀಶ್, ಬೆಳಗಾವಿ**

- 'ಚೇಲಿ ಹೊರಗಿರಬೇಕು' ಕಥೆಯಲ್ಲಿ - ತನ್ನ ಸರ್ವಸ್ವ ವನ್ನೆ ತ್ಯಾಗ ಮಾಡಿ ಗಂಡನ ಮನೆ ಸೇರಿದವಳು, ಬರೀ ಸಂಪತ್ತಿಗಾಗಿ ಗಂಡನಿಂದಲೇ ಕೊಲೆಯಾಗು ವುದು ದುರಂತ.

  **— ಶಿವಣ್ಣ ಬಿ. ಹೂಗಾರ ಆಲಗೂರ**

- ಈ ಕಥೆ ಪತ್ತೇದಾರಿ ಹೌದೋ ಅಲ್ಲವೊ ಎಂದು ನಾವೇ ಪತ್ತೆಮಾಡುವಂತಿತ್ತು.

  **— ಭಾಗ್ಯಶ್ರೀ ಜೋಶಿ, ಕೊಪ್ಪಳ**

- 'ಕರ್ನಲ್ ಮಕ್ಮಲ್‌ದಾಸನ ರಹಸ್ಯ' (ವಿ. ಜಿ. ಕೃಷ್ಣಮೂರ್ತಿ) ಅಕ್ಷರಕ್ಷರವೂ ಕುತೂಹಲಭರಿತ, 'ಥ್ರಿಲ್' ಕೊಟ್ಟ ಕಥೆ.

  **— ಮೊಹಮ್ಮದ್ ಮೆಹಬೂಬ್, ಕೊಂಡ್ಲಹಳ್ಳಿ**

- ಬದುಕಿನ ಹಲವು ಮುಖಗಳನ್ನು, ಸಾಹಿತ್ಯದ ವಿವಿಧ ಮಜಲುಗಳನ್ನು, ಹೊಸಹೊಸತನ್ನು ಹುಡುಕಿ ಪರಿಚಯಿಸಿ ಓದುಗರ ಕುತೂಹಲ ಕೆರಳಿ ಸುವ 'ತುಷಾರ'ವೇ ನಿಜಕ್ಕೂ ಪತ್ತೇದಾರಿ ಯಿದ್ದಂತೆ!

  **— ಕೆ. ಎಚ್. ಹಸನ್, ಬೆಳ್ಳಿಗನೂಡು**

- ಪ್ರತಿ ತಿಂಗಳೂ ಏನಾದರೊಂದು ಹೊಸತು ಕೊಡುವ 'ತುಷಾರ'ಕ್ಕೆ ಧನ್ಯವಾದಗಳು. ಪತ್ತೇದಾರಿ ವಿಶೇಷಾಂಕ ಯಶಸ್ವಿಯಾಗಿದೆ.

  **— ಮೈಲಾರಪ್ಪ ಕೆ., ಹೂವಿನ ಹಡಗಲಿ**
  **— ವೈ. ಎಸ್. ಸುಂದರೇಶನ್, ಮೈಸೂರು**
  **— ಪ್ರಸನ್ನ ಕುಮಾರ್ ಗುಪ್ತಾ, ಗುಲಬರ್ಗಾ**

## ಪತ್ತೇದಾರಿ ಕಾದಂಬರಿ (ವಿಷಮಂಥನ)

- ಹೊಸ ಕಥೆಗೆ ಪ್ಲಾಟ್ ಹುಡುಕಲು ಹೊರಟ ಲೇಖಕರ ಅನುಭವವೇ ಒಂದು ಕಥೆಗೆ ಪ್ಲಾಟ್ ಆದದ್ದು ಆಶ್ಚರ್ಯ ಸಂಗತಿ.

  **— ಸರೋಜಿನಿ, ಕಳವಾರು (ದ.ಕ.)**

- ಮನಸ್ಸಿಗೆ ತುಂಬಾ ಮುದ ನೀಡಿದ ಕಾದಂಬರಿ. ರಸವತ್ತಾಗಿ ಮೂಡಿಬಂದಿದೆ.

  **— ಎಚ್. ಆರ್. ಉಮೇಶ್, ಚನ್ನಗಿರಿ**
  **— ರತಿಕಲ ಶೆಟ್ಟಿ, ಸುನೀತ, ಸುರೇಖ, ಅನುಷ, ಸುಪ್ರಿಯ, ಕಟ್ಟತ್ತಾಡೆ (ದ.ಕ.)**
  **— ಲಕ್ಷ್ಮಿ ಇ. ಸುಬ್ರಹ್ಮಣ್ಯ (ದ.ಕ.)**

- ಹೆಣ್ಣು ಇಷ್ಟೊಂದು ನಿರ್ಲಿಪ್ತ - ನಿರ್ವಿಕಾರ ಳಾಗಿರಲು ಸಾಧ್ಯವೇ ?

  **— ಮಂಜುಶ್ರೀ, ತೂದೂರು (ಶಿವಮೊಗ್ಗ ಜಿಲ್ಲೆ)**

- ಎಷ್ಟು ಜನ ಸುಬ್ಬರಾವ್‌ಗಳು ಎಷ್ಟು ಜನ ಮಂದಾಕಿನಿಯರನ್ನು ಪಾಪಕೂಪಕ್ಕೆ ತಳ್ಳಬೇಕೊ ?

  **— ಚಂದ್ರಶೇಖರ್ ಜಿ. ಎಸ್., ಮೇಲ್ ಗಂಗೊಳ್ಳಿ (ದ.ಕ.)**

- ಪತ್ತೇದಾರಿಯಾದರೂ ಹೃದಯಸ್ಪರ್ಶಿಯಾಗಿ ಮೂಡಿ ಬಂದಿದೆ.

  **— ಮಹಮ್ಮದ್ ಎಚ್. ಕೊಲ್ಹಾರ, ದೇವರಗೆಣ್ಣೂರ (ವಿಜಾಪುರ ಜಿಲ್ಲೆ)**

- ತನಿಖಾದಳದ ಹಿರಿಯ ಅಧಿಕಾರಿ ಸುಧೀರ ಜಾಧವನನ್ನು ಕೊನೆಗೆ ಸೇವೆಗೆ ಸೇರಿಸಿದ್ದರೆ ಕಥೆಗೆ ಇನ್ನೂ ಮೆರುಗು ಬರುತ್ತಿತ್ತು.

  **— ಬಸವರಾಜ ಬಸಕ್ರಿ, ಬೆಳಗಾವಿ ಜಿಲ್ಲೆ**

- ಒಬ್ಬ ಕೆಟ್ಟ ಹೆಂಗಸನ್ನು ನೋಡಿ ನಗುವ ಈ ಕಾಲ

ದಲ್ಲಿ, ಅವಳನ್ನು ಒಳ್ಳೆಯವಳನ್ನಾಗಿಸಿ ಮದುವೆ ಮಾಡಿಕೊಂಡವ ತುಂಬಾ ಒಳ್ಳೆಯ ಮನುಷ್ಯನೇ ಆಗಿರಬೇಕು.

**– ಆರ್. ಲತಾ, ಚನ್ನಪಟ್ಟಣ**

- ಪತ್ತೇದಾರಿ ಸಾಹಿತ್ಯ ಓದಲು ಹೇಸಿಗೆ ಎನಿಸುತ್ತಿದ್ದ ನನಗೆ ಈ ವಿಶೇಷಾಂಕ ಅಭಿರುಚಿ ಬರುವಂತೆ ಮಾಡಿದೆ.

**– ಶರಣು ಹೀರಾಪೂರ, ಇಂಡಿ (ವಿಜಾಪುರ ಜಿಲ್ಲೆ)**

- ಪತ್ತೇದಾರಿ ಸಾಹಿತ್ಯದ ಶತಮಾನೋತ್ಸವ ಸಂದರ್ಭ ದಲ್ಲಿ ಹೊರಬಂದ ಪತ್ತೇದಾರಿ ವಿಶೇಷಾಂಕ ಅತ್ಯಂತ ಸಮಯೋಚಿತ.

**– ಕೆ. ಸುರೇಶ್ ಉಡುಪ, ಕಿನ್ನಿಗೋಳಿ (ದ.ಕ.)**

- ಕಥನ ಕಲೆಯಲ್ಲಿ ವಿಭಿನ್ನವಾಗಿರುವ ಕಾದಂಬರಿ.

**– ಹಡಗಲಿ ಲಿಂಗರಾಜು, ಹಿರೇ ಹಡಗಲಿ**

**('ವಿಷ ಮಂಥನ' ಕಾದಂಬರಿ ಮೆಚ್ಚಿ ತುಂಬಾ ಓದುಗರು ಬರೆದಿದ್ದಾರೆ)**

## ನನ್ನೂರು – ನನ್ನ ಜನ :

### ತುಮಕೂರು ಜಿಲ್ಲೆ

- ತುಮಕೂರು ಜಿಲ್ಲೆ ಬಗ್ಗೆ ಮೂವರು ಸಾಹಿತಿಗಳ ಲೇಖನಗಳು ಪೂರ್ಣ ಚಿತ್ರ ನೀಡಿದವು.

**– ವಿ. ಸಿ. ಶೇಖರ್, ಬೆಂಗಳೂರು**

- ತಮ್ಮ ತವರೂರಿನ ಬಗ್ಗೆ ಸಾಹಿತಿಗಳು ಬರೆದ ಸ್ವಾರಸ್ಯ ಲೇಖನಗಳು ಸಮಗ್ರ ಮಾಹಿತಿಕೊಟ್ಟು ಸಂಚಿಕೆ ಸಂಗ್ರಹಯೋಗ್ಯವೆನಿಸಿತು.

**– ಡಿ. ಎಚ್. ಕುಲಕರ್ಣಿ, ವಿಜಾಪುರ**

- ಕಣ್ಮನ ಸೆಳೆಯುವ ಫೋಟೋಗಳು, ಉಪಯುಕ್ತ-ಸ್ವಾರಸ್ಯ ಲೇಖನಗಳು ರಸಗಡಲಲ್ಲಿ ತೇಲಿಸಿದವು.

**– ನಾಗೇಶ ಸೂರಗೊಂಡ, ಬೆಂಗಳೂರು;**
**– ಸ್ನೇಹಪ್ರಿಯ, ಕೆಂಚನ ಹಳ್ಳಿ**

- ತುಮಕೂರು ಜಿಲ್ಲೆ ಎಂದೊಡನೆ ನೆನಪಾಗುವುದು- 'ಅಭಿನವ ವೀರಭದ್ರ' ಎಂಬ ಖ್ಯಾತಿಗಳಿಸಿರುವ ಶ್ರೀ ನೀಲಕಂಠಯ್ಯನವರ 'ವೀರಭದ್ರ ನರ್ತನ'ದ ರೌದ್ರತೆ.

**– ಜಗದೀಶ್. ಶ. ದುದ್ಗಿ, ರಾಯಚೂರು**

- ನನ್ನೂರಲ್ಲಿ ಇಷ್ಟೊಂದು ವಿಶೇಷಗಳು, ಸಾಹಿತಿ-ಕಲಾವಿದರು ಇರುವುದು ತಿಳಿದು ಸಂತೋಷ-ಹೆಮ್ಮೆ ಯುಂಟಾಯಿತು.

**– ಕಮಲಾ ಕೋರಾ ವಿಜಯಕುಮಾರ್**

- ನಾನಲ್ಲೆ ಇದ್ದರೂ ನನ್ನೂರಿನ ಬಗ್ಗೆ ಹೆಚ್ಚು ತಿಳಿಯದಿದ್ದವಳು. ತುಷಾರದಿಂದ ಅನೇಕ ವಿಷಯ ಗಳು ತಿಳಿದು ಕೆಲವು ಸ್ಥಳಗಳನ್ನು ಸಂದರ್ಶಿಸ ಬೇಕೆಂದನ್ನಿಸಿದೆ.

**– ವಿಭಾ, ತುಮಕೂರು**

- ನನ್ನ ಜಿಲ್ಲೆಯ ವಿಶೇಷಗಳ ಬಗ್ಗೆ , ಸಾಂಸ್ಕೃತಿಕ ಸಾಹಿತ್ಯಿಕ ಸಾಧನೆ ಬಗ್ಗೆ, ಸರಳತೆ-ಸಜ್ಜನಿಕೆ ಬಗ್ಗೆ ಓದಿ ಮನಸ್ಸಿಗೆ ತುಂಬಾ ಮುದವೆನಿಸಿತು.

**– ಎನ್. ಅಡವೀಶ್, ಮುದಗಲ್**

- ತುಮಕೂರು ಜಿಲ್ಲೆಯಲ್ಲಿ ಇಷ್ಟೊಂದು ಐತಿಹಾಸಿಕ-ಪ್ರೇಕ್ಷಣೆಯ ಸ್ಥಳಗಳಿವೆಯೆಂದು ತಿಳಿದೇ ಇರಲಿಲ್ಲ.

**– ದೊ. ಪಾ. ಸುರೇಶ, ತುಮಕೂರು**

- ನಿಜಗಲ್ಲು ಬೆಂಗಳೂರು ಜಿಲ್ಲೆಗೆ ಸೇರಿದೆ, ತುಮಕೂರು ಜಿಲ್ಲೆಗಲ್ಲ.

**– ಕೆ. ಆರ್. ಲಲಿತಾ ರಂಗರಾವ್, ತುಮಕೂರು**

- ಜಿಲ್ಲೆಯ ಐತಿಹಾಸಿಕ ಮತ್ತು ರಾಜಮಹಾರಾಜರ ಹಿನ್ನೆಲೆ, ಸಾಂಸ್ಕೃತಿಕ ಮಹತ್ವಗಳ ಪಕ್ಷಿನೋಟ ಉಪಯುಕ್ತವಾಗಿತ್ತು.

**– ಕೆ. ಭೀಮರಾವ್, ಕೊಪ್ಪಳ**




**ಛೆ! ಛೆ! ಅದು ನೀವಂದ್ಕೊಂಡಂತೆ ಡ್ರಿಂಕ್ ಅಲ್ಲ ಪಾತಮ್ಮನವರೇ... ಮೈಸೂರ್‌ಪಾಕ್ ! ಅನಿಷ್ಟದ್ದು ಗಟ್ಟಿಯಾಗಲೇ ಇಲ್ಲ ! ಅದಕ್ಕಾಗಿ... !!**

## ಪ್ರೊ। ಕೆ. ಎಸ್. ನಿಸಾರ್ ಅಹಮದ್ ಸಂದರ್ಶನ-

- ನಿಸಾರ್ ಅಹಮದ್ ಜೀವನದ ಪ್ರತಿಯೊಂದು ಘಟ್ಟವನ್ನೂ ಸೊಗಸಾಗಿ ಬಣ್ಣಿಸಿದ ಪಕ್ವ ಲೇಖನ. ಉತ್ತಮ ಸಂದರ್ಶನ. ಅವರು ಶತಾಯುಷಿಗಳಾಗಲಿ. ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಲಿ.

  **– ಉಮೇಶ್ ಎಸ್. ಶೆಟ್ಟಿ ಮುನಿಯಾಲು (ದ.ಕ.)**

- ಕಾವ್ಯದ ಬಗ್ಗೆ ಅವರ ಮನದಾಳದ ಆಶಯವನ್ನು ಅವರ ಬಾಯಿಂದಲೇ ನುಡಿಸಿ ಓದುಗರಿಗೆ ತಲುಪಿಸಿದ್ದೀರಿ.

  **– ಪಟ್ಟಡ ಸುಗುಣಕುಮಾರ್ ಪಿ. ಎಸ್., ಅವಂದೂರು (ಮಡಿಕೇರಿ)**

- ಥಟ್ಟನೆ 'ಜೋಗದ ಸಿರಿ ಬೆಳಕಿನಲ್ಲಿ' ಗೀತೆ ನೆನಪಿಗೆ ತರುವ ಕವಿಯ ಬಗ್ಗೆ ಸಂದರ್ಶನ ಲೇಖನ, ಅವರ ಕನ್ನಡ ಅಭಿಮಾನವನ್ನು ವಿವರವಾಗಿ ತಿಳಿಸಿತು.

  **– ಬೆಳ್ಳಿಪಾಲ ದತ್ತಾತ್ರೇಯ, ಬೀಗಾರ**

- 'ಕುರಿಗಳು ಸಾರ್, ಕುರಿಗಳು' – ಎಂದು ಅವರು ಅರವತ್ತರ ದಶಕದಲ್ಲಿ ಆಡಿದ ಮಾತು ಇಂದಿಗೂ ಸತ್ಯವಾಗಿರುವುದು ಎಂಥ ವಿಪರ್ಯಾಸವಲ್ಲವೇ? 'ನಿತ್ಯೋತ್ಸವ' ಗೀತೆಯ ಅರ್ಥ ತಿಳಿದುಕೊಂಡಾಗ ಆನಂದದಿಂದ ಕುಣಿದಿದ್ದೇವೆ.

  **– ಆರ್. ಡಿ. ರವೀಂದ್ರ, ಬಾಳೆಹೊನ್ನೂರು**

- ಅವರು ಟಂಕಿಸುವ 'ಶಬ್ದ ನಾಣ್ಯ'ಗಳಂತೂ ಅದ್ಭುತ ಕ್ರಿಯಾಶೀಲತೆಯುಳ್ಳದ್ದು.

  **– ವಾಸುದೇವ ನಾಡಿಗ್, ಶಿವಮೊಗ್ಗ**

- ಕಾವ್ಯರಚನೆ ಮಾಡಿ ಕಾವ್ಯಾಭಿಮಾನಿಗಳ ಹೃದಯ ಗೆದ್ದ ಇವರ ಸಂಪೂರ್ಣ ಪರಿಚಯ ಸಕಾಲಿಕ.

  **– ವೈ. ಸಿ. ಮೇಲಿನಮನಿ, ಬೆಳಗಾವಿ ಜಿಲ್ಲೆ**

- ಸಂದರ್ಶನ-ಫೋಟೋಗಳು ಉತ್ತಮವಾಗಿದ್ದವು.

  **– ರಜಿಯಾ, ಮಂಗಳೂರು**

## ಸ್ಪರ್ಧೆ – 92

ಮಣಿಪಾಲ ತಾಂತ್ರಿಕ ಮಹಾವಿದ್ಯಾಲಯದ 'ಕನ್ನಡ ವೇದಿಕೆ' ರಾಜ್ಯಮಟ್ಟದ ಕಥೆ, ಕವನ, ಪ್ರಬಂಧ ಸ್ಪರ್ಧೆಗಳನ್ನೇರ್ಪಡಿಸಿದೆ. ಎರಡು ಸಾವಿರ ಪದಗಳ ಕಥೆ, ಇನ್ನೂರು ಪದಗಳ ಕವಿತೆಗಳಿಗೆ ಸ್ವಾಗತ. ಪ್ರಬಂಧ ವಿಷಯ: 'ಸಾರಿಗೆ ಮತ್ತು ಸಂಪರ್ಕರಂಗದಲ್ಲಿನ ತಾಂತ್ರಿಕ ಪ್ರಗತಿಯಿಂದಾಗಿ ಜಗದಗಲ ಸಂಕುಚಿತಗೊಂಡಿದೆ'. ಸಾರ್ವಜನಿಕ ಮತ್ತು ವಿದ್ಯಾರ್ಥಿ ವಿಭಾಗಗಳಿಗೆ ಪ್ರತ್ಯೇಕ ಬಹುಮಾನವಿದೆ. ವಿದ್ಯಾರ್ಥಿಗಳು ಕಾಲೇಜ್ ಪ್ರಾಂಶುಪಾಲರ ದೃಢೀಕರಣಪತ್ರ ಲಗತ್ತಿಸಬೇಕು. ಪ್ರತಿ ಕೃತಿಗೆ ಐದು ರೂಪಾಯಿ ಪ್ರವೇಶಧನ. 'ಕನ್ನಡ ವೇದಿಕೆ, ಎಂ.ಐ.ಟಿ., ಮಣಿಪಾಲ' ಹೆಸರಿನಲ್ಲಿ ಪೋಸ್ಟಲ್ ಆರ್ಡರ್ ಕಳುಹಿಸಬೇಕು.

ಕೊನೆಯ ದಿನಾಂಕ: **15 ಅಕ್ಟೋಬರ್, 1992.**

ವಿಳಾಸ: **ಎಚ್. ಕೆ. ರಾಮಚಂದ್ರ, ಮುಖ್ಯ ವ್ಯವಸ್ಥಾಪಕರು, ಕನ್ನಡ ವೇದಿಕೆ, ಎಂ.ಐ.ಟಿ., ಮಣಿಪಾಲ – 576 119 (ದ.ಕ.)**

ಕಥೆ, ಪ್ರಬಂಧಗಳಿಗೆ ರೂ. 300, 200, 100 ಬಹುಮಾನ. ಕವನಗಳಿಗೆ ರೂ. 150, 125, 100 ಬಹುಮಾನವಿದೆ.

- ಸಾಹಿತ್ಯೋಪಾಸನೆಯ ಅನುಭವ ವಿಶೇಷಗಳ ಬಗ್ಗೆ ಅವರ ಮಾತು ಸಂತೋಷಕೊಟ್ಟಿತು. ಈ ನಿರಾಡಂಬರದ ಸಾಹಿತಿಗೆ ಮುಪ್ಪಡರದಿರಲಿ.

  **– ಪ. ಗ. ಭಟ್ಟ ಹರಾಹುರಿ (ಉ.ಕ.)**

## ಕನ್ನಡ ಕಥಾ ಲೋಕ

- ಆನಂದಕಂದ ಅವರ ಕಥೆ 'ಮಾಲ್ಕೀಹಕ್ಕು' ಮನಸ್ಸಿನಲ್ಲಿ ಬಹುಕಾಲ ಉಳಿಯುವಂಥದ್ದು.

  **– ಟಿ. ಎಲ್. ಶಿವಪ್ರಕಾಶಯ್ಯ, ತಿಮ್ಮಾಪುರ**

- ಬಡವರ ಕಂಬನಿ ಜೀವನಕ್ಕೆ ಹಿಡಿದ ಕನ್ನಡಿ.

  **– ಶರಣಪ್ಪ. ಸಿ. ಮುಳ್ಳೂರ, ಮುತ್ತೋಡು (ಚಿತ್ರದುರ್ಗ ಜಿಲ್ಲೆ)**

# ಯದುಸಂತಾನ ಶ್ರೀ:

● ರುಕ್ಮಿಣಿ ಗಿರಿಮಾಜಿ
156, 13 'ಬಿ' ಮುಖ್ಯರಸ್ತೆ
ಮತ್ತೀಕೆರೆ ಲೇಔಟ್
ಗೋಕುಲ I ಹಂತ
ಬೆಂಗಳೂರು – 560 054

ಹದಿನಾಲ್ಕನೇ ಶತಮಾನದ ಅಂತ್ಯ ಭಾಗ–

ಮೈಸೂರಿನ ಮಹಾರಾಣಿಯವರಾದ ದೇವಾಜಮ್ಮಣ್ಣಿಯವರು ಅಂತಃಪುರದ ಪೂಜಾಮಂದಿರದಲ್ಲಿ ತಮ್ಮ ಕುಲದೇವತೆಯಾದ, ಮಹಾಬಲಾದ್ರಿನಿವಾಸಿನಿಯಾದ ಚಾಮುಂಡಾಂಬಿಕೆಯ ಸ್ವರ್ಣವಿಗ್ರಹದ ಮುಂದೆ ಕುಳಿತು ಚಿಂತಾಕ್ರಾಂತರಾಗಿದ್ದಾರೆ. ಕಣ್ಣುಗಳಿಂದ ಅಶ್ರುಧಾರೆ ಸುರಿಯುತ್ತಿದೆ. ಅಂತಃಪುರದಿಂದಾಚೆಗಿನ ಬೆಳಕನ್ನೇ ಕಂಡರಿಯದ ಆಕೆಯು ಘೋರ ವಿಪತ್ತಿಗೊಳಗಾಗಿದ್ದಾರೆ. ಜಗನ್ಮಾತೆಯಲ್ಲಿ ಶರಣಾಗತರಾಗಿದ್ದಾರೆ.

ಕೆಲವೇ ದಿನಗಳ ಹಿಂದಷ್ಟೇ ಭೋಜವಂಶದ ಆಕೆಯ ಪತಿ, ಮಹಿಶೂರರಸರಾದ ಚಾಮರಾಜರು ಆಕಸ್ಮಿಕವಾದ ರೋಗದಿಂದ ದಿವಂಗತರಾದರು. ಆಗಿನ ಕಾಲದಲ್ಲಿ ಮೈಸೂರು ದೇಶದ ಸುತ್ತ ಮುತ್ತ ಅನೇಕ ಪಾಳಯ ಪಟ್ಟುಗಳಿದ್ದು ಅಲ್ಲಿನ ಪಾಳೇಗಾರರು ಸ್ವೇಚ್ಛೆಯಿಂದ ರಾಜ್ಯಾಡಳಿತ ನಡೆಸುತ್ತಿದ್ದರು. ಚಾಮರಾಜರಾದರೋ ಪ್ರಜಾವತ್ಸಲರು. ಪ್ರಜೆಗಳ ಹಿತೈಷಿಗಳು. ಎಂತಲೇ ಜನತೆ ಅವರಿಗೆ 'ಧರ್ಮಪ್ರಭು'ವೆಂಬ ಬಿರುದನ್ನಿತ್ತಿದ್ದರು. ಚಾಮರಾಜರು, ಆ ಪಾಳೆಯಗಾರರನ್ನು ಅಡಗಿಸಿದ್ದರು.

ಆದರೆ ಪ್ರಭುಗಳ ಕಾಲದಲ್ಲಿ ಸೇನಾನಾಯಕನಾಗಿದ್ದ ಕಾರುಗಹಳ್ಳಿ ಮಾರನಾಯಕನು ಬಹಳ ಪ್ರಬಲನಾಗಿದ್ದನು. ಸೈನ್ಯವೆಲ್ಲ ಅವನ ಅಂಕೆಗೇ ಒಳಪಟ್ಟಿದ್ದುದರಿಂದ ಅವನು ನಿರಂಕುಶನಾಗಿದ್ದನು. ಚಾಮರಾಜ ಪ್ರಭುಗಳು ಕಾಲವಾದ ಮೇಲೆ ಅವನೇ ಸರ್ವಾಧಿಕಾರಿಯಾದನು. ಅವನ ಅಪ್ಪಣೆಗೆ ಎದುರೇ ಇಲ್ಲವಾಯಿತು. ಜನಬಲ, ಧನಬಲ, ಸೇನಾಬಲಗಳಿಂದ ಅವನು ಕೊಬ್ಬಿದನು. ಈ ಅಹಂಕಾರ ಮದದಲ್ಲಿ ತನ್ನನ್ನು ಚಿಕ್ಕಂದಿನಿಂದಲೂ ಪೋಷಿಸಿದ್ದ ಪ್ರಭುಗಳೂ ಮಹಾರಾಣಿಯವರೂ ಅವನಿಗೆ ನಗಣ್ಯರಾದರು. ಈಗಂತೂ ಮಹಾರಾಣಿಯವರು ಒಬ್ಬಂಟಿಗರು. ಅವರಿಗೆ ಬೆಂಬಲ ಕೊಡಲು ಸಶಕ್ತರಾದ ಯಾವ ಬಂಧುಗಳ ಬೆಂಬಲವೂ ಆಕೆಗಿಲ್ಲ. ಆದ್ದರಿಂದ ಮೈಸೂರು ರಾಜ್ಯವನ್ನು ತಾನೇ ಕಬಳಿಸುವ ದುರಾಶೆಯವನಿಗುಂಟಾಯಿತು. ಅಷ್ಟೇ ಸಾಲದೆ ಪ್ರಭುಗಳ ಏಕಮಾತ್ರ

**ಮೈಸೂರು ರಾಜವಂಶದ ಹಿರಿರಾಣಿ ದೇವಾಜಮ್ಮಣ್ಣಿ ಅರಮನೆಯನ್ನೂ ರಾಜ್ಯವನ್ನೂ ಸೇನಾನಾಯಕನಿಂದ ಉಳಿಸಲೇಬೇಕಾಗಿತ್ತು.**





-ಕುವರಿಯಾದ ಚಿಕ್ಕದೇವರಸಿಯನ್ನೂ ತಾನು ಪಡೆಯಬೇಕೆನ್ನುವ ಪಾಪಬುದ್ಧಿಯೂ ಹುಟ್ಟಿತು. ಹೀಗೆಂದು ನಾಯಕನು ದೇವಾಜಮ್ಮಣ್ಣಿಯವರಿಗೆ ಹೇಳಿಯೂ ಕಳುಹಿಸಿದನು. ''ಇಂದಿನಿಂದ ಮೂರು ದಿನಗಳೊಳಗಾಗಿ ತಾವು ತಮ್ಮ ಪುತ್ರಿಯನ್ನು ನನಗೆ ವಿವಾಹ ಮಾಡಿಕೊಡಬೇಕು. ಇಲ್ಲದಿದ್ದಲ್ಲಿ ನಾನೇ ಆಕೆಯನ್ನು ಬಲಾತ್ಕಾರವಾಗಿ ಹಿಡಿದೊಯ್ಯುತ್ತೇನೆ.''

ಇದೇ ಚಿಂತೆಯಲ್ಲಿ ಆಕೆ ಕುಳಿತಿದ್ದಾರೆ. ಯಾವುದೂ ತೋಚುತ್ತಿಲ್ಲ. ಹೀಗೆ ಚಿಂತಿಸುತ್ತಾ ಕೂಡುವುದಕ್ಕಿಂತಲೂ ಬೆಂಕಿಯಲ್ಲಿ ಬಿದ್ದು ಪ್ರಾಣತ್ಯಾಗ ಮಾಡುವುದೇ ಲೇಸೆಂದು ಅರಮನೆಯ ಅಂಗಳದಲ್ಲಿ ಚಿತೆಯನ್ನು ರಚಿಸಿದ್ದಾರೆ. ಅಂತಃಪುರದವರೆಲ್ಲಾ ನೆರೆದಿದ್ದಾರೆ. ಮಹಾರಾಣಿಯವರನ್ನು ಆತ್ಮಹತ್ಯೆಗೆ ತೊಡಗಬೇಡಿರೆಂದು ಕೈ ಕೈ ಮುಗಿದು ಕೇಳಿಕೊಳ್ಳುತ್ತಿದ್ದಾರೆ. ಆಗ ವೃದ್ಧಳಾದ ಚೇಟಿಗೆ ಏನೋ ತೋಚಿತು. ಆಕೆ ಮಹಾರಾಣಿಯವರ ಬಳಿಯಲ್ಲಿ ಬಂದು ''ತಾಯೇ, ತಾವೇನೋ ದೇಹತ್ಯಾಗ ಮಾಡುತ್ತೀರಿ. ಆದರೆ ನಂತರ ತಮ್ಮ ಕುವರಿಯ ಗತಿ ಏನಾದೀತೆಂದು ಯೋಚಿಸಿದ್ದೀರಾ? ಇದರಿಂದ ಆ ದುರುಳನ ದಾರಿ ಇನ್ನೂ ಸುಸೂತ್ರವಾಗುವುದಿಲ್ಲವೆ?'' ಎಂದು ಕೈಮುಗಿದು ಹೇಳಿದಳು. ಹೌದು, ಇವಳ ಮಾತು ನಿಜ.

ತಾವೇಕೆ ಇದನ್ನು ಯೋಚಿಸಲೇ ಇಲ್ಲ. ಮಹಾರಾಣಿಯವರು ತಮ್ಮ ನಿರ್ಧಾರವನ್ನು ಬದಲಿಸಿದರು. ಎಲ್ಲರಿಗೂ ಸಂತೋಷ ವಾಯಿತು.

ಮಹಾರಾಣಿಯವರು ತಮ್ಮ ಮಗಳೊಂದಿಗೆ ಮಂಚದ ಮೇಲೆ ಮಲಗಿದ್ದಾರೆ. ನೊಂದು-ಬೆಂದ ಜೀವಕ್ಕೆ ಆಗ ತಾನೇ ಜೊಂಪುಹತ್ತಿದೆ. ಕನಸೊ-ನನಸೋ ತಿಳಿಯದು. ಆಕೆಯ ಎದುರಿಗೆ ಭಸ್ಮ – ರುದ್ರಾಕ್ಷಿಮಾಲಾಧರನಾದ ಜಂಗಮನೋರ್ವನು ನಿಂತು ''ಅಮ್ಮಾ, ತವಕ ಪಡಬೇಡ. ಎಲ್ಲವೂ ಮಂಗಳಮಯವಾಗು ವುದು. ನಂಜುಂಡೇಶ್ವರನ ಹಾಗೂ ಭಗವತಿ ಚಾಮುಂಡಾಂಬಿಕೆಯ ಕೃಪೆ ನಿನ್ನ ಮೇಲಾಗಿದೆ. ದ್ವಾರಕಾನಗರಿಯ ಕಡೆಯಿಂದ ರಾಜಪುತ್ರ ರೀರ್ವರು ದೇವಿಯ ಆಜ್ಞಾನುಸಾರ ವಿಂಧ್ಯ ಪರ್ವತವನ್ನು ದಾಟಿ ಇಲ್ಲಿಗೆ ಬಂದು, ದೊಡ್ಡಕೆರೆಯ ಕಟ್ಟೆಯ ಮೇಲಿರುವ ಕೋಟಭೈರವಾಲಯದಲ್ಲಿ ತಂಗಿದ್ದಾರೆ. ಅವರನ್ನು ಕರೆಸಿ ಅವರಿಗೆ ನಿನ್ನ ವಿಚಾರವನ್ನು ತಿಳಿಸು. ಅವರು ಮಾರನಾಯಕನನ್ನು ಸದೆ ಬಡಿಯುತ್ತಾರೆ'' ಎಂದು ಹೇಳಿದನು.

ಮಹಾರಾಣಿಯವರು ಥಟ್ಟನೆ ಎಚ್ಚೆತ್ತರು. ಬೆಳಗಾಗುತ್ತಲೇ ಮಿಂದು ಮಡಿಯುಟ್ಟು ಚಾಮುಂಡಾಂಬಿಕೆಯನ್ನು ಪೂಜಿಸಿ ಜಂಗಮಾರ್ಯ ನಿಗೆ ಹೇಳಿ ಕಳುಹಿಸಿ ರಾಜಪುತ್ರರನ್ನು ಕರೆತರಲು ಹೇಳಿಕಳಿಸಿದರು. ಜಂಗಮಾರ್ಯನು ಕರಣಿಕ ರೊಂದಿಗೆ ಭೈರವಾಲಯಕ್ಕೆ ಹೋದನು.

ಹೌದು, ಅಲ್ಲಿ ತೇಜಸ್ವಿಗಳೂ, ದೃಢ ಕಾಯರೂ, ವೀರರೂ ಆದ ಕ್ಷತ್ರಿಯ ಕುಮಾರ ರೀರ್ವರಿದ್ದರು. ಅವರೇ ಯದುರಾಯ–ಕೃಷ್ಣರಾಯರು. ಅವರೂ ಸಹಾ ಕಾಲಗತಿ ಯಿಂದ ದೇಶಾಂತರವಾಸಿಗಳಾಗಿ ತಮ್ಮ ಅದೃಷ್ಟವನ್ನರಸುತ್ತಾ ದೂರದ ದ್ವಾರಕೆಯಿಂದ ಇಲ್ಲಿಗೆ ಬಂದಿದ್ದರು. ಅವರಿಗೂ ವಿಂಧ್ಯಾ ವಾಸಿನಿಯ ಅಪ್ಪಣೆಯಾಗಿತ್ತು. ಭಗವತಿ ಚಾಮುಂಡಾಂಬಿಕೆಯ ದರ್ಶನ ಮಾಡಿಕೊಂಡು ಅವಳ ಆಣತಿಯಂತೆ ಈ ದೇವಾಲಯದಲ್ಲಿ ತಂಗಿದ್ದರು.

ಹೀಗಿರುವಾಗಲೇ ಬಂದ ಜಂಗಮಾರ್ಯ ರನ್ನೂ ಕರಣಿಕರನ್ನೂ ನೋಡಿ ಅವರಿಗೆ ಆಶ್ಚರ್ಯವೂ ಸಂಭ್ರಮವೂ ಆಯಿತು. ಅವರು ಜಂಗಮಾರ್ಯರಿಂದ ಸಕಲ ಸಂಗತಿಗಳನ್ನೂ ಅರಿತು ಒಡನೆಯೇ ಆ ನೀಚನಿಂದ ರಾಜ್ಯವನ್ನು ಮುಕ್ತಿಗೊಳಿಸುತ್ತೇವೆಂದು ಪ್ರತಿಜ್ಞೆ ಮಾಡಿ ಅರಮನೆಗೆ ಬಂದರು.

ಮಹಾರಾಣಿಯವರು ತೆರೆಯ ಮರೆಯಲ್ಲಿ ಕುಳಿತು ಆ ರಾಜಪುತ್ರರನ್ನು ನೋಡಿ ಸಂತೋಷ ಗೊಂಡು ಅವರಿಗೆ ಎಲ್ಲಾ ವಿಷಯವನ್ನೂ ತಿಳಿಸಿ ದರು. ರಾಜಪುತ್ರರು ಆಗಲೇ ತಮ್ಮ ಖಡ್ಗ ಗಳನ್ನು ಝಳಪಿಸಲು, ದೇವಾಜಮ್ಮಣ್ಣಿಯವರು ಇಡೀ ಸೈನ್ಯವೇ ಮಾರನಾಯಕನ ವಶದಲ್ಲಿ ರುವುದರಿಂದ ಅವರಿಬ್ಬರೇ ಅದನ್ನು ಎದುರಿ ಸುವುದು ಬೇಡವೆಂದು ಒಂದು ಉಪಾಯವನ್ನು ಹೇಳಿಕೊಟ್ಟರು.

ಮಾರನಾಯಕನು ಮೂರು ದಿನಗಳ ಗಡು ವನ್ನು ಕೊಟ್ಟಿದ್ದನು. ಅದೂ ಅವನಿಗೆ ಹೆಚ್ಚೆಂದು ತೋರಿತು. ದುರಾಶಾಪಿಶಾಚಿಯಾದ ಆ ಧೂರ್ತನು ಎರಡನೆಯ ದಿನ ಸಂಜೆಯೇ ತನ್ನ ಸೈನ್ಯವೆಲ್ಲಾ ಅರಮನೆಯನ್ನು ಮುತ್ತಬೇಕೆಂದು ಮಂತ್ರಾಲೋಚನೆ ನಡೆಸುತ್ತಿರುವಂತೆಯೇ ಅರಮನೆಯ ಕಡೆಯಿಂದ ಓಲೆಕಾರನು ಒಂದು ಓಲೆಯನ್ನು ತಂದುಕೊಟ್ಟನು. ಅದರಲ್ಲಿ ಮಹಾರಾಣಿಯವರು ತಮ್ಮ ಪುತ್ರಿಯಾದ ಚಿಕ್ಕದೇವೀರಮ್ಮಣ್ಣಿಯನ್ನು ತನಗೆ ವಿವಾಹ ಮಾಡಿಕೊಡುವುದಾಗಿಯೂ ಅವನು ಮಿತ ಪರಿವಾರದೊಡನೆ ಕೋಟೆಯ ಬಳಿ ಬರ ಬೇಕೆಂತಲೂ ಅಲ್ಲಿ ಅವನನ್ನು ಎದುರು ಗೊಳ್ಳುವರೆಂತಲೂ ಒಕ್ಕಣೆಯಿತ್ತು. ನಾಯಕನ ಆನಂದಕ್ಕೆ ಪಾರವೇ ಇಲ್ಲದಂತಾಯ್ತು. ಆ ಪತ್ರಕ್ಕೆ ರಾಜಮುದ್ರೆಯೂ ಇಲ್ಲ. ರಾಣಿಯವರ ಸಹಿಯೂ ಇದ್ದಂತಿಲ್ಲ ಎಂದು ಅವನ ಸಲಹೆಗಾರ ರಾದ ವೆಂಕಯ್ಯನವರು ಹೇಳಿದ್ದನ್ನು ಗಮನಕ್ಕೇ ತಂದುಕೊಳ್ಳದೆ, ಮಿತ ಪರಿವಾರದೊಡನೆ ಅರಮನೆಗೆ ಹೊರಟನು.

ಇತ್ತ ಯದುರಾಯರೂ ಕೃಷ್ಣರಾಯರೂ, ಅರಮನೆಯ ಕಾವಲು ಸೈನಿಕರ ಮುಖ್ಯಸ್ಥ

ರನ್ನೆಲ್ಲಾ ಕರೆಸಿ, ಕೋಟೆಯ ಆಯಕಟ್ಟಿನ ಸ್ಥಳಗಳಲ್ಲಿ ನಂಬುಗೆಯ ಸೈನಿಕರನ್ನಿರಿಸಿ, ಅರಮನೆಯ ಸಮಸ್ತ ಭಂಡಾರವನ್ನೂ ಮಹಾರಾಣಿ–ಯುವರಾಣಿಯರನ್ನು ಗುಪ್ತಸ್ಥಳಕ್ಕೆ ಕಳುಹಿಸಿ, ಮಾರನಾಯಕನನ್ನೆದುರಿಸಲು ಸಿದ್ಧರಾಗಿದ್ದರು.

ಮಾರನಾಯಕನು ರಾಜಠೀವಿಯಿಂದ ಕೋಟೆಯ ಒಳಗೆ ನುಗ್ಗಿಬಂದನು. ಎಲ್ಲವೂ ಶಾಂತವಾಗಿತ್ತು. ಇನ್ನೇನು ತನ್ನನ್ನು ಎದುರುಗೊಳ್ಳುತ್ತಾರೆಂದಿರುವಾಗಲೇ ಹತ್ತಾರು ಕಡೆಯಿಂದ ಬಾಣಗಳ ಸುರಿಮಳೆಯಾಗತೊಡಗಿತು. ಕೋಟೆಯ ಹೆಬ್ಬಾಗಿಲು ದಢಾರೆಂದು ಮುಚ್ಚಿಕೊಂಡಿತು. ಎದುರಿಗೇ ಯದುರಾಯ-ಕೃಷ್ಣರಾಯರಿದ್ದರು. ಘೋರವಾದ ಕಾಳಗ ನಡೆಯಿತು. ಯದುರಾಯರ ಚಂದ್ರಾಯುಧವು ಮಾರನಾಯಕನ ಶಿರಸ್ಸನ್ನು ಛೇದಿಸಿತು.

ಮೈಸೂರು ಮಾರನಾಯಕನಿಂದ ಮುಕ್ತಿಗೊಂಡಿತು. ಮಹಾರಾಣಿಯವರ ಸಂತೋಷಕ್ಕೆ ಪಾರವಿಲ್ಲವಾಯಿತು. ಅವರು ತಮ್ಮನ್ನು ರಕ್ಷಿಸಿದ ನಂಜುಂಡೇಶ್ವರನಿಗೂ ಚಾಮುಂಡಾಂಬಿಕೆಗೂ ಅನೇಕ ಸೇವೆಗಳನ್ನು ನಡೆಸಿದರು.

ಮನೆ ಮನೆಯಲ್ಲಿ ವಿಜಯೋತ್ಸವವನ್ನು ಆಚರಿಸಲಾಯ್ತು. ಮಹಾರಾಣಿಯವರು ತಮ್ಮ ಮಗಳಾದ ಚಿಕ್ಕದೇವೀರಮ್ಮಣ್ಣಿಯವರನ್ನು ಯದುರಾಯರಿಗೆ ಶಾಸ್ತ್ರೋಕ್ತವಾಗಿ ವಿವಾಹ ಮಾಡಿಕೊಟ್ಟರು. ನಂತರ ತಮ್ಮ ಮಾತಿನಂತೆ ವಿವಾಹ ನಡೆದ ಸ್ವಲ್ಪ ದಿನಗಳಲ್ಲೇ (ಅಂದರೆ ಶಾಲಿವಾಹನ ಶಕ 1322 ಅಂದರೆ ಕ್ರಿ.ಶ. 1399 ಪ್ರಮಾಥಿ ಸಂವತ್ಸರ ವೈಶಾಖ ಶುದ್ಧ ಪಂಚಮಿಯ ದಿನ) ಶುಭ ಮುಹೂರ್ತದಲ್ಲಿ ಯದುರಾಯರನ್ನೂ ಚಿಕ್ಕದೇವೀರಮ್ಮಣ್ಣಿಯವರನ್ನೂ ತಮಗೆ ಕುಲಕ್ರಮಾನುಗತವಾಗಿ ಬಂದಿದ್ದ ಸಿಂಹಾಸನದಲ್ಲಿ ಕುಳ್ಳಿರಿಸಿ, ಮುದ್ರೆಯುಂಗುರವನ್ನೊಪ್ಪಿಸಿ, ಶಾಸ್ತ್ರೋಕ್ತವಾಗಿ ಪಟ್ಟಾಭಿಷೇಕ ಮಾಡಿಸಿದರು. ಅಂದಿನಿಂದ ಯದುರಾಯರು ಮೈಸೂರು ರಾಜವಂಶದ ಮೂಲಪುರುಷರಾಗಿ ಪ್ರಜೆಗಳನ್ನು ಧರ್ಮದಿಂದ ಪಾಲಿಸತೊಡಗಿದರು. ತಮ್ಮ ಎಲ್ಲಾ ಕೆಲಸದಲ್ಲೂ ಅನುಕೂಲಕರರಾಗಿದ್ದ ಕರಣಕರ ಅಭಿಲಾಷೆಯಂತೆ ಆ ಮನೆತನಕ್ಕೆ ಅರಮನೆಯ ರಾಯಸವೃತ್ತಿಯನ್ನು ಅನುಗ್ರಹಿಸಿದರು. ಜಂಗಮಾರ್ಯರ ಇಚ್ಛೆಯಂತೆ ಅವರ ಕಾಷಾಯ ವಸ್ತ್ರವನ್ನು ತಮ್ಮ ಧ್ವಜಪಟದಲ್ಲಳವಡಿಸಿಕೊಂಡು ತಮ್ಮ ನಾಮಧೇಯದೊಡನೆ ಅವರ ಗುರುತಾಗಿ 'ಒಡೆಯರು' ಎಂಬ ಪದವನ್ನು ಸೇರಿಸಿಕೊಂಡರು. ತಮ್ಮ ತಮ್ಮಂದಿರಾದ ಕೃಷ್ಣರಾಯರಿಗೆ ಉತ್ತಮ ವಂಶದವಳಾದ ಅನುರೂಪಳಾದ ಕನ್ಯೆಯೊಡನೆ ವಿವಾಹ ಮಾಡಿಸಿ ಅವರಿಗೆ ಕಾರುಗಹಳ್ಳಿಯ ದೊರೆತನವನ್ನು ಕೊಟ್ಟರು. ಯದುರಾಯರ ವಂಶ ಮುಂದೆ ಅವರ ಮಕ್ಕಳಾದ ಹಿರಿಯಬೆಟ್ಟದ ಚಾಮರಾಜ ಮತ್ತು ಕಿರಿಯಚಾಮರಾಜರಿಂದ ಮುಂದುವರೆಯಿತು. ●

## ನೆನಪು

ಮಳೆಗಾಲದಲ್ಲಿ
ಕಪ್ಪೆಯ
ವಟಗುಟ್ಟುವಿಕೆ
ಕೇಳಿದಾಗ
ಅರ್ಧಾಂಗಿಯ
ನೆನಪು.

● ಸಹನಾ ಕಾಂತಬೈಲು



## ಹೆಣ್ಣು

ಪುಟ ಪುಟದ
ಹಾಳೆ ಮಗುಚಿದಂತೆ
ಏನಿರಬಹುದೆಂಬ
ಕುತೂಹಲ ಭರಿತ
ಪತ್ತೇದಾರಿ
ಕಾದಂಬರಿ.

● 'ಸುಜಿಕುರ್ಯ'

# ತಿಂಗಳ ಬಹುಮಾನಿತ ವ್ಯಂಗ್ಯಚಿತ್ರ









**ಅಚ್ಚು ಮೆಚ್ಚು**

# ಆಸೆ ಸಂಕಲ್ಪಗಳ ಅನ್ಯೋನ್ಯತೆ

*ಪ್ರೊ. ಕೆ.ಎಸ್. ನಿಸಾರ್ ಅಹಮದ್*



ಬದುಕಿನಲ್ಲಿ ನಮಗೆ ಯಾವುದು ಅಚ್ಚುಮೆಚ್ಚು? ನಮ್ಮ ಇಷ್ಟಾಭಿರುಚಿಗೆ, ಸುಖ ಸಮಾಧಾನಗಳಿಗೆ ನೀರೆರೆಯುವಂಥದ್ದೋ? ನಮ್ಮ ಹಿತ, ಒಳಿತಿಗೆ ಇಂಧನವಾಗತಕ್ಕದ್ದೋ? ಅಪರೂಪಕ್ಕೆ ಇವೆರಡೂ ಏಕಾಶಯವುಳ್ಳದ್ದಾಗಿರಬಹುದು; ಒಂದೇ ಆಗಿರಲೂಬಹುದು: ಮೋಡ– ಮಳೆಯಂತೆ; ಮಂಜುಗಡ್ಡೆ – ನೀರಿನಂತೆ. ಆದರೆ ಹಲವು ಸಂದರ್ಭಗಳಲ್ಲಿ ಸಂತೋಷಕಾರಕ ಮತ್ತು ಹಿತ ಪ್ರದಾಯಕವಾದವು ರೈಲಿನ ಹಳಿಗಳಂತೆ ಸಮಾನಾಂತರ ಸಾಗಬಹುದು. ಏನೇ ಇರಲಿ, ಇವೆರಡೂ ನಮ್ಮ ಜೀವಿತಕ್ಕೆ ಅಗತ್ಯವಾಗಿರುವಂಥವೇ. ಬದುಕಿನ ದಿನಂಪ್ರತಿಯ ವಾಸ್ತವತೆಯ ಇಬ್ಬದಿಗಳಂತೆ ಅನಿವಾರ್ಯವಾದವುಗಳೇ– ಶ್ವಾಸಕೋಶದಂತೆ. ಒಂದು ಹಾಸಾದರೆ, ಮತ್ತೊಂದು ಹೊಕ್ಕು.

ನಮಗೆ ಅಚ್ಚುಮೆಚ್ಚಾದ ವ್ಯಕ್ತಿಗಳು, ವಸ್ತುಗಳು, ಸಂಗತಿಗಳು, ಆಸಕ್ತಿಗಳು ಒಂದೆ? ಎರಡೆ? ಒಂದು ಕಾಲಾವಧಿಯಲ್ಲಿ, ವಯೋಮಾನದ ಒಂದು ಮಜಲಿನಲ್ಲಿ ನಮ್ಮ ಖಾಯಿಷು ಇಷ್ಟಗಳಿಗೆ ಪಾತ್ರವಾದದ್ದು, ಸರ್ವಸ್ವವೆನ್ನಿಸಿದ್ದು ಸದಾಕಾಲಕ್ಕೂ ಅದೇ ಗಾಢತೆಯಲ್ಲಿ ಮನಸ್ಸನ್ನು ಸೆರೆಹಿಡಿದಿಡಲು ಶಕ್ಯವೆ? ನಾವು ಬೆಳೆದ ಹಾಗೆ, ನಮ್ಮ ಅನುಭವದ ಕ್ಷಿತಿಜ ವಿಸ್ತಾರಗೊಂಡ ಹಾಗೆ ಹೊಸ ಹೊಸ ಮನುಷ್ಯರು, ವಸ್ತುಗಳು, ವಿಷಯ, ಕಾಳಜಿಗಳು ನಮ್ಮ ಜೀವನವನ್ನು ಪ್ರವೇಶಿಸುತ್ತಲೇ ಇರುತ್ತವೆ. ಹಿಂದಿನವು ಸಾಕಾಗದೆ, ಇಲ್ಲವೆ ಬೇಕಾಗದೆ ಹೊಸ ಕಳಕಳಿಗಳು ನಮ್ಮಲ್ಲಿ ಮನೆಮಾಡುತ್ತವೆ. ನಮಗೆ ನೇರವಾಗಿ ಅಥವಾ ಪರೋಕ್ಷವಾಗಿ ಸಂಬಂಧಪಟ್ಟ, ಸಂಬಂಧಿಸದ ಲೋಕ ವಿಶೇಷಗಳ ಬಗ್ಗೆ ನಮ್ಮ ಅಕ್ಕರಾಸ್ಥೆ ಅಧಿಕವಾಗುತ್ತದೆ.

ಈ ಅಚ್ಚುಮೆಚ್ಚು ಎನ್ನುವುದಾದರೂ ಏನು? ಆಸೆಯ ಮತ್ತೊಂದು ಚಹರೆಯಷ್ಟೆ. ಮನುಷ್ಯನ ಆಸೆಗಳೂ ಅಪಾರ, ಅಗಣಿತ. ಅವು ಅಲೆಗಳಂತೆ: ಚಂಚಲ ಹಾಗೂ ಅಲ್ಪಾಯುಷಿಗಳಾದರೂ ಅವುಗಳ ಪರಂಪರೆ ಅಬಾಧ, ಅವಿಚ್ಛಿನ್ನ. ಅವು ನಮ್ಮ ಜೀವನಯಾತ್ರೆಯ ಆದ್ಯಂತ ಕೈಕೈ ಮಿಲಾಯಿಸಿ ಜೊತೆಗೆ ಬರುವಂಥವು; ದನಿಗೂಡಿಸಿ, ಹುರಿದುಂಬಿಸುತ್ತ ಮುನ್ನಡೆಯುವಂಥವು. ಆಸೆಗೆ ಎರಡು ಪಕ್ಕಗಳಿವೆ: ಈಡೇರುವುದೆಂಬ ಭರವಸೆ; ಈಡೇರುವುದೋ ಇಲ್ಲವೋ ಎಂಬ ಅನುಮಾನ. ನಮ್ಮ ಬಾಳ್ವೆಯ ಹರಿಗೋಲು ತೇಲಿರುವುದು ಇವೆರಡರ ಹುಟ್ಟಿನಿಂದ. ಒಂದು ನಮ್ಮನ್ನು ತುಂಬು ಉಮೇದಿನಿಂದ ಮುಂದೂಡಿದರೆ, ಮತ್ತೊಂದು ಅದಕ್ಕೆ ಕಡಾಣಿ ಹಾಕಿ ಸಾಧಕ ಬಾಧಕಗಳ, ಉಚಿತಾನುಚಿತ ವಿವೇಚನೆಯ ದಿಕ್ಕಿನಲ್ಲಿ ನಮ್ಮ ಮನಸ್ಸನ್ನು ಹರಿಸುವಂಥದ್ದು.

ಆಸೆ ದುಃಖಕ್ಕೆ ಮೂಲ. ನಿಜವೇ. ಹಿರಿಯರ ಅನುಭವ– ಪರೀಕ್ಷಿತ ಭಾಷಿತ. ಆಸೆ ಅನರ್ಥಕ್ಕೆ ಆಹ್ವಾನಪತ್ರ. ಅಧ್ವಾನ ಅನಾಹುತಗಳಿಗೆ ಅಹವಾಲು. ಆದರೆ ಯಾವಾಗ? ಆಸೆ ಔಚಿತ್ಯದ ಲಕ್ಷ್ಮಣಗೆರೆ ಹಾಯ್ದಾಗ; ಅರಾಜಕ, ಅನಂಕುಶವಾದಾಗ. ಆಗ ಗತಿಗೇಡು ಕಟ್ಟಿಟ್ಟ ಬುತ್ತಿ. ಆದರೆ ಆಸೆಯಿಲ್ಲದೆ ಮನುಷ್ಯ ಅರೆಚಣವಾದರೂ ಉಸಿರಾಡಲು ಶಕ್ಯವೆ? ಕೊನೆಗಾಲದ ತನಕ ಜೀವಿತದ ಆಸಕ್ತಿ, ಪ್ರೀತಿಗಳಿಗೆ ಆಸೆಯೇ ಆಮ್ಲಜನಕ. ಬಾಳ್ವೆಯ ಹಸುಳೆಗೆ ಆಸೆ ಎದೆಹಾಲು; ಕಣ್ಣಿಗೆ ರೆಪ್ಪೆ, ನದಿಗೆ ನೆರೆ, ಕಡಲಿಗೆ ತೆರೆ ಹೇಗೋ ಹಾಗೆ

**ಕನ್ನಡದ ಸುಪ್ರಸಿದ್ಧ ಕವಿ ಪ್ರೊ। ನಿಸಾರ್ ಅಹಮದ್ ಈಚೆಗೆ ವೈಚಾರಿಕ ಲೇಖನಗಳನ್ನು ಹೆಚ್ಚು ಬರೆಯುತ್ತಿದ್ದಾರೆ. ಈಗಾಗಲೇ ಎರಡು ಇಂಥ ಸಂಕಲನಗಳು ಪ್ರಕಟವಾಗಿ ಎಲ್ಲರ ಗಮನ ಸೆಳೆದಿವೆ.**

**ಪ್ರೊ। ನಿಸಾರ್ ಅಹಮದ್ ಅವರು ತುಷಾರ ಓದುಗರಿಗಾಗಿ ತಿಂಗಳಿಗೊಂದು ವೈಚಾರಿಕ ಲೇಖನ ವನ್ನು ಬರೆಯಲಿದ್ದಾರೆ. ಇದು ಮೊದಲ ಲೇಖನ. ನಿಸಾರ್ ಅವರ ಬರೆವಣಿಗೆಯಲ್ಲಿ ಹೊಸ ಪದ ಪ್ರಯೋಗ, ಶಬ್ದಸೃಷ್ಟಿ ಎದ್ದು ಕಾಣುವಂಥದು.**

**ತುಷಾರಪ್ರಿಯರಿಗೆ ಈ ಲೇಖನ ಮಾಲೆ ಮೆಚ್ಚುಗೆಯಾಗುವುದೆಂದು ನಂಬಿದ್ದೇವೆ.**

ಜೀವನಕ್ಕೆ ಆಸೆ.

ನಮ್ಮಲ್ಲಿ ಒಂದಕ್ಕೊಂದು ಸಂಬಂಧವಿಲ್ಲದ, ಹೊಂದಾವಣೆ ಕಾಣದ, ಕೆಲವೊಮ್ಮೆ ಎಣ್ಣೆ ಸೀಗೆ ಕಾಯಿಯಂತೆ ವಿರೋಧಿಯಾದ ಅಸಂಖ್ಯ ಆಸೆಗಳು ಬಿಡುಬೀಸಾಗಿ ಠಳಾಯಿಸುವುದುಂಟು. ಇವುಗಳಲ್ಲಿ ಸಫಲತೆಯ ಹಂತ ಮುಟ್ಟುವುದು ಎಲ್ಲೋ ಕೆಲವು. ಶುಕ್ಲಾಣುಕೋಟಿಯಲ್ಲಿ ಗರ್ಭಕೋಶಕ್ಕೆ ತಲುಪುವುದು ಅದೃಷ್ಟಶಾಲಿಯಾದ ಯಾವುದೋ ಒಂದು ಮಾತ್ರ ಅಲ್ಲವೆ? ಕೈಗೂಡದ ಆಸೆಗಳು ಕಲ್ಪನೆ ಇಲ್ಲವೆ ಮನೋವಿಭ್ರಮೆಗಳಾಗಿ ಕೊನೆ ಕಾಣುತ್ತವೆ. ಅಥವಾ ಮನಸ್ಸಿನ ಗುಹ್ಯ ಗುಹಾಂತರ ದಲ್ಲಿ ಇಲ್ಲಣ, ಬಾವಲಿಗಳಂತೆ ಅನುಗಾಲ ಜೋತುಬಿದ್ದಿರುತ್ತವೆ– ಪ್ರಾರಬ್ಧದಂತೆ.

ಆಸೆ ಕವನದ ಬಿಡಿಸಾಲಿನ ಹಾಗೆ; ತನಗೆ ತಾನೇ ಅಸಂಪೂರ್ಣ, ಅರ್ಥಹೀನ. ಆ ಸಾಲು ಮತ್ತೊಂದು ಪಂಕ್ತಿಯ ಜೊತೆಗೆ ಪ್ರಾಸ ಗೊಂಡಾಗ ಅದಕ್ಕೆ ಶೋಭೆ, ಚಾಲನೆ; ಅರ್ಥವಂತಿಕೆ, ಪೂರ್ಣತ್ವಗಳ ಸುಯೋಗ. ಆ ಮತ್ತೊಂದು ಪಂಕ್ತಿ ಯಾವುದು? ಅದೇ ಸಂಕಲ್ಪ. ಮಾಮೂಲು ಮಾತಿನಲ್ಲಿ 'ಮನಸ್ಸು ಮಾಡುವುದು'. ಆಸೆಯೆಂಬ ರಕ್ತಮಾಂಸದ ನಿರಾಕಾರದ ಮೊತ್ತಕ್ಕೆ ಸಂಕಲ್ಪದ ಎಲುಬು ಗೂಡಿನ ಗಟ್ಟಿತನ, ಇಂಬು, ಸಾಹಚರ್ಯ ಬೇಕೇ ಬೇಕು. ಆಸೆಗೆ ಸಂಕಲ್ಪದಿಂದ ಇತೋಪ್ಯಧಿಕತೆ. ಹಾಗಿಲ್ಲವೋ ಆಸೆ ಅಮೂರ್ತ, ಶಾಪಗ್ರಸ್ಥ. ಅದಕ್ಕೆ ಈಡೇರಿಕೆಯ ಮುಕ್ತಿಯಿಲ್ಲ; ಸಾಫಲ್ಯ ದೂರದ ಕನಸು.

ತತ್ತಿಗೆ ತಾಯಿಹಕ್ಕಿಯ ಕಾವಿನ ಥರ, ಬಿತ್ತಕ್ಕೆ ಮಣ್ಣಿನ ಸಾರದ ಥರ ಆಸೆಗೆ ಸಂಕಲ್ಪ ಬಲ. ಆಸೆಗೆ ರೆಕ್ಕೆ ಹೊಮ್ಮಿಸಿ ಚಿತ್ತದ ನಿಗೂಢ ಗೂಡಿನಾಚೆಯ ವಿಹಾರಕ್ಕೆ ಸಜ್ಜಾಗಿಸುವುದು ಸಂಕಲ್ಪ. ಆಸೆ ಯನ್ನು ಎತ್ತರಕ್ಕೇರಿಸಿ ಹಾರಿಸುವ ಶ್ರದ್ಧೆ, ತಾಳ್ಮೆ, ತದೇಕ ಮನಸ್ಕತೆಗಳ ಬಲಿಷ್ಠಗರಿಗಳಿಂದ ರಚಿತ ವಾದದ್ದು ಸಂಕಲ್ಪರೂಪದ ರೆಕ್ಕೆ. ಮುಪ್ಪುರಿ ಗೊಂಡ ಈ ಗುಣಗಳು, ಓಪ್ಪೆನೇರಳೆಯ ಎಲೆ ಯನ್ನು ನಯನಮೋಹಕ ನಯರೇಷ್ಮೆಯಾಗಿ ಮಾರ್ಪಡಿಸುವ ಪವಾಡ ಎಸಗಬಲ್ಲವು.

ಆಶಾಪೂರ್ತಿಯ ದಿಶೆಯಲ್ಲಿ ನಾವು ಮಾಡುವ ಸುಸ್ಥಿರ ಮನಸ್ಸಂಕಲ್ಪಕ್ಕೂ ನಮ್ಮ ಅಳವಿಗೂ ತಾಳೆಯಿರಬೇಕು. ಅವೆರಡರ ನಡುವೆ ನಿಕಟತ್ವ ಸ್ಥಾಪಿತವಾಗಬೇಕು. ನಮ್ಮ ಶಕ್ತಿ, ಖುವ್ವತ್ತುಗಳನ್ನು ದಾಟಿದ ಸಂಕಲ್ಪ ಕ್ರಿಯಾ ವಿಹೀನ. ಹಸುಳೆಯ ಹೆಗಲಿಗೆ ಹೊರಿಸಿದ ನೇಗಿಲಿ ನಂತೆ ನಿರರ್ಥಕ, ಅನರ್ಥಕರ. ನಮ್ಮ ಊರಿನ ಕೆರೆ ಕುಂಟೆಗಳಲ್ಲೂ ಬಾವಿ ಕಲ್ಯಾಣಿಗಳಲ್ಲೂ ಕೈಕಾಲು ಬಡಿಯಲು ಬೇಕಾಗುವ ದೈಹಿಕ ಬಲ, ಧಾರಣ ಸಾಮರ್ಥ್ಯ ಬ್ರಿಟಿಷ್ ಕಡಲ್ಗಾಲುವೆ ಯನ್ನು ಈಜಿ ದಾಟಲು ಸಾಕಾಗದು. ಸದು ದ್ದೇಶಪೂರಿತ ಆಸೆಗಳು ನಮ್ಮಲ್ಲಿದ್ದೂ ನಮ್ಮ ಮನೋನಿಶ್ಚಯ ಹೆಬ್ಬಂಡೆಯಂತಿದ್ದೂ ನಮ್ಮ ಬಹುತೇಕ ಆಶಾಭಂಗ, ಭಗ್ನ ಮನೋರಥಗಳಿಗೆ ಕಾರಣ, ಶಾರೀರಿಕ ಮತ್ತು ಅಂತಃಶಕ್ತಿಗಳ ಮಿತಿಯ ಅಂದಾಜು ನಮಗಿಲ್ಲದಿರುವುದು.

ಸಂಕಲ್ಪವಿಲ್ಲದೆ ಆಸೆ ಕೈಗೂಡದು. ಆದರೆ ಸಂಕಲ್ಪವಿದ್ದ ಮಾತ್ರಕ್ಕೆ ಎಲ್ಲ ಆಸೆಗಳೂ ಹಣ್ಣೊಗ್ಗಳುತ್ತವೆಂಬ ಖಾತರಿಯಿಲ್ಲ. ಬೀಜಕ್ಕೆ ತನ್ನ ಸನಿಹದ ಮಣ್ಣಿನ ಸತ್ವದ ಸಾಕುಮಡಿಲು ಹೇಗೆ ಅಗತ್ಯವೊ ಹಾಗೆಯೇ ಎಟುಕಿಗೆ ನಿಲುಕದ ಮುಗಿಲಿನ ಕರುಣೆಯೂ ಅನಿವಾರ್ಯ. ಆ ಕರುಣೆ ಮನುಷ್ಯಾತೀತ; 'ಪರಾವಲಂಬಿ'.

ಆಸೆಗಳು ಅಂತರಂಗದ ಆಗಸದಲ್ಲಿ ತುಂಡು ಮುಗಿಲುಗಳಂತೆ ಚದುರಿ ಹಿಂಜಿ ಹತ್ತಿಯಾಗಿ ಹರಡಿದ್ದಾಗ ಸಂಕಲ್ಪಬಲದ ಹವೆ ಅವನ್ನು ಒಗ್ಗೂಡಿಸಿ, ದಟ್ಟೈಸಿ ಪ್ರಚಲನೆ ನೀಡುತ್ತದೆ. ಕ್ರಮೇಣ ಶುಭ ಮುಹೂರ್ತ ಒದಗಿ ಬಂದಾಗ ಗಿರಿಶಿಖರ ಎದುರಾಗಿ, ಆಶಾಮೇಘ ದ್ರವಿಸಿ, ಫಲವತ್ಕಾರಿ ವರ್ಷಧಾರೆಯಾಗಿ ಭೂಮಿಯ ವಾಸ್ತವ ಭೂಮಿಕೆಗಿಳಿದು ಕೃತಾರ್ಥಗೊಳ್ಳುತ್ತದೆ. ಮೋಡಗಳ ಜಾಡಿನಲ್ಲಿ ಈ ಗಿರಿಶಿಖರಿಯ ಸಕಾಲಿಕ ಒದಗಣೆ ಸಾಧ್ಯವಾಗುವುದು ಆಕಸ್ಮಿಕವೆನ್ನಿಸುವ ಮರ್ತ್ಯಾತೀತ ಶಕ್ತಿಯ ಕೃಪೆಯಿಂದ; ನರನ ಅರಿವಿನ ಅಳವಿಗೆ ಮೀಟಿದ ನಿಯತಿಯಿಂದ.

ಹೀಗೆ, ಅದೃಶ್ಯದ ಕೈವಾಡವಿಲ್ಲದೆ ಸಚಂಚಲ ಆಸೆಯ ಮತ್ತು ಅವಿಚಲ ಸಂಕಲ್ಪದ ಸಂಯೋಗ ಘಟಿಸದು; ದಾಂಪತ್ಯ ಏರ್ಪಡದು. ವಿದ್ಯುತ್ತು ಮತ್ತು ತಂತಿಗಳ ಸಾಹಚರ್ಯದಂತೆ ಅವುಗಳ ನಡುವಣ ನಂಟಸ್ತಿಕೆ. ಸಂಕಲ್ಪ ಕೋಣೆಯ ಸ್ವಿಚ್ಚಿನಂತೆ. ಅದಿಲ್ಲದಿದ್ದರೆ ಆಶಾದೀಪ್ತಿಯ ಕಾಂತಿ, ಕಣ್‌ಕೋರೈಕೆಯಿಲ್ಲ. ಹಾಗೆಂದ ಮಾತ್ರಕ್ಕೆ ಮತ್ತೆಲ್ಲೋ ಇರುವ ವಿದ್ಯುಜ್ಜನಕ ಸ್ಥಾವರದ ಮಹಿಮೆಯನ್ನು ಮರೆಯತಕ್ಕದ್ದಲ್ಲ. ಆಸೆ-ಸಂಕಲ್ಪಗಳ ಸಾಯುಜ್ಯಕ್ಕೆ ಈ ಮೂಲಾಕರ ಮಾತೃಪ್ರಾಯ.

ಮಾನವ ಜೀವಿತಾವಧಿಯಲ್ಲಿ, ಆಸೆ ಸಂಕಲ್ಪಗಳಲ್ಲಿ ತಾತ್ಕಾಲಿಕ ತುರ್ತು ಪೂರೈಕೆಗಳ ಹುಲುಮಟ್ಟದ ಅಸಂಖ್ಯ ಮಳೆಹುಳು, ಹಾತೆಗಳಿರುವಂತೆ ಆಕಾಶಗಮನಿಗಳಾದ ಧ್ಯೇಯೋನ್ನತಿಯ ಒಂದೆರಡು ವೈನತೇಯಗಳೂ ಉಂಟು. ಇವುಗಳ ವಿಹಾರ ವಿಲಾಸಗಳಿಗೆ ಒಂದು ಜನ್ಮ, ಜೀವಮಾನ ಸಾಲದು. ಅವು ಯೋಗವಶಾತ್ ಕೆಲವು ವ್ಯಕ್ತಿಗಳಲ್ಲಿ ಫಲಕಾರಿಗಳಾಗಿರುತ್ತವೆ. ಅಂಥವರ ಮನಸ್ಸು ಭವ್ಯ ಸೃಷ್ಟಿ ಸಾಧನೆಗಳಿಗೆ ತವರು ನೆಲವಾಗುತ್ತದೆ. ಅವು ಆ ವ್ಯಕ್ತಿಗಳ ಜೀವಿತಕ್ಕೆ ಹೆಚ್ಚಳ, ಆಪ್ಯಾಯನತೆ ದೊರಕಿಸುವಂತೆ ಲೋಕಬಾಳ್ವೆಗೂ ಶ್ರೇಯಃಪ್ರದಾಯಕವಾಗಿರುತ್ತವೆ. ಕಲೆ ಸಾಹಿತ್ಯ ವಿಜ್ಞಾನ ರಾಜಕೀಯ ಧರ್ಮಾದಿ ನಾನಾ ಜೀವನ ಪ್ರಕಾರಗಳ ಮಹತ್ಸಿದ್ಧಿಗಳಾಗಿರುವುದು ಇಂಥ ಕ್ರಿಯಾಸಾಧಕವಾದ ಉದಾತ್ತ ಸಂಕಲ್ಪಗಳಿಂದಲೇ.

ಮನಸ್ಸಂಕಲ್ಪ ಒಂದು ಅಂತರ್ಭಾವ, ಅಂತಃಶಕ್ತಿ. ಅದು ಪರಿಸರದ ಸಂಗತಿಗಳನ್ನು, ಅನುಭವಗಳನ್ನು ಜಮಾಯಿಸಿಕೊಂಡು ಅವುಗಳ ದೆಸೆಯಿಂದ ಅತಂತ್ರವಾಗಿ, ಚಾಂಚಲ್ಯದಿಂದ ವರ್ತಿಸಲು ಮುಂದಾಗುವ ಸಂದರ್ಭಗಳು ನಮ್ಮ ಬಾಳುವೆಯಲ್ಲಿ ಕಡಿಮೆಯೇನಲ್ಲ. ಅಂಥ ಸಂದಿಗ್ಧ ಗಳಿಗೆಗಳಲ್ಲಿ ಸಂಗ್ರಹಿತ ಅನುಭವ, ಸಂಗತಿಗಳ ಹುಚ್ಚಾಟವನ್ನು ತಾಬೆಗೆ ತಂದು, ಅವುಗಳ ನೈಜ ಚರ್ಯೆಯನ್ನು ಎಳೆಎಳೆಯಾಗಿ ವಿಶ್ಲೇಷಿಸಿ, ತೊಳೆತೊಳೆಯಾಗಿ ವಿಂಗಡಿಸಿಡುವುದು ನಮ್ಮ ಮತಿ ಅಥವಾ ಬುದ್ಧಿ. ಹೀಗೆ ವಿಂಗಡಣೆಗೊಂಡ ಅನುಭವ ಮತ್ತು ವಿಷಯ ವಿಶೇಷಗಳ ಒಳಿತು ಕೆಡುಕು, ಶಕ್ತಿ ದೌರ್ಬಲ್ಯಗಳ ತಖ್ತೆ ಹಾಕಿ ಅವು ಉಪಯೋಗಕಾರಕವೋ ಅಲ್ಲವೊ ಹಿತಸಾಧಕವೊ ಮಾರಕವೊ ಎಂಬುದನ್ನು ನಿರ್ಧರಿಸಿ ಉಪಕರಿಸುವುದು ಬುದ್ಧಿಯ ಕೆಲಸ. ಸಂಕಲ್ಪದ ಆನೆಗೆ ಬುದ್ಧಿ ಅಂಕುಶ. ಮನುಷ್ಯನ ಅನುಭವ, ಅಭೀಪ್ಸೆಗಳು ಪರೀಕ್ಷೆಗೊಳಗಾಗುವ ಪರಿಕರಗಳಾದರೆ, ಸಂಕಲ್ಪ ಪ್ರಯೋಗ ಶಾಲೆ, ಬುದ್ಧಿ ವಿಜ್ಞಾನಿ.

ಕನಿಷ್ಠವಾದದ್ದನ್ನು, ಕೆಡುಕಿಗೆ ಕಾರಣವಾದದ್ದನ್ನು, ಕಗ್ಗತ್ತಲೆಯನ್ನು ಪರಿಹರಿಸಿಕೊಳ್ಳುವುದರ ಸಲುವಾಗಿ ಅವುಗಳ ನಿರ್ಮೂಲನಕ್ಕೆ ಶ್ರಮಪಡುವುದರ ಬದಲು; ಅವುಗಳೆದುರು ಉತ್ತಮವಾದದ್ದನ್ನು, ಒಳಿತಾದದ್ದನ್ನು, ಪ್ರಕಾಶವನ್ನು ಪ್ರೋತ್ಸಾಹಿಸುವುದು ಹೆಚ್ಚು ಸುಲಭ ಹಾಗೂ ಯುಕ್ತವೆನ್ನಿಸೀತು.

ಆಸೆಗಳನ್ನು ಗೆದ್ದೆವೆಂದು ಹಿಗ್ಗುವುದು, ಅವುಗಳ ಕತ್ತು ಹಿಚುಕಿ ಮಣ್ಣು ಮುಕ್ಕಿಸಿದೆವೆಂದು

ಬೆನ್ನು ತಟ್ಟಿಕೊಳ್ಳುವುದು ಜಾಣತನದ ಲಕ್ಷಣ ವಲ್ಲ. ಅವುಗಳನ್ನು ಹದ್ದುಬಸ್ತಿನಲ್ಲಿಟ್ಟು ಕೊಳ್ಳುವುದರಲ್ಲಿ ಸ್ವಶ್ರೇಯಸ್ಸು ಹಾಗೂ ಪರ ಹಿತಗಳಿಗೆ ಅವು ನೆರವಾಗುವಂತೆ ದುಡಿಸಿಕೊಳ್ಳು ವುದರಲ್ಲಿ ವಿವೇಕವಡಗಿದೆ.

ಹಿರಿದಾದ ಹಂಬಲದೆದುರು ಕಿರಿಯಾಸೆ ತಲೆ ಮಣಿಯಬೇಕು, ತಲೆ ಮರೆಸಬೇಕು. ಆದರಿಂದ ವ್ಯಕ್ತಿ ಬದುಕು ಸಮೃದ್ಧ, ಬಲಿಷ್ಠ. ಶರೀರದ ಇತರ ಅವಯವಗಳಿಗಿರುವಂತೆ ತಲೆಗೂದಲು, ಗಡ್ಡ, ಮೀಸೆ, ಉಗುರುಗಳಿಗೆ ತಮ್ಮದೇ ಪಾತ್ರವಿದೆ. ಅವುಗಳ ವೃದ್ಧಿಗೆ ಬೇಸರಿಸಿಯೊ, ಬೇರಾವುದೇ ಕಾರಣಕ್ಕೊ ಅವುಗಳನ್ನು ತೊಡೆಯ ಬೇಕಾದ ಪಕ್ಷದಲ್ಲಿ, ತಲೆ ಮುಖ ಕೈಬೆರಳು ಗಳನ್ನೇ ಕತ್ತರಿಸಿಕೊಳ್ಳುವುದು ಗಾಂಪತನವೆನಿ ಸೀತು. ವಿಸರ್ಜನೀಯ ಯಾವುದು? ಪೋಷಣೀಯ ಯಾವುದು ಎಂಬ ಯುಕ್ತಾ ಯುಕ್ತ ವಿವೇಚನೆ ಪ್ರಾಜ್ಞತೆಯ ಹೆಗ್ಗುರುತು. ಅಲ್ಪ ಮಹತ್ತುಗಳ ಪರಿಜ್ಞಾನ ಸತ್ಸಂಕಲ್ಪಕ್ಕೆ ಮೂಲಮಾನ.

ಸೃಜನಾತ್ಮಕವೆನಿಸಿದ್ದೆಲ್ಲವೂ ಆಸೆ, ಸಂಕಲ್ಪ ವಾಗಿ ಮಾರ್ಪಟ್ಟದ್ದರ ಫಲಿತವೇ. ಇಲ್ಲಿ ತತ್ಕಾಲೀನವಾದ ಲಾಭ, ಕೀರ್ತಿಕಾಮನೆಗಳನ್ನು ಮೀರಿದ ಲೋಕೋಪಕಾರಕ, ಸಮಷ್ಟಿಹಿತದ ಸಾರ್ವ ಕಾಲಿಕ ಆಶಯ ಕಾರ್ಯಪ್ರವೃತ್ತವಾಗಿರುವು ದುಂಟು: ಗೊಮ್ಮಟೇಶ್ವರ, ಬಾದಾಮಿಯ ಗುಹಾಂತರ್ದೇವಾಲಯಗಳು, ಕನ್ನಂಬಾಡಿ ಕಟ್ಟೆ, ಶ್ರೀ ರಾಮಾಯಣ ದರ್ಶನಂ, ತಾಜಮಹಲ್, ಸಿಸ್ಟೈನ್ ಚರ್ಚಿನ ಕಲಾತಪಸ್ವಿಯ ರಮ್ಯಾದ್ಭುತ ಧಾರ್ಮಿಕ ಚಿತ್ರಾವಳಿ, ಚೀಣದ ಮಹಾ ಪೌಳಿ – ಹೀಗೆ ಅನೇಕಾನೇಕ, ವೈವಿಧ್ಯಮಯ ಮಹದ್ರಚನೆಗಳು ಕಾಲದೇಶ ಮಾನವ್ಯಗಳನ್ನು ಮೀರಿ ವಿಜೃಂಭಿಸುವುದು.

ಇವುಗಳೆಲ್ಲ ಕಾರ್ಯ ನಿರ್ವಾಹಕವೂ ಸುಸ್ಥಿರವೂ ಆದ ಪ್ರತಿಭಾಸಂಕಲ್ಪದ ಮೇರು ಸಮಸಿದ್ಧಿಗಳು. ಇಂಥ ಸುದೀರ್ಘಕಾಲಿಕ, ದರ್ಶನ ದೀಪ್ತ, ವ್ರತರೂಪದ ಸಂಕಲ್ಪ 'ತಪಸ್ಯೆ' ಎನ್ನಿಸಿಕೊಳ್ಳುತ್ತದೆ. ಲೌಕಿಕ ಸಾಧಾರಣವಾದ, ಬಹುಜನ ಸಾಧ್ಯವಾದ, ಸದ್ಯಃ ವ್ಯವಹಾರಮಾನ್ಯ ವಾದ ದಿನಂಪ್ರತಿಯ ಸಂಕಲ್ಪ ಕಾಲೊರಸಾದರೆ, ತಪಸ್ಯೆಯ ಸ್ವರೂಪದ ಸಂಕಲ್ಪ ಮಡಿಗದ್ದುಗೆ. ಒಂದು ಮಿಂಚಿನ ಚಮಕು; ಇನ್ನೊಂದು ತಾರಾಪ್ರದೀಪ್ತಿ.

ವ್ಯಕ್ತಿ ಹಂತದ ಆಸೆ, ಸಂಕಲ್ಪಗಳೊಂದಿಗೆ ಸಮುದಾಯದ ಒಟ್ಟಾರೆ ಸಂಕಲ್ಪವೆಂಬುದೂ ಒಂದಿದೆ. ಅದರ ಎಟುಕು ಎತ್ತರದ್ದು; ಬೀಸು ಬಿತ್ತರದ್ದು; ಪರಿಣಾಮ ಪ್ರಲಯಸ್ವರೂಪಿ. ಹೊಟ್ಟೆ ಬಟ್ಟೆ ಮಕ್ಕಳು ಮಡದಿ ನಂಟರಿಷ್ಟರ ಕ್ಷೇಮಕ್ಕಾಗಿ ದಿನವಹಿ ಏಗಾಡುವ, ಅದೇ ಉದ್ದೇಶಕ್ಕಾಗಿ ಪಣತೊಟ್ಟು ಇತರರ ಜೊತೆ ಹಣಾಹಣಿ ನಡೆಸಿ ಅಸ್ವಸ್ಥಗೊಳ್ಳುವ ಸಂಕುಚಿತ ಗೆಯ್ಮೆಗಿಂತ ಆ ಸಮಷ್ಟಿ ಸಂಕಲ್ಪ ಭಿನ್ನ. ಅದು ನಿತ್ಯ ನಿಸ್ತೇಜಕರವೂ ಅತಿ ಅವಹೇಳನಕರವೂ ಪರಮ ಪಾಶವೀಯವೂ ಆದ ಪರಕೀಯ ಪಾರತಂತ್ರ್ಯದ ಪಾಶದಿಂದ ಒಂದು ಜನಾಂಗ, ಸಂಸ್ಕೃತಿ, ಭಾಷೆ, ಭೂಸೀಮೆಯನ್ನು ಪಾರು ಮಾಡಿ ಸ್ವವಿಶ್ವಾಸ ಆತ್ಮಗೌರವಗಳನ್ನು ಪುನಃ ಪ್ರತಿಷ್ಠಾಪಿಸುವ ಬಗೆಯದು. ಈ ಸಾಮೂಹಿಕ ಮನೋನಿಶ್ಚಯವನ್ನು ರಾಷ್ಟ್ರ ಸಂಕಲ್ಪವೆನ್ನ ಬಹುದು. ವ್ಯಕ್ತಿ ವ್ಯಕ್ತಿಯಲ್ಲಿ ಸುಪ್ತವಾಗಿರುವ ಆತ್ಮಾಭಿಮಾನ, ಸ್ವಾತಂತ್ರ್ಯಾಭಿಲಾಷೆಯ ಆಶಯಕ್ಕೆ ಒಬ್ಬ ಗಾಂಧಿ, ಒಬ್ಬ ಹೋಚಿ ಮಿನ್, ಒಬ್ಬ ಮಂಡೇಲ ಬಾಹ್ಯಾಭಿವ್ಯಕ್ತಿಗಳಾಗಿ ಕಾಲವಶಾತ್ ಒದಗಿ ಬರುತ್ತಾರೆ. ತ್ಯಾಗ ಬಲಿದಾನಗಳ ಕೊರಕಲು ಮಡುಗಳಲ್ಲಿ ದಿಕ್ಕೆಟ್ಟು ನಿಲ್ಲದೆ ಮಹಾಪೂರದಂತೆ ಭೋರ್ಗರೆದು ಶತಮಾನಗಳಿಂದ ಮಲೆತು ನಿಂತ ರಾಷ್ಟ್ರಕಂಟಕ ಪೀಡೆಗಳನ್ನು ಕೊಚ್ಚಿ ಹಾಕಿ ಸಫಲರಾಗಿ ಮುಂದು ವರೆಯುತ್ತಾರೆ. ಹತ್ತು ದಿಕ್ಕುಗಳಿಂದ ನೆರವುಗ್ಗೈ ನೀಡುವಂತೆ ಜನಮನಸ್ಸಿನ ಲೋಭ ನಿರ್ಲಿಪ್ತವೂ ಧ್ಯೇಯಗಾಮಿಯೂ ಆದ ಝರಿಗಳು, ಕಿರಿ ಹರವಿನ ಜಲಗಳು ರಾಷ್ಟ್ರ ನಾಯಕರೆಂಬ ಹೆದ್ದೊರೆಗಳನ್ನು ಕೂಡಿಕೊಳ್ಳುತ್ತವೆ. ಮನುಷ್ಯನ ಆಯುಷ್ಯಕ್ಕೆ ಧನ್ಯತೆಯ ಕೋಡನ್ನು ಕೊನರಿಸುವ ಇಂಥ ಸಮವಾಯ ಸಂಕಲ್ಪಾವಕಾಶ, ದೇಶ ವಾಸಿಗಳ ಪಾಲಿಗೆ ದೈವೀಕೃಪೆಯ ಪ್ರತ್ಯಕ್ಷ ಪ್ರಕಾಶ. ●

ಕಾರು ಓಡುತ್ತಿತ್ತು. ಅದಕ್ಕಿಂತಲೂ ವೇಗವಾಗಿ ವಿಶಾಲಿಯ ತಲೆಯಲ್ಲಿ ವಿಚಾರಚಕ್ರ ಉರುಳುತ್ತಿತ್ತು.

ಹಿಂದಿನ ರಾತ್ರಿಯೆಲ್ಲಾ ಚಿಂತೆಯ ದಳ್ಳುರಿಯಲ್ಲಿ ಬೇಯುತ್ತಾ ನಿದ್ದೆಯಿಲ್ಲದೆ ಕಳೆದಿರಲಿಲ್ಲವೆ ತಾನು? ಬೂದಿ ಮುಚ್ಚಿದ್ದ ಕೆಂಡವಾಗಿದ್ದ. ಅಮ್ಮ ದೇವರಿಗೆ ಅರ್ಪಿಸಲು ತಂದಿದ್ದ ಸೀರೆ ಬೂದಿಯನ್ನು ಹಾರಿಸಿ, ಕೆಂಡವನ್ನು ಜ್ವಲಿಸಿಸಿ, ಗಾಳಿಯ ಕೆಲಸ ಮಾಡಿತ್ತು. ವರ್ಷಗಳಿಂದ ಎದೆಯಲ್ಲಿ ಹುದುಗಿದ್ದ ನೋವಿನ ಹೆಬ್ಬಂಡೆ ಯಾತನೆಯ ಕಾವಿಗೆ ಸಿಕ್ಕಿ ಕರಗತೊಡಗಿತ್ತು. ಪರಿಣಾಮ? ಮನಸ್ಸಿನಾಳಕ್ಕೆ ತಳ್ಳಿ, ತಾನು ಯಶಸ್ವಿಯಾಗಿ ಮರೆತಿದ್ದ ಹಳೆಯ ನೋವು ಹೆಚ್ಚು ಕಸುವಿನಿಂದ ಮೇಲೆದ್ದಿತ್ತು. ತಾನು ಕೈಯಾರ ಮಾಡಿಕೊಂಡಿರದ, ತಾನು ಹೊಣೆಗಾರಳಲ್ಲದಿದ್ದ ಒಂದು ದೈಹಿಕ ಕುಂದಿನಿಂದಾಗಿ ಕೇಳಿದ ಸಣ್ಣ ಮಾತುಗಳೆಷ್ಟು? ಅಪಹಾಸ್ಯ, ಅಣಕದ ನುಡಿಗಳೋ? ಶುಭ್ರ ಹಾಳೆಯಂತಿದ್ದ ತನ್ನ ಮನಸ್ಸು – ಮುಗ್ಧತೆಯನ್ನು ಕಳೆದುಕೊಳ್ಳಲಿಲ್ಲವೆ? ಅದೇನು ಕೊಂಚ ನಷ್ಟವೆ? ಸಿನಿಮಾದ ರೀಲುಗಳಂತೆ ತಾನು ಅನುಭವಿಸಿದುದೆಲ್ಲಾ ಸಾಲಾಗಿ ಕಣ್ಮುಂದೆ ಹಾದು ಹೋಗುತ್ತಿರುವಾಗ ನಿದ್ದೆ ಬರುವುದಾದರೂ ಸಾಧ್ಯವೆ?

**ನಂಜನಗೂಡು ಅಮ್ಮನಿಗೆ ಜರತಾರೆ ಸೀರೆ ಒಪ್ಪಿಸಿದರೆ, ನನಗೆ ಮದುವೆ ಖಂಡಿತ ಆಗುತ್ತದೆಂದು ಭರವಸೆ ಕೊಡುತ್ತಾಳೆಯೇ? ಈ ಸೀರೆ ಸ್ವೀಕರಿಸುವ ಹಕ್ಕು ಅವಳಿಗಿದೆಯೇ?**

* * *

ವಿಶಾಲಿ ಜನಿಸಿದ್ದು ಸಿರಿವಂತರ ಮನೇಲಿ. ಹಿರಿಮಗಳು ಬೇರೆ! ಕೇಳಬೇಕೆ? ಅಜ್ಜ, ಅಜ್ಜಿಯರ ಕಣ್ಮಣಿ ಅವಳು, ತಂದೆ, ತಾಯಿಯರಿಗಂತೂ



ವಿಪರೀತ ಅಕ್ಕರೆ, ಚಿಕ್ಕವಳಾಗಿದ್ದಾಗ ಎಲ್ಲಾ ಸುಗಮವಾಗಿತ್ತು. ಅವಳು ಎಂದೂ ಕನಸಿನ ಮಹಲು ಕಟ್ಟುವ ಸಾಹಸಕ್ಕೆ ಹೋಗಲಿಲ್ಲ. ಅದು ಬೇಕು, ಇದು ಬೇಕು ಅಂತ ಹಠ ಮಾಡಿದವಳಲ್ಲ. ಮಾತು, ನಡೆ ಎಲ್ಲಾ ನೇರ. ಹಿಂದೊಂದು, ಮುಂದೊಂದು, ಕುಹಕ ಅರಿತವಳಲ್ಲ. ತುಂಬಾ ಸರಳ ಸ್ವಭಾವ.

* * *

ಬಿ.ಎ. ಓದುತ್ತಿದ್ದಾಗ ಅಲ್ಲವೆ? ಮನಶ್ಶಾಸ್ತ್ರದ ಅಧ್ಯಾಪಕರು ನೀವೆಲ್ಲಾ ನಾನು ಹೇಳುವವರೆಗೂ ಏನನ್ನೂ ಯೋಚಿಸದೆ **blank mind** ನಿಂದ ಕೂತಿರಬೇಕು ಎಂದಿದ್ದರಲ್ಲ? ಆ ಕ್ಷಣಕ್ಕೆ ತಮಗೆಲ್ಲಾ ಅದು ತಮಾಷಿಯಾಗಿ ಕಂಡಿತ್ತು. ತಾನು ನಿರಾಯಾಸವಾಗಿ ಏನನ್ನೂ ಯೋಚಿಸಲು ತೊಡಗದೆ ತೆಪ್ಪಗೆ ಕುಳಿತಿದ್ದೆ. ಕೆಲ ನಿಮಿಷಗಳ ನಂತರ ಅಧ್ಯಾಪಕರು ಪ್ರಶ್ನಿಸಿದಾಗ ಪ್ರತಿಯೊಬ್ಬರೂ ಏನಾದರೊಂದರ ಬಗ್ಗೆ ಯೋಚಿಸುತ್ತಿದ್ದೆ ಎಂದು ಹೇಳುತ್ತಿದ್ದರು. ನನ್ನ ಸರದಿ ಬಂದಾಗ ಸುಮ್ಮನೆ ಇದ್ದೆ ಎಂದರೆ ತಪ್ಪಾಗ ಬಹುದೇನೋಂತ ಹೆದರಿ ಕೆಲವು ದಿನಗಳ ಹಿಂದೆ ಯಷ್ಟೇ ಹೋಗಿದ್ದ ಟ್ರಿಪ್ಪಿನ ಬಗ್ಗೆ ಯೋಚಿಸು ತ್ತಿದ್ದೆ ಎಂದು ಹೇಳಿದ್ದೆ. ಅಷ್ಟು ಪರಿಶುಭ್ರ ವಾಗಿತ್ತು ನನ್ನ ಮನಸ್ಸು.

ಸಾಮವರ್ಣ, ಮಾಲುಗಣ್ಣು ನನ್ನನ್ನು 'ಇದಾಳೆ ಸುಮಾರಾಗಿ' ಎನ್ನುವಂತೆ ಮಾಡಿ ದ್ದುವು. ನನಗೆ ಮದುವೆ ಮಾಡಲು ಯತ್ನಿಸಿದಾಗ ಜೀವನದ, ಇದುವರೆಗೂ ಕಂಡಿರದಿದ್ದ, ಕುರೂಪ ಮುಖವೊಂದರ ಪರಿಚಯ ನನಗಾ ಯಿತು.

ಸ್ವಭಾವತಃ ಅಪ್ಪ ತುಂಬಾ ಶಾಂತ ಪ್ರಕೃತಿ ಯವರು. ಅಷ್ಟಿಷ್ಟಕ್ಕೆ ಅವರಿಗೆ ಕೋಪ ಬರುತ್ತಿರ ಲಿಲ್ಲ. ಅಂತಹವರನ್ನೂ ಒಬ್ಬಾತ (ವರನ ತಂದೆ) ಸಿಟ್ಟಿಗೆಬ್ಬಿಸಿದ್ದರು. ಆ ಸಲ ಅಪ್ಪ ಒಬ್ಬರೇ ಹೊರಟಿದ್ದರು. ಲೋಕಾಭಿರಾಮವಾಗಿ ಸ್ವಲ್ಪ ಹೊತ್ತು ಮಾತಾಡಿ ಅಪ್ಪ ಮದುವೆ ಪ್ರಸ್ತಾಪ ಮಾಡಿದರು. ಅವರ ಮಾತು ಕೇಳುವ ತಾಳ್ಮೆಯೂ ಇಲ್ಲದೆ ಆತ ತಲೆ ಮೇಲೆ ಹೊಡೆ ದಂತೆ ಕೇಳಿದರು:

"ಗೊತ್ತಾಯ್ತು ಬಿಡಿ. ನಿಮ್ಮ ಹುಡುಗೀಗೆ ಕಣ್ಣು ಅಷ್ಟು ಸರಿ ಇಲ್ಲವಂತೆ? ಅಂದ್ರೆ ಚೆನ್ನಾಗಿ ಕಾಣಲ್ವಂತೆ ಹೌದೆ?"

"ಹಾಗೆ ಹೇಳಿದೋರು ಯಾರು ಸ್ವಾಮಿ? ನನ್ನ ಮಗಳು ಕನ್ನಡಕ ಕೂಡಾ ಹಾಕೊಲ್ಲ. ಬಿ.ಎ. ಆಯ್ತು. ಎಂ.ಎ.ಗೆ ಸೇರಲು ಓಡಾಡ್ತಿ ದಾಳೆ. ಸುಳ್ಳು ವದಂತಿ ನಂಬಬಹುದೆ ತಾವು?" ಅಪ್ಪ ಸಮಾಧಾನದಿಂದಲೇ ಉತ್ತರಿಸಿದ್ದರು.

ಆದರೆ ಆತ ಒಪ್ಪಬೇಕಲ್ಲ? "ನಮ್ಮ ಆಪ್ತರೊಬ್ಬರು ಹೇಳಿದರು. ಅದೆಲ್ಲಾ ಈಗ್ಯಾಕೆ ಬೇಕು? ಕಂಡೂ ಕಂಡೂ ಕುರುಡು ಹುಡುಗೀನ ಮಗನಿಗೆ ತಂದುಕೊಳ್ಳೋಣವೆ? ಗಾದೇನೆ ಇದ್ಯಲ್ಲ ಇರುಳು ಕಂಡ ಬಾವೀಗೆ ಹಗಲಲ್ಲಿ ಬಿದ್ದರು ಅಂತ."

"ನನ್ನ ಮಗಳನ್ನು ನಿಮ್ಮ ಮಗ ಮಾಡಿಕೊಳ್ಳ ದಿದ್ದರೂ ಪರವಾಗಿಲ್ಲ. ಚೆನ್ನಾಗಿರುವ ಹುಡುಗಿಗೆ ಕುರುಡೂಂತ ಇಲ್ಲದ ಸಲ್ಲದ ಹೆಸರಿಡಬೇಡಿ. ಹುಷಾರ್" ಒರಟಾಗಿ ಹೇಳಿ ಅಪ್ಪ ಬಂದಿದ್ದರು.

ಆಸೆ ತೋರಿಸಿ ನಿರಾಸೆಯ ಪ್ರಪಾತಕ್ಕೆ ನೂಕಿ ದ್ದರು ಇನ್ನೊಬ್ಬ ಮಹಾಶಯರು, ವರನ ಮನೆಯಲ್ಲೇ ವಧು ಪರೀಕ್ಷೆ ನಡೆದಿತ್ತು. ಅವರ ಮನೆಯಲ್ಲಿ ನಮ್ಮನ್ನು ವಿಶ್ವಾಸ, ಗೌರವ ಗಳಿಂದ ಆದರಿಸಿದರು. ನನ್ನಲ್ಲಿ ಪುಟಿದೇಳುತ್ತಿದ್ದ ಕೀಳರಿಮೆ ಮಾಯವಾಯಿತು. ಒಳಗಿಂದ ಸುಮಾರು ಮೂರು ವರ್ಷದ ಮಗುವೊಂದು ಅಮ್ಮಾಂತ ಕೂಗುತ್ತಾ ಬಂತು. ಹೊಸಬರಾದ ನಮ್ಮನ್ನು ನೋಡಿ ಮಗು ಅಜ್ಜಿಯ ಸೆರಗಿನಲ್ಲಿ ಮುಖ ಮರೆಸಿಕೊಳ್ಳಲು ಹವಣಿಸಿತು. ಅಜ್ಜಿ ನನ್ನನ್ನು ತೋರಿಸಿ "ಅತ್ತೆ ಕಣೊ ಮರಿ ಅಮ್ಮನ ಹತ್ತಿರ ಮಾತಾಡ್ತಿರೋದು. ಹೋಗು ಮತ್ತೆ ಜಾಣ" ಅಂತ ಹುರಿದುಂಬಿಸಲೆತ್ನಿಸಿದರು. ಅವರ ಯತ್ನ ಸಫಲವಾಗಲಿಲ್ಲ. ಆದರೆ ಈ ಮಾತು ಅಪ್ಪ, ಅಮ್ಮನ ಮನಸ್ಸಿನಲ್ಲಿ ಆಸೆಯ ಅಲೆ ಎಬ್ಬಿಸಿತು. ನಾನು ಅದಕ್ಕೆ ಹೆಚ್ಚು ಮಹತ್ವ ಕೊಡಲಿಲ್ಲ. ಇಬ್ಬರೂ ನನ್ನ ಮದುವೆ ನಿಶ್ಚಯ ವಾಗಿ ಹೋಯಿತು ಎನ್ನುವಂತೆ ಸಡಗರಪಟ್ಟರು. ಅವರ ಸಂತೋಷ ಅಲ್ಪಾಯುವಾಗಿತ್ತು.

ಹುಡುಗರ ಮನೆಯಿಂದ ನಕಾರದ ಉತ್ತರ ಬಂದು ಗಾಳಿ ಹೋದ ಬೆಲೂನಿನಂತೆ ಅವರ ಉತ್ಸಾಹದ ಉಬ್ಬು ಇಳಿದುಹೋಯಿತು. ಆಗಲೆ ಅಮ್ಮ ದೇವರಿಗೆ ಹರಕೆ ಹೊತ್ತಿದ್ದು. 'ನನ್ನ ವಿಶಾಲಿಗೆ ಮದುವೆ ಮಾಡಿಸಮ್ಮ, ದಂಪತಿಗಳನ್ನು ಕರೆದುಕೊಂಡು ನಿನ್ನ ಸೇವೆಗೆ ಬರುತ್ತೇನೆ. ಸೀರೆ ಉಡಸ್ತೀನಿ' ಅಂತ ಹರಕೆ ಮಾಡಿಕೊಂಡು ಮೀಸಲು ಕಟ್ಟಿರಿಸಿದಳು. ಹರಕೆ ಮಾಡಿಕೊಂಡು ಬಿಟ್ಟ ಮಾತ್ರಕ್ಕೆ ನನ್ನ ಮಾಲುಗಣ್ಣು ನೇರ್ಪಾಗಿ ಬಿಡುತ್ತದೆಯೆ ಎನಿಸಿ ನನಗೆ ನಗು ಬಾರದಿರಲಿಲ್ಲ.

ಹರಕೆ ಮಾಡಿಕೊಂಡ ಮೇಲೂ ಪರಿಸ್ಥಿತಿಯೇನೂ ಉತ್ತಮಗೊಳ್ಳಲಿಲ್ಲ. ನನ್ನನ್ನು ಸೊಸೆಯಾಗಿ ತಂದುಕೊಳ್ಳಲು ಇಷ್ಟವಿಲ್ಲದೆ ಒಬ್ಬ ವರನ ತಂದೆ ಮಗನ ವಯಸ್ಸನ್ನೇ ಕಡಿಮೆ ಹೇಳಿಬಿಟ್ಟರು. ನಿರುಪಾಯರಾಗಿ ಅಪ್ಪ ವಾಪಸ್ಸು ಬರಬೇಕಾಯಿತು.

ನನಗೆ 'ಗೂನು' ಎಂದು ಬಿರುದು ಹಚ್ಚಿದರು ಒಬ್ಬ ಸತ್ಕುಲ ಪ್ರಸೂತ ವರನ ತಂದೆ.

''ನೋಡಿ ಸ್ವಾಮಿ ಯಾರದೋ ಹೇಳಿಕೆ ಮಾತು ಕೇಳಿಕೊಂಡು ಏನನ್ನೂ ನಿರ್ಧರಿಸಲು ಹೊರಡಬಾರದು. ಮಗನ್ನ ಕರೆದುಕೊಂಡು ನೀವೇ ಬನ್ನಿ. ನನ್ನ ಮಗಳ ಬೆನ್ನು ನೆಟ್ಟಗೇ ಇದೆ ಅನ್ನೋದನ್ನ ಕಣ್ಣಾರೆ ನೋಡುವಿರಂತೆ.'' ಅವರ ಮನಸ್ಸನ್ನು ತಿರುಗಿಸುವ ಯತ್ನ ಅಪ್ಪನದು.

''ರಾಯರೇ ನಮ್ಮ ಹುಡುಗನಿಗೇನೂ ಹೆಣ್ಣಿಗೆ ಬರವಿಲ್ಲ. ನಿಮ್ಮ ಮಗಳ ಕುಂದನ್ನು ಎಲ್ಲಾದರೂ ಒಪ್ಪಿಕೋತೀರಾ? ಸುಮ್ನೆ ವ್ಯರ್ಥ ಪ್ರವಾಸ ಮಾಡೋಕೆ ನನಗಿಷ್ಟವಿಲ್ಲ.''

''ನನ್ನ ಮಗಳು ಗೂನಿಯಲ್ಲ. ಹತ್ತು ಜನರಂತೆ ನೇರವಾಗಿದಾಳೆ. ಹುಡುಗಿ ಒಳ್ಳೇ ಕೆಲಸದಲ್ಲಿದಾಳೆ. ನಮಗೂ ಯಾರಾದರೂ ಹುಡುಗ ಸಿಕ್ಕೇ ಸಿಕ್ತಾನೆ. ನಿಮ್ಮ ಮಗನೊಬ್ಬ ನನ್ನೇ ನೆಚ್ಚಿ ನಾವೇನೂ ಕೂತಿಲ್ಲ, ಬರ್ತೀನಿ'' ಎಂದು ಗಟ್ಟಿಸಿ ಹೇಳಿದ್ದರು.

ಶುಭ್ರ ಹಾಳೆಯಂತಿದ್ದ ಮನಸ್ಸು ಚುಚ್ಚು ನುಡಿಗಳಿಂದ ಗಾಸಿಗೊಂಡು ರಕ್ತದ ಕಲೆಗಳಿಂದ

ತಲಕಾಡು –

## ಗ್ರಾಮದೇವತೆ ಬಂಡರಸಮ್ಮ

ಪ್ರತಿ ಹಳ್ಳಿಹಳ್ಳಿಗೂ ಒಬ್ಬಳು ಗ್ರಾಮದೇವತೆ. ಇದು ನಮ್ಮ ಭಾರತದ ಜಾನಪದ ಸಂಸ್ಕೃತಿ. ಇಂದು ಪರಮ ವೈಭವದ ಪಂಚತಾರಾ ಸಂಸ್ಕೃತಿಯ ಪ್ರಖ್ಯಾತ ನಗರವಾದ ಕರ್ನಾಟಕದ ರಾಜಧಾನಿ ಬೆಂಗಳೂರು ಮೊದಲೊಂದು ಗ್ರಾಮ. ಇಲ್ಲಿನ ಗ್ರಾಮದೇವತೆ ಕರಗದ ದ್ರೌಪದಿ. ಮೈಸೂರಿನ ಗ್ರಾಮದೇವತೆ ಚಾಮುಂಡಿ. ಹಿಂದೆ ತಲಕಾಡು ಗಂಗರಸರ ರಾಜಧಾನಿಯಾಗಿ ಮೆರೆದ ಇತಿಹಾಸ ಪ್ರಸಿದ್ಧ ಸ್ಥಳ. ಇಲ್ಲೊಬ್ಬಳು ಗ್ರಾಮದೇವತೆ ಬಂಡರಸಮ್ಮ. ಎಲ್ಲ ಕೋಮಿನವರ ಆರಾಧ್ಯ ದೇವಿ ಇವಳು. ಇವಳು ಮೊದಲು ಮಾನವಕುಲದಲ್ಲೇ ಹುಟ್ಟಿ ದೇವತೆಯಾದಳೆಂದೂ ಲಕ್ಷ್ಮಿಯ ಅವತಾರವೇ ಎಂದೂ ಭಾವುಕರ ನಂಬಿಕೆ. ಬಂದ+ಅರಸಮ್ಮ ಎಂಬುದು ಬಂಡರಸಮ್ಮ ಎಂದಾಗಿದೆ ಎಂದೂ ಹೇಳುತ್ತಾರೆ. ಬಂಡುಣಿ ಎಂದರೆ ಮಕರಂದವನ್ನು ಸವಿಯುವ ದುಂಬಿ. ಅಂತೆಯೇ ಇಲ್ಲಿನ ಜನರಿಗೆ ಜೇನಿನಂತೆ ಬಂಡರಸಮ್ಮನ ಮಮತೆಯ ಮಡಿಲು ಎಲ್ಲರನ್ನೂ ಸಲುಹುತ್ತದೆ! ಆದರೆ ದೃಷ್ಟಿಬೊಟ್ಟಿನಂತೆ ಈ ಒಂದು ವಾರದ ಗ್ರಾಮದೇವತೆ ಜಾತ್ರೆಯಲ್ಲಿ ಅಹಿಂಸೆಯ ದ್ಯೋತಕವಾದ ಶಿವರಾತ್ರಿ (ಕೆಲವೊಮ್ಮೆ ಅಂದೇ ರಕ್ತರಾತ್ರಿ ಆಗುತ್ತದೆ!)ಯಲ್ಲಿ ಸಾವಿರಾರು ಪ್ರಾಣಿಗಳ ಬಲಿ ನಡೆಯುತ್ತದೆ!

● ಆರ್. ವೆಂಕಟೇಶ್

ತುಂಬಿಹೋಗಿತ್ತು. ಹೆತ್ತವರ ಎದುರಿಗೆ ಎಂದೂ ನಾನು ಮನದಳಲನ್ನು ಹೊರಗೆಡವಿದವಳಲ್ಲ. ಮುಚ್ಚಿದ ಬಾಗಿಲು ನನ್ನ ಮನಸ್ಸು. ಮೌನವಾಗಿ ವ್ಯಥೆ ಅನುಭವಿಸಿದೆ. ಜೀವನ ಬಂದ ಹಾಗೆ ಅನುಭವಿಸಲು ಕಲಿತೆ. ಪುಸ್ತಕಗಳ ಆಸರೆ ಪಡೆದೆ. ಅವು ಹುಚ್ಚರಾಸ್ಪತ್ರೆಗೆ ನಾನು ದಾಖಲಾಗದ ಹಾಗೆ ನೆರವು ನೀಡಿದುವು. ಪುಸ್ತಕ ಹಿಡಿದರೆ ಅದರಲ್ಲೇ ತಲ್ಲೀನಳಾಗಿ ಬಿಡುತ್ತಿದ್ದೆ. ಇಡೀ ದಿನ ಒಂದು ಘಳಿಗೆ ವಿರಾಮವಿಲ್ಲದಂತೆ ಕಾರ್ಯಕ್ರಮ ರೂಪಿಸಿಕೊಂಡಿದ್ದೆ. ಸೋಮಾರಿ ಮನಸ್ಸು ಸೈತಾನನ ಕರ್ಮಾಗಾರ ಅಲ್ಲವೆ? ಬೆಳಗ್ಗೆ ಮನೆಗೆಲಸದಲ್ಲಿ ಅಮ್ಮನಿಗೆ ಸಹಾಯ ಮಾಡುವುದು. ಆಫೀಸಿಗೆ ಹೊರಡುವ ಸಿದ್ಧತೆ, ಸಂಜೆ 5ರ ವರೆಗೆ ಆಫೀಸು. ಅಲ್ಲಿಂದ ಬಂದ ಮೇಲೆ ತಿಂಡಿ, ಕಾಫಿ ಮುಗಿಸಿ ಸ್ನೇಹಿತರ ಮನೆಗೋ, ಲೈಬ್ರೆರಿಗೋ, ತರಕಾರಿ ತರಲು ಮಾರ್ಕೆಟ್ಟಿಗೆ ಹೋಗುವುದೋ ಇರುತ್ತಿತ್ತು. ಊಟದ ಹೊತ್ತಿನ ತನಕ ಪುಸ್ತಕ ಓದುವುದು. ಊಟ ಮುಗಿಸಿ ಬಂದ ಮೇಲೂ ನಿದ್ದೆ ಬರುವವರೆಗೆ ಓದುತ್ತಿರುವುದು. ಮಲಗಿದ ಕೆಲವು ನಿಮಿಷಗಳಲ್ಲೇ ನಿದ್ದೆ ಆವರಿಸುತ್ತಿತ್ತು. ಬೆಳಗ್ಗೆ 6.30ಗೆ ಎದ್ದರೆ ಮತ್ತೆ ಅದೇ ದಿನಚರಿ. ದಿನಗಳು ಬಲು ಬೇಗ ಕಳೆಯುತ್ತಿತ್ತು. ಒಂದು ರೀತಿ ನಿರ್ಲಿಪ್ತತೆ ನನ್ನಲ್ಲಿ ಬೇರೂರಿತ್ತು. ನೆಮ್ಮದಿ ಪಡೆದಿದ್ದೆ. ಎಲ್ಲಾ ಪರವಾಗಿಲ್ಲ ಎನ್ನುವ ಹಾಗನಿಸಿತ್ತು ನನಗೆ. ಆಗ ಅನಿರೀಕ್ಷಿತವಾಗಿ ಬಿರುಗಾಳಿ ಬೀಸಿತ್ತು. ಆ... ರಾತ್ರಿ...

ಅಮ್ಮ ಕೈಲಿ ಸೀರೆ ಪ್ಯಾಕೆಟ್ ಹಿಡಿದು ಮನೆಗೆ ಬಂದಳು. ಅವಳ ಮುಖದಲ್ಲಿ ಇತ್ತೀಚಿನ ವರ್ಷಗಳಲ್ಲಿ ಕಾಣೆಯಾಗಿದ್ದ ಮುಗುಳ್ನಗೆ ಲಾಸ್ಯವಾಡುತ್ತಿತ್ತು. ಅವಳ ಮುಖದಲ್ಲಿ ತೃಪ್ತಿ, ಸಂತೋಷ! ನನಗೆ ಆಶ್ಚರ್ಯವಾಗಿತ್ತು. ಕಾರಣ ಏನಿರಬಹುದು? ಹೆಚ್ಚು ಜಿಜ್ಞಾಸೆ ಮಾಡಬೇಕಾಗಲಿಲ್ಲ. ಅಮ್ಮನೇ ಸೀರೆ ತೆಗೆದು ತೋರಿಸುತ್ತಾ ಬಡಬಡಿಸಿದಳು.

''ನಾಳೆ ನಂಜನಗೂಡಿಗೆ ಹೋಗಿ ಬರೋಣಾಂತ. ಅಮ್ಮನವರಿಗೆ ಅರ್ಪಿಸೋಕೆ ಸೀರೆ ತಂದೆ ವಿಶಾಲು. ಹರಕೆ ಮಾಡಿಕೊಂಡ ಮೇಲೆ ನಮ್ಮ ಕೆಲಸ ಆಗದಿದ್ರೂ, ಸರಿ, ಹರಕೆ ಸಲ್ಲಿಸಬೇಕಂತೆ. ಕೆಲವು ಸಲ ಹಾಗೆ ಮಾಡಿಯಾದ ಮೇಲೆ ನಮ್ಮ ಕೆಲಸ ಆಗತ್ತಂತೆ. ಎಲ್ಲಾ ದೇವಿಯ ಅನುಗ್ರಹ ಅನ್ನು.''

ನಾನೇನೂ ಮಾತಾಡಲು ಹೋಗಲಿಲ್ಲ. ತಲೆ ಅಲ್ಲಾಡಿಸಿ ಸಮ್ಮತಿ ಸೂಚಿಸಿದೆ. ರಾತ್ರಿ ಮಲಗುವ ಮೊದಲು ದೇವಸ್ಥಾನಕ್ಕೆ ತೆಗೆದುಕೊಂಡು ಹೋಗಬೇಕಾದ ತೆಂಗಿನಕಾಯಿ, ಬಾಳೆಹಣ್ಣು, ಹೂವು, ಮಂಗಳಾರತಿ ಬತ್ತಿ, ಅರಸಿನ-ಕುಂಕುಮದ ಪೊಟ್ಟಣ ಎಲ್ಲವನ್ನೂ ಬುಟ್ಟಿಗಳಿಗೆ ಹಾಕಿರಿಸಿದೆ. ಐದೂವರೆಗೆ ಏಳಬೇಕೆಂದು ಮಾತನಾಡಿ ಎಲ್ಲಾ ಮಲಗಿದೆವು.

ನನ್ನಂತರಂಗದಲ್ಲಿ ಜ್ವಾಲಾಮುಖಿ ಎದ್ದಿತ್ತು. ಅಮ್ಮ ನಂಬಿದ ದೇವಿ ನನಗೇನೂ ಮದುವೆ ಮಾಡಿಸಲಿಲ್ಲ. ಇನ್ನೂ ಎಂದಿಗೂ ಮಾಗಲಾರದಂಥ ಗಾಯಗಳಾಗಿವೆ ಹೃದಯಕ್ಕೆ. ಅದು ಹೇಗೆ ದೇವಿ ನಾವು ಕೊಡುವ ಸೀರೇನ ಸ್ವೀಕರಿಸುತ್ತಾಳೆ? ಅವಳಿಗೇನು ಹಕ್ಕಿದೆ? ಅಮ್ಮನಿಗೂ ಬುದ್ಧಿ ಇಲ್ಲ. ಅಷ್ಟು ಭಾರಿ ಸೀರೆ ತರುವುದೆ? ನೆನಪಿನಾಳದಲ್ಲಿ ಹುದುಗಿದ್ದ ಸಂಗತಿಗಳೆಲ್ಲಾ ಹೊರಬರಲಾರಂಭಿಸಿದುವು. ಎಲ್ಲಾ ಕಿಚ್ಚೆಬ್ಬಿಸುವಂತಹುವೆ! ಸಿಹಿನೆನಪು ಒಂದೂ ಇರಲಿಲ್ಲ. ನನ್ನ ಜೊತೆಯವರೆಲ್ಲಾ ಎರಡು, ಮೂರು ಮಕ್ಕಳ ತಾಯಿಯರಾಗಿದ್ದಾರೆ. ನಾನೊಬ್ಬಳು ಕನ್ಯಾಕುಮಾರಿಯಾಗಿಯೇ ಉಳಿದು, ಅವರ ಕನಿಕರದ ವಸ್ತುವಾಗಿದ್ದೇನೆ. ನಮ್ಮ ಹಣೆಬರಹ ಕೆಟ್ಟದಾಗಿರುವಾಗ ದೇವಿ ಏನು ಮಾಡ್ತಾಳೆ ಅಂತಾಳೆ ಅಮ್ಮ. ಹಣೆಬರಹ ಎನ್ನೋದನ್ನ ಒಪ್ಪೋಣ. ಆದರೆ ಕಷ್ಟ ಅಂತ ನಾವು ನಂಬಿರುವ ದೇವರನ್ನು ಭಕ್ತಿಯಿಂದ ಪ್ರಾರ್ಥಿಸಿದರೆ ಕೊಂಚವಾದರೂ ಅನುಕೂಲ ಆಗುವಂತೆ ಮಾಡದಿದ್ದರೆ ಏನು ಪ್ರಯೋಜನ? ಅಲ್ಲಿಗೆ ದೇವರೂ ನಾವು ಮಾನವರಷ್ಟೇ ಅಸಹಾಯಕ ಎಂದಾಯ್ತಲ್ಲ! ಅಂತಹ ದೇವರನ್ನು ಪೂಜಿಸುವುದಾದರೂ ಏಕೆ? ಏನು ಸಾರ್ಥಕ? ನನಗೆ ಒಂದಿನಿತೂ ಒಳ್ಳೆಯದು ಮಾಡದ ಅಮ್ಮ ಒಪ್ಪಿಸಲಿರುವ ಸೀರೇನ ದೇವಿ ಹೇಗೆ ತೆಗೆದುಕೋತಾಳೆ? ತೆಗೆದುಕೊಳ್ಳಕೂಡದು. ಯೋಚನೆ ಮಾಡಿ

ಮಾಡಿ ತಲೆ ಬಿಸಿ ಏರತೊಡಗಿತು. ದೇವಿ ಹೇಗೆ ತೊಗೋತಾಳೆ ನೋಡೇ ಬಿಡ್ತೀನಿ ಎನ್ನುವ ಮಟ್ಟ ಮುಟ್ಟಿತು. ಮುಂದೆ ಇನ್ನೂ ಏನೇನು ಆಲೋಚನೆಗಳು ನಾಯಿಕೊಡೆಗಳಂತೆ ಏಳು ತ್ತಿದ್ದುವೊ? ಅಷ್ಟರಲ್ಲಿ ಅಮ್ಮ ರೂಮಿನ ಬಾಗಿಲಲ್ಲಿ ನಿಂತು ಕೂಗಿದರು!

''ಏಳು ವಿಶಾಲಿ, ಆಗಲೇ ಆರು ಗಂಟೆ ಆಗಿಹೋಯ್ತು.''

ತಲೆ ಭಾರ, ಕಣ್ಣುರಿ, ಜೂಗರಿಕೆಗಳನ್ನು ಮೂಲೆಗೊತ್ತಿ ಎದ್ದೆ. ಅವಸರವಸರವಾಗಿ ಸ್ನಾನ ಮಾಡಿ, ರಾತ್ರಿಯೇ ತೆಗೆದಿರಿಸಿಕೊಂಡಿದ್ದ ಸಣ್ಣಂಚಿನ ಧರ್ಮಾವರದ ಸೀರೆ ಉಟ್ಟು ಕೊಂಡು ಸಿದ್ಧಳಾದೆ. ತಿಂಡಿ, ಕಾಫಿ ಮುಗಿಸಿ ಕಾರು ಹತ್ತಿದೆವು.

* * *

ಬಿಸಿಲಿಗಿನ್ನೂ ಯೌವನ ಬಂದಿರಲಿಲ್ಲ. ಕಾರಿನ ಕಿಟಕಿಯಿಂದ ತೂರಿ ಬರುತ್ತಿದ್ದ ತಂಗಾಳಿ ಚೇತೋಹಾರಿಯಾಗಿತ್ತು. ಕಾರಿನ ಚಕ್ರದ ಉರುಳುವಿಕೆಯೊಡನೆ ನನ್ನ ತಲೇಲೂ ಸುತ್ತು ತ್ತಿತ್ತು ದೇವಿ ತೊಗೋತಾಳೆಯೆ? ಹೇಗೆ ತೊಗೋತಾಳೆ ಅನ್ನುವ ಸವಾಲು.

ಕಾರು ನದಿ ಹತ್ತಿರ ನಿಂತಿತು. ಕಪಿಲೆಗೆ ಪೂಜೆ ಮಾಡಿ, ತಲೆಗೆ ನೀರು ಪ್ರೋಕ್ಷಿಸಿಕೊಂಡಿ ದ್ದಾಯ್ತು. ಕಾಲು ತೊಳೆದುಕೊಂಡು ಬಂದು ಕಾರಿನಲ್ಲಿ ಕುಳಿತೆವು. ದೇವಸ್ಥಾನದ ಹತ್ತಿರ ನೆರಳಿನಲ್ಲಿ ಕಾರು ನಿಲ್ಲಿಸಿದೆವು. ಚಪ್ಪಲಿಗಳನ್ನು ಕಾರಿನಲ್ಲೇ ಬಿಟ್ಟು, ಬುಟ್ಟಿಗಳನ್ನು ಹಿಡಿದು ದೇವಸ್ಥಾನಕ್ಕೆ ಹೋದೆವು.

ದಕ್ಷಿಣ ಕಾಶಿ ಎಂದು ಪ್ರಸಿದ್ಧವಾಗಿದ್ದ ನಂಜನಗೂಡಿನಲ್ಲಿ ಪ್ರತಿದಿನವೂ ಜನಜಾತ್ರೆಯೇ ಸೇರಿರುತ್ತಿತ್ತು. ಅಪ್ಪ ಮುಂದಾಗಿ ಹೋಗಿ ಸೀರೆಯನ್ನು ಕೊಟ್ಟು ದೇವಿಗೆ ಉಡಿಸಲು ಹೇಳಿ ಸೇವೆಗಳಿಗೆ ಚೀಟಿ ಬರೆಸಿ, ಹಣ ಕೊಟ್ಟು, ರಶೀತಿ ತೆಗೆದುಕೊಂಡರು.

ಗಣಪತಿಗೆ ಅಷ್ಟೋತ್ತರ ಸೇವೆ ಆಯಿತು. ಯಾವುದಕ್ಕೂ ಮೊದಲ ಪೂಜೆ ಅವನಿಗೆ ಸಲ್ಲ ಬೇಕಲ್ಲ! ಅಲ್ಲಿಂದ ಶಾರದಮ್ಮನವರ ಸನ್ನಿಧಿಗೆ




ಆಫೀಸಿನ ಫ್ಯಾನ್‌ಗಳನ್ನೆಲ್ಲ ರಿಪೇರಿ ಮಾಡಿಸಬೇಕು ಸಾರ್; ತಿರುಗುವಾಗ ಕಿರಿಕಿರಿ ಶಬ್ದ ಬರುವುದರಿಂದ ಸರಿಯಾಗಿ ನಿದ್ದೆ ಮಾಡಲಿಕ್ಕಾಗುವುದಿಲ್ಲ!

ಬಂದೆವು. ಸೇವೆಗೆ ಹೇಳಿ, ಹಣ್ಣು-ಕಾಯಿ-ಹೂವು ಇರಿಸಿದ್ದ ತಟ್ಟೆಯನ್ನು ಅರ್ಚಕರಿಗೆ ಕೊಟ್ಟು ತಲೆ ಎತ್ತಿದಾಗ ನಮಗೆಲ್ಲಾ ಆಘಾತ ವಾದಂತಾಯಿತು.

''ಇದೇನೂಂದ್ರೆ, ನಾನು ಅರ್ಪಿಸಿದ ಸೀರೆ ಯನ್ನು ಶಾರದಮ್ಮನವರಿಗೆ ಉಡಿಸಿಬಿಟ್ಟಿದಾರೆ? ನಾನು ಹೇಳಿದ್ದು ಪಾರ್ವತಮ್ಮನವರಿಗೇಂತ'' – ಪೂಜೆಯಲ್ಲಿ ಮಗ್ನರಾಗಿದ್ದ ಅರ್ಚಕರಿಗೆ ಕೇಳಿಸ ದಂತೆ ಅಮ್ಮ ಪಿಸುಗುಟ್ಟಿದರು. ನನಗೆ ಆದ ಅನುಭವ? ಮೈ ನಡುಗಿದ್ದು ಅರಿವಾಯಿತು. ಧನ್ಯತೆಯಿಂದ ನನ್ನ ಹೃದಯ ಬಿರಿಯು ವಂತಾಯ್ತು. ಕಣ್ಣಿನಲ್ಲಿ ಸಂತಸದ ಹನಿ! ಅರ್ಚಕರಿಗೆ ಹೇಳಲು ಅಮ್ಮ ಯತ್ನಿಸಿದಾಗ ಅಪ್ಪ ಕಣ್ಸನ್ನೆ ಮಾಡಿ ಸುಮ್ಮನಾಗಿಸಿದರು. ಮಂಗಳಾರತಿ ತೊಗೊಂಡು ಅಲ್ಲಿಂದ ಹೊರಟ ಮೇಲೆ ಅಪ್ಪ ಹೇಳಿದರು:

''ನೋಡೆ, ದೇವಿಗೆ ಸೀರೆ ಉಡಿಸಿಯಾದ ಮೇಲೆ ನಿಜ ಸಂಗತಿ ಹೀಗೇಂತ ನೀನು ಹೇಳೋದು ಚೆನ್ನಾಗಿರಲಿಲ್ಲ. ಪಾರ್ವತಮ್ನೋ ರೇನು ಶಾರದಮ್ನೋರೇನು? ಇಬ್ಬರೂ ದೇವಿ

ಯರೆ. ನೀನು ಮನಸ್ಸು ಚಿಕ್ಕದು ಮಾಡಿಕೋ ಬೇಡ.''

''ನಾನು ಆ ರಸೀತಿ ಬರೆಯೋರನ್ನ ಕೇಳೇ ಬಿಡ್ತೀನಿ. ಅವರಿಂದ ತಾನೇ ಈ ತಪ್ಪು ನಡೆಯುವಂತೆ ಆದದ್ದು. ಇವತ್ತು ನಮಗಾದದ್ದು ನಾಳೆ ಇನ್ನೊಬ್ಬರಿಗೆ ಆಗಬಾರದು. ಎಷ್ಟು ಆಸೆಯಿಂದ ಆ ಸೀರೆ ತಂದಿದ್ದೆ! ನನಗಾಗಿರುವ ನಿರಾಶೆಯ ಆಳ ನಿಮಗೆ ತಿಳೀದು. ಅದಕ್ಕೇ ನನ್ನನ್ನ ಮಾತಾಡಗೊಡಿಸದೆ ಸುಮ್ನಿರಿಸ್ತಿದೀರಿ.''

''ನೀವಿಬ್ರೂ ಹಿಂದಿನಿಂದ ಬಂದಿರಿ. ನಿಮಗೆ ಗೊತ್ತಿಲ್ಲ. ವಿಪರೀತ ಜನ ಇದ್ರು. ಮೊದಲು ಬಂದವರು ಬರೆಸಲಿ. ನಮ್ಮ ಸರದಿ ಬಂದಾಗ ನಾವು ಬರೆಸೋಣ ಅನ್ನುವಷ್ಟು ತಾಳ್ಮೆ ನಮ್ಮ ಜನರಿಗಿಲ್ಲ. ಹಿಂದೆ ನಿಂತುಕೊಂಡೇ ನೋಟು ಚಾಚಿ, ನಮ್ಮದು ಈ ಸೇವೆ ಬರೀರಿ ಅಂತ ಕೂಗ್ತಿದ್ರು. ಬರೆಯುವವರಿಗೂ ಕಕ್ಕಾಬಿಕ್ಕಿಯಾಗಿರಬೇಕು. ಹಾಗೆ ಬರೆದು ಬಿಟ್ಟಿದಾರೆ. ಏನೂ ತಪ್ಪಾಗಲಿಲ್ಲ ಬಿಡು. ಸೀರೆ ತುಂಬಾ ಚೆನ್ನಾಗಿ ಕಾಣ್ತಿತ್ತು. ಫಸ್ಟ್ ಕ್ಲಾಸ್ ಸೆಲೆಕ್ಷನ್.''

ಅಮ್ಮ ತೆಪ್ಪಗಾದರು. ಎಲ್ಲಾ ಕಡೆಯೂ ಸೇವೆಗಳು ಸಾಂಗವಾಗಿ ನೆರವೇರಿದುವು. ಸಂತೋಷ, ಸಂಭ್ರಮ ನನ್ನದಾಗಿತ್ತು. ಪಾರ್ವತಮ್ನೋರಿಗೆ ಸಹಸ್ರನಾಮ ಪೂಜೆ ನಡೆಯುತ್ತಿದ್ದಾಗ ದೇವಿಯ ಮುಖವನ್ನೇ ದಿಟ್ಟಿಸುತ್ತಿದ್ದೆ. ದೇವಿ ನಗುತ್ತಿರುವಂತೆ ತೋರಿತು. ಗೆಲುವಿನ ಭಾವನೆ ವಂದರಿಯಲ್ಲಿ ನೀರು ಸೋರಿ ಹೋಗುವಂತೆ ಇಳಿದು ಹೋಯಿತು. ನಮ್ಮ ಪೂಜೆಯಿಂದ ದೇವಿಗೆ ತೃಪ್ತಿಯಾಗಿದೆ ಎನ್ನಿಸಿ ಸಮಾಧಾನವಾಯಿತು. ಬುಟ್ಟಿಗಳನ್ನು ಎತ್ತಿಕೊಂಡು ಅಮ್ಮನನ್ನು ಹಿಂಬಾಲಿಸಿದೆ. ಕೊನೆಯ ಪೂಜೆ ಚಂಡಿಕೇಶ್ವರನದು. ಅಲ್ಲಿಯವರೆಗೆ ನಡೆಸಿದ ಸೇವೆಗಳ ವರದಿಯನ್ನು ಅಲ್ಲಿ ಒಪ್ಪಿಸಿ, ಹೊರಟೆವು.

ಮೈಸೂರಿಗೆ ಹೊರಟಾಗ ನನ್ನ ಮನಸ್ಸು ಗರಿಗೆದರಿ ಹಾರಾಡುತ್ತಿತ್ತು. ದಾರಿಯುದ್ದಕ್ಕೂ ಹರಟುತ್ತಲೇ ಇದ್ದೆ. ಅಪ್ಪ, ಅಮ್ಮನೂ ಹಿಂದೆ ಬೀಳಲಿಲ್ಲ. ಕೀಟಲೆ, ಕುಚೋದ್ಯಗಳೂ ನಡೆದುವು. ನಾವೆಲ್ಲಾ ಹಗುರವಾದ ಮನಸ್ಸಿನಿಂದ ಮನೆ ಸೇರಿದೆವು. ●



ತಮ್ಮ ಕುರ್ಚಿಯ ಮೇಲೆ ಕಣ್ಣಿಟ್ಟಿರುವ ಈತ, ಅದನ್ನು ಪಡೆಯುವುದಕ್ಕಾಗಿ ಸ್ವರ್ಗವಾಸಿ ಮತ್ತು ನರಕವಾಸಿ... ನಡುವೆ ಕೋಮುಗಲಭೆ ಹುಟ್ಟುಹಾಕಿದ್ದಾನೆ, ಪ್ರಭೋ! ಈತನನ್ನು ಆದಷ್ಟು ಬೇಗ ಮತ್ತೆ ಭೂಲೋಕಕ್ಕೆ ಕಳುಹಿಸುವುದೊಳ್ಳೆಯದು.

# ವಿಷಾದಿಸುತ್ತೇನೆ......

● ಶಂಪ

611, 'ಚಂದನ' 7ನೇ ಕ್ರಾಸ್
ಅನಿಕೇತನ ರಸ್ತೆ, ಕುವೆಂಪುನಗರ
ಮೈಸೂರು – 570 023.

ನನ್ನ ಮನೆಯಲ್ಲಿ, ಐವತ್ತರ ದಶಕದ ನನ್ನ ಪ್ರಾಚೀನ 'ಫೇವರ್‌ಲ್ಯುಬಾ' ವಾಚೂ ಸೇರಿದಂತೆ, ನಾಲ್ಕು ಕೈಗಡಿಯಾರಗಳೂ ಒಂದು ಗೋಡೆ ಗಡಿಯಾರವೂ ಎರಡು ಅಲಾರಮ್ ಗಡಿಯಾರ ಗಳೂ ಇವೆ. ನಮ್ಮ ಮನೆಯ ನಾಲ್ವರು ಸದಸ್ಯರಂತೆಯೇ ಈ ಏಳು 'ಟಿಕ್‌ಟಿಕ್' ಗೆಳೆಯಂದಿರೂ. ಇವುಗಳಲ್ಲಿ ಯಾವತ್ತೂ ಒಮ್ಮತವಿರುವುದಿಲ್ಲ. ನನ್ನ ಮಗ ಐದೂವರೆಗೆ ಅಲಾರಮ್ ಇಟ್ಟುಕೊಂಡು ಮಲಗಿದವನು, ಅದು ಕಿರುಚಿದೊಡನೆ ಏಳುವಾಗ, ನನ್ನ ಕೈಗಡಿಯಾರ ನಾಲ್ಕೂ ಮುಕ್ಕಾಲು ತೋರಿಸುತ್ತಿರುತ್ತದೆ. (ನನ್ನಂತೆಯೆ ಅದೂ ಹಿಂದುಳಿದ ವರ್ಗಕ್ಕೆ ಸೇರಿದೆ, ಅಲ್ಲದೆ ಸೋಮಾರಿ ಕೂಡ) 'ಇಷ್ಟು ಬೇಗ ಏಳಬೇಕಾದ ಅಗತ್ಯವಾದರೂ ಏನು?' ಎಂದು ಅವನಿಗೆ ಬಯ್ಯುತ್ತೇನೆ. ಮಕ್ಕಳು ಬೆಳಗ್ಗಿನ ನಿದ್ರೆಯಿಂದ ವಂಚಿತರಾಗಬಾರದೆಂಬ, ಹಾಗೂ ಅವರ 'ಬಾಯಿಪಾಠ' ಕಾರ್ಯಕ್ರಮಗಳಿಂದ ಅಪ್ಪ ಅಮ್ಮಂದಿರ ಬೆಳಗ್ಗಿನ ಸವಿನಿದ್ರೆ ಹಾಳಾಗಬಾರ ದೆಂಬ ಅಭಿಪ್ರಾಯ ನನ್ನದು. ಅಲಾರಮ್‌ನ ಕ್ರೂರ ಸದ್ದಿನಿಂದ ಎಚ್ಚರಗೊಂಡ ನನ್ನಾಕೆ ಗೋಡೆಗಡಿಯಾರ ನೋಡಿ 'ಆಗಲೇ ಏಳು ಗಂಟೆಯಾಯಿತೇ?' ಎಂದು ಗಡಿಬಿಡಿಯಿಂದ ಕಣ್ಣುಜ್ಜಿಕೊಳ್ಳುತ್ತ ಏಳುತ್ತಾಳೆ. ಆ ವೇಳೆಗೆ ಅಲಾರಮ್ ಗಡಿಯಾರದ ಗುಂಡಿಯೊತ್ತಿದ ನನ್ನ ಮಗರಾಯ ಮತ್ತೆ ಮುಸುಕೆಳೆದುಕೊಂಡು ನಿದ್ರಾವಶನಾಗಿರುತ್ತಾನೆ. ಮಗಳಿಗೆ ಈ ಯಾವ ಶಬ್ದ ಮಾಲಿನ್ಯದಿಂದಲೂ ತೊಂದರೆಯಿಲ್ಲ- ಆಟಮ್‌ಬಾಂಬೇ ಮಹಡಿಯ ಮೇಲಿಂದ ಬಿದ್ದರೂ ಅವಳು ಎಂಟು ಗಂಟೆಯವರೆಗೂ ಏಳುವುದಿಲ್ಲ. (ಅವಳೂ ಬೆಳಗ್ಗೆ ಐದಕ್ಕೇ ಅಲಾರಮ್ ಇಟ್ಟುಕೊಂಡಿರುತ್ತಾಳೆ-ಪ್ರತಿದಿನ. ಆ ಮಾತು ಬೇರೆ) 'ಈಗ ನಿಜವಾಗಿ ಎಷ್ಟು ಗಂಟೆರೀ' ಎಂದು ನನ್ನಾಕೆ ಕೇಳಿದಾಗ, ನಾನು ನಿರುತ್ತರಭೂಪನಾಗುತ್ತೇನೆ. ಯಾಕೆಂದರೆ 'ಸುಮಾರು' ಇಷ್ಟು ಗಂಟೆ ಎಂದು ಹೇಳಿದರೆ ನನ್ನವಳಿಗೆ ಸಾಲದು. ಕರೆಕ್ಟಾಗಿ ಹೇಳಬೇಕು- ಇಷ್ಟು ಗಂಟೇ ಇಷ್ಟು ಮಿನಿಟು ಮತ್ತು ಇಷ್ಟು ಸೆಕಂಡು ಎಂದು.



ಬೆಳಗ್ಗೆ ವೇಳೆಯಲ್ಲಾದರೂ ಈ ಗಡಿಯಾರ, ಗಳಲ್ಲಿ ಸಹಮತವಿರಲಿ ಎಂಬ ಆಶಯದಿಂದ ನಾನು ಪ್ರತಿದಿನ ಬೆಳಗ್ಗೆ ರೇಡಿಯೊ ಕಿವಿ ಹಿಂಡುವ ಸಂಪ್ರದಾಯ ಪ್ರಾರಂಭಿಸಿದ್ದೇನೆ. ಆರುಗಂಟೆಗೆ 'ವಂದೇ ಮಾತರಮ್' ಶುರುವಾಗುತ್ತಲೇ ನಾನು ಏಳೂ ಗಡಿಯಾರಗಳನ್ನು ಸರಿ ಮಾಡಿಡುತ್ತೇನೆ. (ಮಧ್ಯಾಹ್ನದ ವೇಳೆಗೆ ಅವು ಮತ್ತೆ ಬೇರೆ ಬೇರೆ ಸಮಯ ತೋರಿಸುತ್ತಿರುತ್ತವೆ) ಮೊನ್ನೆಯೂ ಹೀಗೆಯೇ 'ಸುಮಾರು ಆರು ಗಂಟೆಯಾಗುತ್ತಿರ ಬಹುದು, ಇನ್ನೇನು ಮೈಸೂರು ಕೇಂದ್ರದ ಕಾರ್ಯಕ್ರಮ ಪ್ರಾರಂಭವಾಗುತ್ತದೆ' ಎಂಬ ನಿರೀಕ್ಷೆಯಿಂದ, ರೇಡಿಯೋ ಎದುರು ಧ್ಯಾನ ಮಗ್ನನಾಗಿ ಕುಳಿತಿದ್ದೆ – ಅದು ಸ್ವಿಚ್ ಹಾಕಿ ಅದರ ಮಾಮೂಲಿ ಸ್ವರ ಕೇಳಿಸತೊಡಗಿದಾಗ, ಒಂದು ಬಗೆಯ ಅನಗತ್ಯ ಟೆನ್‌ಷನ್ ; ಇನ್ನೇನು ಆರು ಗಂಟೆಯಾಗಿ ಬಿಡುತ್ತದೆ ಎಂಬ ಸಂತೋಷ. ಆದರೆ, ಅರರರೇ, ವಂದೇ ಮಾತರಮ್ಮೂ ಇಲ್ಲ, ಗಿಂದೇಮಾತರಮ್ಮೂ ಇಲ್ಲ. ಮಾಮೂಲಿ ಶ್ರುತಿಯೇ.... ನಾನಂತೂ ಕಾದದ್ದೇ ಕಾದದ್ದು. ಎಷ್ಟೋ ಹೊತ್ತಿನ ಬಳಿಕ ಕೇಳಿ ಬಂದದ್ದು; 'ಪ್ರಸಾರಕ್ಕೆ ಅಡಚಣೆಯಾದ ಬಗ್ಗೆ ನಿರೂಪಕನ ವಿಷಾದ' ಸೂಚನೆ ಹಾಗೂ ಯಾವುದೋ ಭಕ್ತಿ ಗೀತೆಯ ಎಷ್ಟನೆಯದೋ ಸಾಲಿನ ಮುಂದಿನ ಭಾಗ-ತುಂಬ ವಿಷಾದವಾಯಿತು – ನಿಜವಾದ ಸಮಯವನ್ನು ತಿಳಿಯಲಾರೆನಾದೆನಲ್ಲ ಎಂದು. ಎಂಥ ರೇಡಿಯೋ ಎಂಥ ಆಕಾಶವಾಣಿ ಕೇಂದ್ರ! 'ಹರ ಕೊಲ್ವಲ್ ಪರಕಾಯ್ವನೇ ?'

ವಿಷಾದ ಸೂಚನೆಯಿಂದಲೇ ಹಾಸ್ಯ ಲೇಖನ ಪ್ರಾರಂಭಿಸುತ್ತಿರುವ ನನ್ನ ಬಗ್ಗೆ ನೀವು ಅಸಮಾಧಾನಪಡಬಹುದು. ಆದರೆ ಪ್ರಿಯ ಓದುಗರೇ, ಗೀತೆಯಂಥ ಮಹಾಕೃತಿಯೇ ಪ್ರಾರಂಭವಾಗುವುದು (ಅರ್ಜುನನ) ವಿಷಾದ (ಯೋಗ)ದಿಂದ ಎಂಬುದನ್ನು ಮರೆಯ ಬೇಡಿ.

ಹರಟೆ ಬರೆಯುವ ಸಂದರ್ಭದಲ್ಲಿ ನನ್ನ ಮನೆಗೇ ಸಂಬಂಧಿಸಿದ ಕೆಲವು ಖಾಸಗಿ ವಿಷಯ ಗಳನ್ನು ಬಹಿರಂಗಗೊಳಿಸಬೇಕಾಗಿ ಬಂದುದಕ್ಕೆ ವಿಷಾದಿಸುತ್ತೇನೆ. ಆದರೆ, ನಿಜ ಹೇಳುವು

**ಗೀತೆಯಂಥ ಮಹಾಕೃತಿ ಪ್ರಾರಂಭವಾಗುವುದೇ ವಿಷಾದಯೋಗದಿಂದ- ವಿಷಾದಿಸಲು ಕಲಿತವರು ಬದುಕಿನಲ್ಲಿ ಗೆದ್ದಂತೆ**

ದಾದರೆ, ವಿಷಾದಿಸಲು, ಯಾರೂ ಎಂದೂ ವಿಷಾದಿಸಬೇಕಾಗಿಯೇ ಇಲ್ಲ. ವಿಷಾದಿಸು ವುದು, ನಿಸ್ಸಂದೇಹವಾಗಿಯೂ, ಸಂತೋಷದ ವಿಷಯವೇ.

'ವಿಷಾದಿಸುತ್ತೇನೆ / ವೆ' ಎಂಬ ಈ ಷಡಕ್ಷರಿ ಒಂದು ತಾರಕಮಂತ್ರದಂತೆ, ಇದು ನಮ್ಮೆಲ್ಲ ದೌರ್ಬಲ್ಯಗಳಿಗೂ ರಾಮಬಾಣ. ವಿಷಾದಿಸಲು ನೀವು ಕಲಿತುಬಿಟ್ಟರೆ, ಆಗ ಬದುಕಿನಲ್ಲಿ ಸಂಪೂರ್ಣ ಗೆದ್ದಹಾಗೆಯೇ. ನಿಮ್ಮಿಂದ ತಿಳಿಯದೆ ಅಥವಾ ತಿಳಿದೂ ಯಾವ ತಪ್ಪೇ ಆಗಿರಲಿ – ಈ ಷಡಕ್ಷರಿಯನ್ನು ಪಠಿಸಿ ನೀವು ಅಪಾಯದಿಂದ ನುಣುಚಿಕೊಳ್ಳಬಹುದು.

....ನನ್ನ ವಿವಾಹ ಪೂರ್ವ ಪ್ರಣಯದ ಕಥೆ ಇಲ್ಲಿ ನೆನಪಿಗೆ ಬರುತ್ತಿದೆ. ಹೌದು. ಸಾಹಿತ್ಯ ಸೆಮಿನಾರೊಂದರಲ್ಲಿ ನನಗವಳ ಪರಿಚಯ ವಾಗಿತ್ತು. ನನ್ನ ಕವನಗಳನ್ನು ಅವಳು ಮೆಚ್ಚಿ ಮಾತನಾಡಿದ್ದಳು. ನನ್ನ ಕವನಗಳು ಮೆಚ್ಚುಗೆ ಯಾದದ್ದು ಅವಳಿಗೆ ಮಾತ್ರ. ನನಗೆ ಸಹಜ ವಾಗಿಯೆ ಎಷ್ಟು ಸಂತೋಷವಾಗ ಬೇಡ – ನನ್ನ ಕವನಗಳನ್ನು ಮೆಚ್ಚುವ ಹೃದಯ ಈ ಜಗತ್ತಿನಲ್ಲಿ ಒಂದಾದರೂ ಇದೆಯಲ್ಲ ಎಂದು. ಆ ದಿನದ ಗೋಷ್ಠಿಯ ವಿಷಯ; ಸಾಹಿತ್ಯದಲ್ಲಿ ಪ್ರೇಮ: ಋಗ್ವೇದದಿಂದ ಬಂಡಾಯ ಕಾವ್ಯದವರೆಗೆ? ವಿದ್ವಾಂಸರ ಪ್ರೌಢ ಪ್ರಬಂಧಗಳನ್ನು ಕೇಳ ಕೇಳು ತ್ತಲೇ ನಾವು ಪ್ರೇಮದ ಬಗ್ಗೆ, ಅದರ ಸಾಮರ್ಥ್ಯದ ಬಗ್ಗೆ ಚರ್ಚಿಸಿದೆವು. ನಾವು ಪರಸ್ಪರ ಪ್ರೇಮಿಸಿದೆವು ಕೂಡ. ನಾನು

ಮದುವೆಯ ಪ್ರಸ್ತಾಪವನ್ನೂ ಎತ್ತಿದೆ. 'ಊರಿಗೆ ಹೋದ ಮೇಲೆ ಪತ್ರ ಬರೆಯುತ್ತೇನೆ' ಎಂಬ ಆಶ್ವಾಸನೆ ನೀಡಿ ಹೊರಟುಹೋದ ಅವಳಿಂದ ನನಗೆ ಅನಂತರ ಬಂದ ಪತ್ರದ ಒಕ್ಕಣಿ ಇಷ್ಟೆ : 'ನಿಮ್ಮ ಕವನಗಳನ್ನು ಮೆಚ್ಚುವಂತೆ, ನಿಮ್ಮನ್ನು ಮೆಚ್ಚಲು ಸಾಧ್ಯವಾಗದುದಕ್ಕಾಗಿ ವಿಷಾದಿಸುತ್ತೇನೆ' (ಆ ಪತ್ರವನ್ನು ನಾನಿನ್ನೂ ಜೋಪಾನವಾಗಿ ಇರಿಸಿಕೊಂಡಿದ್ದೇನೆ; ನನ್ನ ಹೆಂಡತಿಯ ಕಣ್ಣಿಗೆ ಬೀಳದಂತೆ ರಹಸ್ಯವಾಗಿ ಕೂಡ)....

ನನ್ನ ನಿಮ್ಮಂತಹ ಹುಲುಮಾನವರಿಗಷ್ಟೇ ಅಲ್ಲ, ಸರಕಾರಿ– ಖಾಸಗಿ ಸಂಘ ಸಂಸ್ಥೆಗಳಿಗೂ ಈ ಷಡಕ್ಷರೀ ಮಂತ್ರ ಆಪತ್ಕಾಲದಲ್ಲಿ ರಕ್ಷಣೆಗೆ ಬರುತ್ತದೆ. ಈ ಮಂತ್ರವಿಲ್ಲದೆ ಹೋಗಿದ್ದಲ್ಲಿ, ಇಂಥ ಸಂಘ ಸಂಸ್ಥೆಗಳು ಜನರಿಂದ ಅದೆಷ್ಟು ಪ್ರತಿಭಟನೆಯನ್ನು ಎದುರಿಸಬೇಕಾಗಿ ಬರುತ್ತಿತ್ತೋ! ಉದಾಹರಣೆಗೆ, ನಮ್ಮ ನಗರದ ಜಲಮಂಡಳಿಯನ್ನೆ ತೆಗೆದುಕೊಳ್ಳಿ. ವಾರಕ್ಕೆ ನಾಲ್ಕುದಿನವಾದರೂ ಅದು ವಿಷಾದ ಸೂಚಿಸುತ್ತದೆ– ನಾಗರಿಕರಿಗೆ ನೀರು ಸರಬರಾಜು ಮಾಡಲು ಸಾಧ್ಯವಾಗದುದಕ್ಕಾಗಿ. ಕರ್ನಾಟಕ ವಿದ್ಯುತ್ ಮಂಡಳಿಯಂತೂ ಯಾವಾಗ ವಿಷಾದ ಸೂಚಿಸುತ್ತದೆಂದು ಹೇಳಲು ಯಾವ ಜ್ಯೋತಿಷಿಗೂ ಸಾಧ್ಯವಿಲ್ಲ. ಬೆಂಗಳೂರು ದೂರದರ್ಶನವಂತೂ ಮೂರುಮೂರು ಭಾಷೆಗಳಲ್ಲಿ ವಿಷಾದ ಸೂಚಿಸುತ್ತದೆ– ದಿನದಲ್ಲಿ ನೂರಾರು ಸಾರಿ. ರೈಲ್ವೆ ನಿಲ್ದಾಣ ಬಸ್‌ಸ್ಟ್ಯಾಂಡ್‌ಗಳಲ್ಲಿಯೂ ಈ ಮಂತ್ರಪಠನ ಅಖಂಡವಾಗಿ ನಡೆಯುತ್ತಲೇ ಇರುತ್ತದೆ. ('ಇಂದು ಮಿರಜ್‌ಗಾಡಿ ಏಳುಗಂಟೆಗಳಷ್ಟು ಮಾತ್ರ ತಡವಾಗಿ ಬರುತ್ತದೆಂದು ತಿಳಿಸಲು ವಿಷಾದಿಸುತ್ತದೆ' – ಇತ್ಯಾದಿ ಇತ್ಯಾದಿ) ವಿಮಾನ ನಿಲ್ದಾಣಗಳಲ್ಲಂತೂ ವಿಷಾದಿಸುವುದು ದೈನಂದಿನ ಗೋಳೇ ಆಗಿದೆ.

ವಿಷಾದ ಸೂಚಿಸುವುದು ಒಂದು ಕಲೆ. ಅದನ್ನೂ ಸತತಾಭ್ಯಾಸ ಮಾಡಿ ಸಿದ್ಧಿಸಿಕೊಳ್ಳಬೇಕು. ವಿಷಾದಿಸಲಿಕ್ಕೂ ಪ್ರತ್ಯೇಕ ನಯ ನಾಜೂಕುಗಳಿವೆ. (ನಮ್ಮ ನಗರದ ಟೆಲಿಫೋನ್ ಎಕ್ಸ್‌ಛೇಂಜಿನಲ್ಲಿ ನೌಕರಿಯಲ್ಲಿರುವ ಹುಡುಗಿಯರು ಎಷ್ಟು ಸೊಗಸಾಗಿ ಇಂಗ್ಲಿಷಿನಲ್ಲಿ ವಿಷಾದಿಸುತ್ತಾರೆ ಎಂದರೆ, ಆಗಾಗ ಅವರಿಗೆ ಏನಾದರೂ ಕಾರಣ ಹುಡುಕಿ ಅಥವಾ ವಿನಾ ಕಾರಣವಾಗಿ, ಫೋನ್ ಮಾಡುತ್ತಲೇ ಇರೋಣ ಎನಿಸುತ್ತದೆ.) ವಿಷಾದ ಸೂಚಿಸುವ ಕಲೆಯಲ್ಲಿ ಹೆಚ್ಚು ನೈಪುಣ್ಯ ಸಾಧಿಸಿರುವವರೆಂದರೆ ಪತ್ರಿಕಾ ಸಂಪಾದಕರು. ಬರಹಗಾರರು ಕಳಿಸಿದ ಲೇಖನಗಳು ಪ್ರಕಟಣೆಗೆ ಅಯೋಗ್ಯವೆಂದು ಯಾವ ಪತ್ರಿಕಾ ಸಂಪಾದಕರೂ ಎಂದೂ ಹೇಳುವುದಿಲ್ಲ. ಅವರು ಲೇಖಕರ ಬರಹಗಳನ್ನು ಸ್ವೀಕರಿಸದೆ ವಾಪಸ್ ಕಳಿಸುವುದು– ಅವರ ಕಛೇರಿಯಲ್ಲಿ ಆಗಲೇ ಇನ್ನೇಳೆಂಟು ವರ್ಷಗಳ ಪ್ರಕಟಣೆಗೆ ಸಾಕಾಗುವಷ್ಟು ಹಸ್ತಪ್ರತಿಗಳು ಗುಡ್ಡೆ ಬಿದ್ದಿರುವುದರಿಂದ. ಲೇಖಕರು ಕಳಿಸಿದ ಉತ್ಕೃಷ್ಟ ಬರಹಗಳನ್ನು ಪ್ರಕಟಿಸಲಾಗದ್ದಕ್ಕಾಗಿ ಸಂಪಾದಕರು ತೀವ್ರವಾಗಿ ವಿಷಾದಿಸುತ್ತಾರೆ. ವಿಷಾದ ಸೂಚನೆ ತೀವ್ರವಾದಷ್ಟೂ ಅದರಿಂದುಂಟಾಗುವ ಪರಿಣಾಮ ಅಧಿಕ. ಪತ್ರಿಕಾ ಸಂಪಾದಕರುಗಳಿಂದ ಅಸ್ವೀಕೃತ ಲೇಖನಗಳೊಂದಿಗೆ ಬರುವ ವಿಷಾದ ಪತ್ರಗಳು ಲೇಖಕನ 'ಮನಸ್ಸಿಗೆ ಮುದ' ನೀಡುತ್ತವೆ. ಇನ್ನಷ್ಟು ಲೇಖನಗಳನ್ನು ಪತ್ರಿಕೆಗಳಿಗೆ ಕಳುಹಿಸಿ, ಸಂಪಾದಕರಿಗೆ ಇನ್ನಷ್ಟು ವಿಷಾದವನ್ನುಂಟು ಮಾಡಲು ಲೇಖಕ ತಯಾರಿ ನಡೆಸುತ್ತಾನೆ. ಪತ್ರಿಕಾ ಸಂಪಾದಕರುಗಳಿಂದ ಬರುವ ವಿಷಾದ ಪತ್ರವೊಂದೊಂದೂ ಒಂದೊಂದು ಶೈಲಿಯಲ್ಲಿರುತ್ತದೆ; ಒಂದೊಂದು ಪತ್ರವೂ ಒಂದೊಂದು ಬಣ್ಣ ದಲ್ಲಿರುತ್ತದೆ.

ನನ್ನ ಮಿತ್ರನೊಬ್ಬನಿದ್ದ. (ಈಗಲೂ ಅವನಿದ್ದಾನೆ) ಅವನು ಉದಯೋನ್ಮುಖ ಲೇಖಕನಾಗಿದ್ದಾಗ, (ಈಗಲೂ ಅವನು ಉದಯೋನ್ಮುಖ ಲೇಖಕನೇ ಆಗಿ ಉಳಿದಿದ್ದಾನೆ) ಪತ್ರಿಕಾ ಸಂಪಾದಕರುಗಳ ವಿಷಾದ ಪತ್ರಗಳನ್ನು ಸಂಗ್ರಹಿಸುವ ವಿಶಿಷ್ಟ ಹವ್ಯಾಸ (ಅಥವಾ ಹುಚ್ಚು) ಇತ್ತು. (ಈಗಲೂ ಇದೆ-ಆ ಹುಚ್ಚು!) ವಿಷಾದ ಪತ್ರಗಳು ಅಂಚೆಯಲ್ಲಿ ಬಂದಾಗಲೆಲ್ಲ ಅವನು ಸಂತೋಷೋದ್ರೇಕಗೊಳ್ಳುತ್ತಿದ್ದ. ಅದನ್ನು ತಂದ ಅಂಚೆಯ

ಅಣ್ಣನಿಗೆ ಭಕ್ಷೀಸು ನೀಡುತ್ತಿದ್ದ. ಈಗ ಅವನ ಬೀರುವಿನ ತುಂಬ ವರ್ಣರಂಜಿತ ವಿಷಾದ ಪತ್ರಗಳೇ. ಇವು ಅವನ ಮೇಲೆ ಎಂಥ ಗಾಢ ಪರಿಣಾಮ ಬೀರಿದವೆಂದರೆ, ಅವನು ಒಂದು ದಿನ ತನ್ನ ಹೆಸರನ್ನು 'ವಿಷಾದಾನಂದ' ಎಂದೇ ಬದಲಾಯಿಸಿಕೊಂಡ. ಈಗಲೂ ಈ ಹೊಸ ಕಾವ್ಯನಾಮದಲ್ಲಿ ಅವನು ಬರೆದು ಪತ್ರಿಕೆಗಳಿಗೆ ಕಳಿಸುವ ಲೇಖನಗಳು ಅಸ್ವೀಕೃತವಾಗಿ ಮರಳಿ ಬರುತ್ತಲೇ ಇರುತ್ತವೆ. ಸದ್ಯದಲ್ಲಿಯೆ ಈ ವಿಷಾದ ಪತ್ರಗಳ ಪ್ರದರ್ಶನವೊಂದನ್ನು ನಡೆಸಲು ಅವನು ನಿರ್ಧರಿಸಿದ್ದಾನೆ. ಕನ್ನಡದ ಒಬ್ಬ ವಿಖ್ಯಾತ ಲೇಖಕನಾಗಿ ತಾನು ಸಂಗ್ರಹಿಸಿದ ವಿಷಾದಪತ್ರಗಳ ಸಂಖ್ಯೆ ಹತ್ತು ಸಾವಿರ ತಲುಪಿದೊಡನೆ, ತನ್ನ ಹೆಸರು ಗಿನ್ನೆಸ್ ಪುಸ್ತಕದಲ್ಲಿ ದಾಖಲಾಗುತ್ತದೆ ಎಂಬ ಅಚಲ ವಿಶ್ವಾಸ-ನಮ್ಮ 'ವಿಷಾದಾನಂದ' ಲೇಖಕ ಮಹಾಶಯನದು.

ಕ್ಷಮಿಸಿ, ಈ ಲೇಖನವನ್ನು ಇನ್ನಷ್ಟು ಮುಂದುವರಿಸಲು ತೊಂದರೆ ಬಂದಿದೆ. 'ಗಂಟೆ ಎಷ್ಟಾಯಿತುರೀ' ಎಂದು ಅಡಿಗೆಮನೆಯಿಂದ ಅವಳು ಕೂಗುತ್ತಿದ್ದಾಳೆ. ಮಗಳನ್ನೂ ಮಗನನ್ನೂ ಎಚ್ಚರಿಸಬೇಕಾಗಿದೆ. ಆದ್ದರಿಂದ ಇಲ್ಲಿಗೇ ನಿಲ್ಲಿಸಬೇಕಾಗಿ ಬಂದುದಕ್ಕಾಗಿ ವಿಷಾದಿಸುತ್ತೇನೆ.

ಕೊನೆಯದಾಗಿ, ನನ್ನ ಪ್ರಿಯ ಓದುಗ ಮಹಾಶಯರೆ, ಈ ಲೇಖನವನ್ನು ಪ್ರಕಟಿಸಲು ಸಾಧ್ಯವಿಲ್ಲವೆಂದು ಪತ್ರಿಕಾ ಸಂಪಾದಕರೇನಾದರೂ ವಿಷಾದಿಸಿದ್ದೇ ಆದರೆ, ಆಗ ನಿಮಗಾಗುವ ನಷ್ಟ(ಅಥವಾ ಲಾಭ?)ಕ್ಕಾಗಿ ನಾನು ವಿಷಾದಿಸುತ್ತೇನೆ.

●

ನನ್ನೂರು ನನ್ನ ಜನ

## ನಂಜನಗೂಡಿನ ಪಚ್ಚೆಲಿಂಗ ಸ್ವಾಮಿ

ನಂಜನಗೂಡು ಇತಿಹಾಸ ಪ್ರಸಿದ್ಧವಾದ ಸ್ಥಳ. ಕಪಿಲಾ ನದಿ ದಡದಲ್ಲಿರುವ ಇದರ ಪ್ರಮುಖ ಆಕರ್ಷಣೆಯೆಂದರೆ ಇಲ್ಲಿರುವ ಶ್ರೀಕಂಠೇಶ್ವರ ಸ್ವಾಮಿಯವರ ದೇವಸ್ಥಾನ. ನಂಜನಗೂಡು ದಕ್ಷಿಣ ಕಾಶಿಯೆಂದೇ ಪ್ರಸಿದ್ಧವಾಗಿದೆ. ದಿನವೂ ಸಾವಿರಾರು ಜನ ಯಾತ್ರಿಕರು ಬಂದು ಸ್ವಾಮಿಯ ದರ್ಶನ ಮಾಡುತ್ತಾರೆ.

ಇಲ್ಲಿರುವ ಪಾರ್ವತಿ ದೇವಿಯವರ ಪ್ರತಿಮೆ ಬಹಳ ಮುದ್ದಾಗಿದೆ. ಇಲ್ಲಿಗೆ ಬರುವ ಯಾತ್ರಿಕರಿಗಾಗಿ ಇಲ್ಲೊಂದು ಒಳ್ಳೆಯ ಛತ್ರವಿದೆ. ಕಪಿಲಾ ನದಿಯ ಸ್ನಾನಘಟ್ಟದಲ್ಲಿ ಮುಡಿಕೊಡುವ ಭಕ್ತರನ್ನು ನೋಡಬಹುದು. ಇಲ್ಲಿಯ ರಸಬಾಳೆ, ನಂಜನಗೂಡಿನ ರಸಬಾಳೆಯೆಂದೇ ಪ್ರಸಿದ್ಧವಾಗಿದೆ.

ಹಿಂದೆ ಟಿಪ್ಪುಸುಲ್ತಾನರು ಶ್ರೀರಂಗಪಟ್ಟಣದಲ್ಲಿ ಆಳುತ್ತಿದ್ದ ಕಾಲದಲ್ಲಿ ಅರಮನೆಗೆ ಸೇರಿದ ಒಂದು ಆನೆಯ ಕಣ್ಣು ಕುರುಡಾಯಿತು. ಆಗ ಟಿಪ್ಪುಸುಲ್ತಾನರು ''ನಿಮ್ಮ ದೇವರು ಬಹಳ ಸತ್ಯ ಅಂತ ಹೇಳ್ತೀರಲ್ರಿ, ಎಲ್ಲಿ ನಿಮ್ಮ ದೇವರ ಕೃಪೆಯಿಂದ ನಮ್ಮ ಆನೆಯ ಕುರುಡುತನವನ್ನು ಹೋಗಲಾಡಿಸಿ'' ಎಂದು ಹೇಳಿದಾಗ ಅರ್ಚಕರು ಬಹಳ ಭಕ್ತಿಯಿಂದ ಸ್ವಾಮಿಯನ್ನು ಪ್ರಾರ್ಥಿಸಿದಾಗ ಆನೆಯ ಕಣ್ಣು ಬಂತು. ಇದನ್ನು ನೋಡಿದ ಟಿಪ್ಪು ಸುಲ್ತಾನರು ತಮ್ಮ ಕೃತಜ್ಞತೆಯ ಸೂಚಕವಾಗಿ ಪಚ್ಚೆಗಳಿಂದ ಮಾಡಿರುವ ಲಿಂಗವನ್ನು ದೇವಸ್ಥಾನಕ್ಕೆ ಅರ್ಪಿಸಿದರು. ಈಗಲೂ ದೇವಸ್ಥಾನದಲ್ಲಿ ಪಚ್ಚೆಲಿಂಗ ಸ್ವಾಮಿಯನ್ನು ನೋಡಬಹುದು.

● ಕೆ. ಎಸ್. ಲಕ್ಷ್ಮಿ, ಕೊಪ್ಪ

ಖೊಕ್ ಧಾರಾವಾಹಿ – 10

# ಶಾಲಿನಿ



● ಸಿ. ಎನ್. ಮುಕ್ತಾ

ಶಶಿಧರನ ಜೊತೆಯಲ್ಲಿದ್ದವರನ್ನು ನೋಡಿದೊಡನೆ ಹರಿಪ್ರಸಾದ್ ಕುರ್ಚಿಯಿಂದ ಹಾರಿ ಬಾಗಿಲಿಗೆ ಧಾವಿಸಿ, ''ಬಾರೋ ಚಂದ್ರು ನಿನ್ನನ್ನು ನೋಡಿ ಎಷ್ಟು ದಿನಗಳಾಯಿತಲ್ಲೋ? ಈಗಲೂ ಮೊದಲಿನಂತೆ ಇದ್ದೀಯಲ್ಲೋ? ಬಾಬಾ...'' ಎಂದು ಸ್ವಾಗತಿಸಿದರು. ಆತ ಸೋಫಾದಲ್ಲಿ ಕುಳಿತು ಶಶಿಧರನನ್ನು ತೋರಿಸಿ ಹೇಳಿದರು ''ಇವನು ನನ್ನ ಮಗ ಶಶಿಧರ್. ನಿನ್ನ ಮಗಳ ಕಾಲೇಜಿನಲ್ಲೇ ಲೆಕ್ಚರರ್''

''ಹೌದೇನಯ್ಯ? ನನ್ನ ಮಗಳು ಹೇಳಲೇ ಇಲ್ಲವಲ್ಲಾ?''

''ಅವರಿಗೆ ನೀವಿಬ್ಬರು ಪರಿಚಯಾಂತ ಹೇಗೆ ಗೊತ್ತಾಗಲು ಸಾಧ್ಯ?'' ಎಂದರು ಶಶಿಧರ್. ಶಾಲಿನಿ ತಂದೆಯ ಕುರ್ಚಿಗೆ ಒರಗಿ ಮುಗುಳ್ನಗೆ ಬೀರುತ್ತಾ ನಿಂತಿದ್ದಳು– ''ನಮಸ್ಕಾರ ಸಾರ್'' ಎಂದಳು.

''ಶಾಲಿನಿ ತಿಂಡಿ ತೊಗೊಂಡು ಬಾ'' ತಂದೆ ಹೇಳಿದಾಗ ಅವಳು ಜಿಂಕೆಯಂತೆ ಒಳಗೆ ಹಾರಿದಳು. ಅವಳು ತಿಂಡಿಯ ತಟ್ಟೆಗಳನ್ನು ತಂದಾಗ ಶಶಿಧರನ ತಂದೆ ಹೇಳುತ್ತಿದ್ದುದು ಕೇಳಿಸಿತು ''ಹರಿ, ನಿನ್ನ ಹತ್ತಿರ ಕೊಂಚ ಮಾತಾಡಬೇಕಿತ್ತು.''

ಅವಳೆದೆ ನಗಾರಿಯಾಯಿತು. ಇವರಿಬ್ಬರೂ ಯಾವ ವಿಚಾರ ಹೇಳಲು ಬಂದಿರಬಹುದು? ದಿವಾಕರನ ಬಗ್ಗೆ ಹೇಳಲು ಬಂದಿರಬಹುದೇ? ಇರಲಾರದು ಎಂದಿತು ಮನಸ್ಸು.

''ಕಾಲೇಜಿಗೆ ಹೋಗಲ್ವೇನೆ?'' ತಾಯಿ ಕೂಗಿದಾಗ ಅವಳು ಸಿದ್ಧಳಾದಳು. ಅವಳ ಗಮನವೆಲ್ಲಾ ಹೊರಗಡೆಯೇ ಇತ್ತು. ಅವರು ಏನು



ಹೇಳಿದರೋ ತಿಳಿಯಲಿಲ್ಲ. ತಾಯಿ ಕೊಟ್ಟ ಕಾಫಿ ಕುಡಿದು ಅವರು ಹೊರಟಾಗ ಅವಳೂ ಹೊರಗೆ ಬಂದು ನಗೆಚೆಲ್ಲಿ ಬೀಳ್ಕೊಟ್ಟಳು.

ಬಸ್ ಹತ್ತಿದಾಗ ದಿವಾಕರನ ನೆನಪು ಕಾಡಿತು. ಈ ದಿನ ದಿವಾಕರ ತನ್ನನ್ನು ಏನಾದರೂ ಕೇಳಿದರೆ ಏನು ಹೇಳುವುದು? 'ನನಗೀಗಲೇ ಮದುವೆಯ ಯೋಚನೆ ಇಲ್ಲ' ಎಂದು ಬಿಡಲೇ? ದಿವಾಕರನ ಬಳಿ ಆ ರೀತಿ ಸುಳ್ಳು ಹೇಳಲು ಸಾಧ್ಯವೇ? ಅವನ ಗೆಳೆತನ ತನಗೆ ಸಂತಸ ತಂದಿಲ್ಲವೆ? ಆದರೂ ಮನಸ್ಸು ನಿರ್ಧಾರ ತೆಗೆದುಕೊಳ್ಳಲು ಏಕೆ ಹಿಂಜರಿಯುತ್ತಿದೆ?

ಬೆಳಗ್ಗೆ ತಾನೇ ತಾಯಿ ಹೇಳಿದ ನೇರವಾದ ಮಾತುಗಳು ನೆನಪಾದವು ''ಶಾಲಿ, ನಿನಗೆ ಪ್ರತೀಕನಿಗಿಂತ ಒಳ್ಳೆಯ ಗಂಡು ಸಿಗುವುದಿಲ್ಲ. ಅವನು ಬಹಳ ಒಳ್ಳೆಯ ಹುಡುಗ, ತುಂಬಾ ತಾಳ್ಮೆಯಿದೆ. ಅವನಿಗೆ ಅವನ ಮನೆಯವರಿಗೆ ನಿನ್ನನ್ನು ಕಂಡರೆ ಇಷ್ಟವಿದೆ. ಎರಡನೆ ಯೋಚನೆ ಮಾಡದೆ ಒಪ್ಪಿಕೋ. ಇಂತಹ ವಿಚಾರಗಳಲ್ಲಿ ದೊಡ್ಡವರು ಹೇಳಿದಂತೆ ಕೇಳುವುದು ಒಳ್ಳೆಯದು'' ಎಂದಿದ್ದರಲ್ಲವೆ?

ಅಮ್ಮನಿಗೆ ಪ್ರತೀಕನ ಬಗ್ಗೆ ಒಲವು ಎಂಬುದು ಸ್ಪಷ್ಟವಾಗಿತ್ತು. ಆದರೆ ತಂದೆಯ ಅಭಿಪ್ರಾಯ ವೇನೆಂಬುದು ತಿಳಿದಿರಲಿಲ್ಲ.

ಕಾಲೇಜಿನಲ್ಲಿ ದಿವಾಕರ ಕಾಣದಿದ್ದಾಗ ಆತಂಕವಾಯಿತು. ಶಶಿಧರ್ ಕೂಡಾ ಬಂದಿರಲಿಲ್ಲ. ಬೆಳಗಿನ ತರಗತಿಗಳಿಗೆ ಹಾಜರಾಗಿ, ಮಧ್ಯಾಹ್ನ ಮನೆಗೆ ಬಂದಾಗ ತಂದೆ ಊಟಕ್ಕೆ ಕುಳಿತಿದ್ದರು. ತಾಯಿಯ ಮುಖ ಊದಿತ್ತು.

''ಶಾಲು, ಮುಂದಿನವಾರ ಮೈಸೂರಿಗೆ ಹೋಗೋಣ್ವಾ? ಪಂಕಜ ಕಾಗದ ಬರೆದಿದ್ದಾಳೆ'' ತಂದೆ ಕೇಳಿದರು.

ಪಂಕಜ ಹರಿಪ್ರಸಾದರ ತಂಗಿ. ಅಣ್ಣ-ಅತ್ತಿಗೆ-ಶಾಲಿನಿಯ ಬಗ್ಗೆ ಅವರಿಗೆ ವಿಶೇಷ ಮಮತೆ. ಅವರ ಗಂಡ ಬ್ಯಾಂಕೊಂದರಲ್ಲಿ ಆಫೀಸರ್. ಆ ದಂಪತಿಗಳಿಗೆ ಮಕ್ಕಳಿರಲಿಲ್ಲ. ಶಾಲಿನಿಯ ತಾಯಿಗೆ ಮೈಸೂರು ಪ್ರವಾಸ ಇಷ್ಟವಿರಲಿಲ್ಲ. ಆದರೆ ಶಾಲಿನಿ ಹಟ ಹಿಡಿದಳು, ''ನಾನು ದಸರಾ ನೋಡಬೇಕು,

**ಉಡುಪಿಯಲ್ಲಿ ಭೇಟಿಯಾಗಿದ್ದ ದಿವಾಕರ. ಆನಂತರ ತಾಯಿಯ ಸಂಬಂಧಿಕನಾಗಿ ಬಂದ ಡಾ। ಪ್ರತೀಕ. ಜೊತೆಗೆ, ಕಾಲೇಜ್‌ನಲ್ಲಿ ಉಪನ್ಯಾಸಕನಾಗಿರುವ ಶಶಿಧರ – ಶಾಲಿನಿ ಮೂವರನ್ನು ತಳ್ಳಿಹಾಕುವಂತಿರಲಿಲ್ಲ... ಮುಂದೆ...**

ಹೋಗೋಣಾಮ್ಮ.''

ತಂದೆ-ಮಗಳ ಬಲವಂತಕ್ಕೆ ಆಕೆ ಹೊರಟರು. ಮೈಸೂರು ತಳಿರು ತೋರಣಗಳಿಂದ, ಬಣ್ಣ ಬಣ್ಣದ ದೀಪಗಳಿಂದ, ಪತಾಕೆಗಳಿಂದ ಸಿರಿ ಮೊಗದ ಮುತ್ತೈದೆಯಂತೆ ಕಂಗೊಳಿಸುತ್ತಿತ್ತು. ಪಂಕಜಾ ಮನೆ ಇದ್ದಿದ್ದು ಗೀತಾ ರಸ್ತೆಯಲ್ಲಿ. ನಂಜುಂಡಯ್ಯ ಪ್ರತಿದಿನ ಬೆಳಗ್ಗೆ ವಾಕಿಂಗ್ ಹೋಗುವಾಗ ಶಾಲಿನಿ ಜೊತೆಯಾದಳು. ಹಳದಿ ಹೂಗಳು ಚೆಲ್ಲಿದ ಹಾದಿಯಲ್ಲಿ ನಡೆಯುತ್ತಾ ತಂಗಾಳಿಗೆ ಮೈಯೊಡ್ಡಿ ನಡೆವಾಗ ಮನಸ್ಸಿಗೆ ಖುಷಿಯಾಗುತ್ತಿತ್ತು.

ಅಪರೂಪಕ್ಕೆ ಬಂದವರಿಗೆ ರಾಜೋಪಚಾರ ನಡೆಯಿತು. ಚಾಮುಂಡಿ ಬೆಟ್ಟ, ಬೃಂದಾವನ, ಜಗನ್ಮೋಹನ ಬಂಗಲೆ, ವಸ್ತುಪ್ರದರ್ಶನ ನೋಡಿ ಬಂದರು. ಮರುದಿನ ಸೋಮವಾರ ವಿಜಯದಶಮಿ. ದಸರಾ ಮೆರವಣಿಗೆ ನೋಡಲು ಸಿದ್ಧರಾದ ಹರಿಪ್ರಸಾದ್‌ಗೆ ಹುಡುಗುತನ ಮರುಕಳಿಸಿದಂತಾಗಿತ್ತು. ಮಹಾರಾಜ, ಯುವರಾಜ ಕಾಲೇಜುಗಳನ್ನು ನೋಡಿ ತಮ್ಮ ವಿದ್ಯಾರ್ಥಿ ದಿನಗಳನ್ನು ನೆನಪು ಮಾಡಿಕೊಂಡರು.

ದಸರಾ ಮೈಸೂರಿಗೆ ಹಬ್ಬದ ಸಡಗರ ನೀಡಿತ್ತು. ಶ್ರೀ ಕೃಷ್ಣರಾಜ ಪ್ರತಿಮೆಯಿದ್ದ ವೃತ್ತದ ಎದುರು ಸಾಲಿನಲ್ಲಿ ನಿಂತು ಅವರು

ಮೆರವಣಿಗೆ ನೋಡಿದರು. ಚಿನ್ನದ ಅಂಬಾರಿಯಲ್ಲಿ ಶ್ರೀ ಚಾಮುಂಡೇಶ್ವರಿ ದೇವಿಯ ಪ್ರತಿಮೆ ನೋಡಿ ಹಿರಿಯರು ಆಳಿದ ಮಹಾರಾಜರ ವೈಭವ ನೆನಪುಮಾಡಿಕೊಂಡರು. ಶಾಲಿನಿ ವಿವಿಧ ರೀತಿಯ ಟ್ಯಾಬ್ಲೋಗಳನ್ನು, ಸ್ಕೌಟ್ ಮತ್ತು ಗೈಡ್ಸ್ ತಂಡಗಳನ್ನು ನೋಡುವುದರ ಜೊತೆಗೆ ಜನಜಂಗುಳಿಯನ್ನು ಉತ್ಸಾಹದಿಂದ ಗಮನಿಸಿದಳು. ಕಡಲೆಕಾಯಿ, ಸೌತೆಕಾಯಿ, ಪುರಿ-ಖಾರ ತಿನ್ನುತ್ತಾ ತಲೆಗೊಂದು ಟವಲ್ ಬಿಗಿದು ನಿಂತ ಗ್ರಾಮಸ್ಥರ ಜೊತೆ, ಕರಗಿ ನೀರಾಗಿ ಹರಿಯುತ್ತಿದ್ದ ಪೌಡರ್-ಸ್ನೋ ಒರೆಸಿಕೊಳ್ಳುತ್ತಿದ್ದ ನಗರದವರೂ ಇದ್ದರು. ಅಳುತ್ತಿದ್ದ ಕಂದಮ್ಮಗಳು, ಕುಣಿಯುತ್ತಿದ್ದ ಮಕ್ಕಳೂ ಹಿಂದೆ ಮುಂದೆ ತಳ್ಳುತ್ತಿದ್ದ ಜನರೂ ಅವಳಿಗೆ ದಸರಾ ಮೆರವಣಿಗೆಯ ವಿಶಿಷ್ಟ ಅನುಭವ ನೀಡಿದರು.

ಎರಡು ದಿನಗಳ ನಂತರ ನಂಜನಗೂಡಿನ ಕಾರ್ಯಕ್ರಮವಿತ್ತು. ಬೆಳಗ್ಗೆಯೇ ಎದ್ದು ಪಂಕಜಮ್ಮ ಬುತ್ತಿ ತಯಾರಿಸಿದರು. ಮೈಸೂರಿನಿಂದ ಒಂಬತ್ತು ಗಂಟೆಗೆ ಹೊರಡುವ ರೈಲಿನಲ್ಲಿ ಹೊರಡುವುದೆಂದು ತೀರ್ಮಾನವಾಗಿತ್ತು. ಶಾಲಿನಿ ರೈಲು ಪ್ರಯಾಣ ಮಾಡಿ ಬಹಳ ದಿನಗಳಾಗಿದ್ದವು. ಕಿಟಕಿಯಿಂದ ತಲೆತೂರಿಸಿ, ಓಡುತ್ತಿರುವ ಮರ, ಗಿಡಗಳನ್ನು ನೋಡುತ್ತಾ ಮೈಮರೆತಳವಳು. ಅವಳ ತಾಯಿ-ತಂದೆ, ಅತ್ತೆ-ಮಾವ ಮತ್ತೊಂದು ಪಕ್ಕದಲ್ಲಿ ಹರಟುತ್ತಾ ಕುಳಿತಿದ್ದರು.

''ಹಲೋ ಶಾಲಿನಿ ಇದೇನು ನೀವಿಲ್ಲಿ?'' ಶಶಿಧರನ ಧ್ವನಿ ಕೇಳಿ ಅವಳು ಇತ್ತ ತಿರುಗಿದಳು. ಸಾಗರವರ್ಣದ ಪ್ಯಾಂಟ್, ಷರಟುಗಳಲ್ಲಿ ನಗುತ್ತಾ ನಿಂತಿದ್ದಾರೆ. ಅವಳು ವಿಧೇಯ ವಿದ್ಯಾರ್ಥಿನಿಯಂತೆ ಎದ್ದು ನಿಂತು ''ಗುಡ್ ಮಾರ್ನಿಂಗ್ ಸರ್'' ಎಂದಳು.

''ಕೂತ್ಕೊಳ್ಳಿ ಯಾಕೆ ನಿಂತುಕೊಂಡ್ರಿ?'' ಎಂದಾಗಲೇ ಅವಳಿಗೆ ತಾನು ನಿಂತಿದ್ದು ಅರಿವಾಗಿದ್ದು. ಶಶಿಧರ ತಾವೇ ಹೋಗಿ ಅವಳ ತಾಯಿ-ತಂದೆಯರನ್ನು ಮಾತನಾಡಿಸಿದಾಗ, ತಾಯಿಯ ಮುಖ ದಪ್ಪಗಾಗಿದ್ದು ಅವಳ ಕಣ್ಣಿಗೆ ಬೀಳದಿರಲಿಲ್ಲ.

ರೈಲಿನಿಂದ ಇಳಿದೊಡನೆ ದೇವಸ್ಥಾನಕ್ಕೆ ಗಾಡಿ ಗೊತ್ತುಮಾಡಿದರು ಹರಿಪ್ರಸಾದ್. ಪಂಕಜ, ನಂಜುಂಡಯ್ಯ, ಜ್ಯೋತಿ ಹತ್ತಿದರು. ಗಾಡಿ ತುಂಬಿಹೋಯಿತು. ''ನೀನೂ ಹತ್ತು'' ಜ್ಯೋತಿ ಆಜ್ಞೆ ಮಾಡಿದಾಗ ಶಾಲಿನಿಗೆ ಕಸಿವಿಸಿ. ಈ ಗಾಡಿಯಲ್ಲಿ ಜಾಗ ಎಲ್ಲಿದೆ? ಕುಳಿತುಕೊಳ್ಳುವುದಾದರೂ ಎಲ್ಲಿ?

ಹರಿಪ್ರಸಾದ್ ಶಶಿಧರರ ಕಡೆ ತಿರುಗಿ ಹೇಳಿದರು ''ನಾವು ಗಾಡೀಲ್ಲಿ ಹೋಗಿರ್ತೇವೆ. ನೀವು ನಡೆದು ಬನ್ನಿ. ನಮ್ಮ ಶಾಲೂಗೆ ನಂಜನಗೂಡಿನ ಪೇಟೆ ತೋರಿಸಿ.''

ಶಾಲಿನಿಗೆ ಅಪ್ಪನ ಮಾತು ಕೇಳಿ ಒಂದು ತರಹವಾದರೆ, ಶಶಿಧರನ ಮುಖ ಅರಳಿತು. ಜ್ಯೋತಿಯ ಮುಖ ಭತ್ತ ಹಾಕಿದರೆ ಅರಳು ಸಿಡಿಯಬಹುದೇನೋ ಎನ್ನುವಂತಾಯ್ತು.

''ಬನ್ನಿ ಕಾಫಿ ಕುಡಿಯೋಣ'' ಶಶಿಧರ ಆಹ್ವಾನಿಸಿದರು. ಹತ್ತಿರದ ಬೇಕರಿಯಲ್ಲಿ ಕಾಫಿಗೆ ಹೇಳಿ, ತಮ್ಮೆದುರು ನಿಂತು ಬೆರಗಿನಿಂದ ಸುತ್ತಮುತ್ತ ನೋಡುತ್ತಿದ್ದ ಚೆಲುವೆಯತ್ತ ಮೆಚ್ಚುಗೆಯಿಂದ ದಿಟ್ಟಿಸಿದರು ಶಶಿಧರ. ಅವರ ನೇರ ನೋಟದಿಂದ ಶಾಲಿನಿಯ ಹೃದಯದಲ್ಲಿ ಗೊಂದಲವೆದ್ದಿತು. ಕಾಫಿ ಕುಡಿದು, ತನ್ನ ಪುಟ್ಟ ಕರ್ಚೀಫ್‌ನಿಂದ ತುಟಿಗಳನ್ನು ಒರೆಸಿಕೊಂಡು ಶಾಲಿನಿ ಕೇಳಿದಳು ''ಹೊರಡೋಣವಾ ಸರ್?''

ಶಶಿಧರ ಆಟೋಗೆ ಕೈ ಬೀಸಿದರು. ''ಶಾಲಿನಿ ನಾನು ನಿಮ್ಮ ಹತ್ತಿರ ಕೊಂಚ ಮಾತಾಡಬೇಕಿತ್ತು. ನದಿಯ ಬಳಿ ಹೋಗೋಣವಾ?''

ಅವರ ಜೊತೆ ಹೋಗಲು ಅವಳಿಗೆ ಅಂತಹ ಇಷ್ಟವಿಲ್ಲದಿದ್ದರೂ, ಬೇಡ ಎನ್ನಲು ಮನಸ್ಸಾಗಲಿಲ್ಲ. ತನ್ನ ಲೆಕ್ಚರರ್- ಜೊತೆಗೆ ತಂದೆಯ ಸ್ನೇಹಿತರ ಮಗ ಹೇಗೆ- ಬೇಡ ಎನ್ನುವುದು? ಏನು ಮಾತನಾಡಬಹುದು ಇವರು? ದಿವಾಕರನ ಬಗ್ಗೆ ಎಚ್ಚರಿಸುವರೇನು?

ಶಾಲಿನಿ ಆಟೋ ಹತ್ತಿದಳು. ಕಪಿಲಾ ನದಿಯ ಪಾವಟಿಗೆಗಳ ಬಳಿ ಕುಳಿತು ಜುಳುಜುಳು ಹರಿಯುತ್ತಿದ್ದ ನೀರಿನಲ್ಲಿ ಕಾಲಾಡಿಸಿದಳು.

''ಮಳೆಗಾಲದಲ್ಲಿ ಪ್ರತಿವರ್ಷ ಈ ನದಿಯಲ್ಲಿ

ಪ್ರವಾಹವಿರುತ್ತದೆ. ನದಿಯ ಬಳಿ ಇರುವವರಿಗೆ ಅಪಾಯ ತಪ್ಪಿದ್ದಲ್ಲ. ಆ ಕಾಲದಲ್ಲಿ ಈ ನದಿಯನ್ನು ನೋಡಬೇಕು'' ಹತ್ತಿರದಲ್ಲೇ ಕುಳಿತು ವಿವರಣೆ ನೀಡಿದರು ಶಶಿಧರ್. ಅವಳು ಹತ್ತಿರದಲ್ಲೇ ಇದ್ದ ಕಲ್ಲುಗಳನ್ನು ಆಯ್ದು ನದಿಗೆಸೆದಳು ತರಂಗಗಳೆದ್ದವು.

''ಶಾಲಿನಿ ನಿಮ್ತಂದೆ ನನ್ನ ಬಗ್ಗೆ ನಿಮಗೆ ಹೇಳಿರಬಹುದು. ಹೆಣ್ಣುಗಳೆಂದರೆ ಮೈಲುದೂರ ಓಡುತ್ತಿದ್ದ ನಾನು ನಿಮ್ಮಿಂದ ಆಕರ್ಷಿತನಾಗಿದ್ದೇನೆ. ನಮ್ತಂದೆ-ನಿಮ್ತಂದೆ ಇಬ್ಬರಿಗೂ ಈ ಸಂಬಂಧ ಇಷ್ಟವಿದೆ. ನಿಮ್ಮ ಒಪ್ಪಿಗೆಗೆ ನಾವು ಕಾಯ್ತಿದ್ದೇವೆ. ನಾನು ನಿಮಗೆ ಒಪ್ಪಿಗೆಯೆ?''

ಶಾಲಿನಿಗೆ ಅವರ ಮಾತು ಕೇಳಿ ದಿಗ್ಭ್ರಾಂತಿಯಾಯಿತು. ಇದೇನಿದು ಶಶಿಧರ ತನ್ನನ್ನು ಮೆಚ್ಚಿದ್ದಾರೆಯೆ? ಹೃದಯ ದಿವಾಕರನನ್ನು ನೆನೆಯಿತು. ''ಐ ಲವ್ ಯೂ ಶಾಲಿನಿ'' ಎಂದಿದ್ದನಲ್ಲವೆ? ಇವರು ಅದನ್ನೇ ಮತ್ತೊಂದು ರೀತಿಯಲ್ಲಿ ಹೇಳುತ್ತಿದ್ದಾರೆ. ತಾನವರನ್ನು ಆ ದೃಷ್ಟಿಯಿಂದ ನೋಡೇ ಇಲ್ಲವಲ್ಲ. ಏನು ಉತ್ತರಿಸುವುದು?

ಅವಳ ಮೌನವನ್ನು ತಪ್ಪಾಗಿ ಭಾವಿಸಿದರು ಅವರು. 'ಪಾಪ ನಾಚಿಕೆ!' ಎಂದುಕೊಂಡರು.

''ಶಾಲಿನಿ ಗಾಬರಿಯಾಗುವುದು ಬೇಡ. ನಿಧಾನವಾಗಿ ಯೋಚಿಸಿ ತೀರ್ಮಾನಕ್ಕೆ ಬನ್ನಿ. ನಾಳೆ ನಮ್ಮ ತಂದೆ ಬಂದು ನಿಮ್ಮನ್ನೆಲ್ಲಾ ಮನೆಗೆ ಕರೆಯುತ್ತಾರೆ. ನೀವು ಖಂಡಿತಾ ಬರಬೇಕು.''

ಶಾಲಿನಿ ಉತ್ತರಿಸಲಿಲ್ಲ. ಎದ್ದು ನಿಂತು ''ನಾವಿನ್ನು ಹೋಗೋಣ, ತಡವಾದರೆ ಅಮ್ಮ ಬಯ್ತಾರೆ'' ಎಂದಳು. ಅವಳ ಮನಸ್ಸಿನಲ್ಲೀಗ ಬಿರುಗಾಳಿ ಎದ್ದಿದೆ. ಆದರದನ್ನು ತೋರುವಂತಿಲ್ಲ. ಅವಳು ಓಡಿ ಹೋಗಿ ತಾಯಿಯ ಬಳಿನಿಂತಳು. ಜ್ಯೋತಿಗೆ ಸಮಾಧಾನ. ಆ ಜನಜಂಗುಳಿ, ಪುರೋಹಿತರ ಆಸೆಬುರುಕುತನ, ನೂಕುನುಗ್ಗಲಿನಲ್ಲಿ ಅವಳಿಗೆ ಭಕ್ತಿ ಹುಟ್ಟಲಿಲ್ಲ.

''ದೇವಸ್ಥಾನ ತುಂಬಾ ಚೆನ್ನಾಗಿದೆ. ಗಲಾಟೆ ಇಲ್ಲದಿರುವಾಗ ಬಂದು ನೋಡಬೇಕು'' ಎಂದರು ನಂಜುಂಡಯ್ಯ.

ಆ ರಾತ್ರಿ ಪೂರ್ತಿ ಶಾಲಿನಿ ಹೊರಳಾಡಿದಳು. ತನಗೆ ಮೂವರು ಸ್ಪರ್ಧಿಗಳೇ? ದಿವಾಕರ-ಪ್ರತೀಕ ಈಗ ಶಶಿಧರ್. ಅಮ್ಮನಿಗೆ ಪ್ರತೀಕ ಪ್ರಿಯವ್ಯಕ್ತಿ. ಅಪ್ಪ ಶಶಿಧರನ ಕಡೆ ವಾಲುತ್ತಿದ್ದಾರೆ. ತನ್ನ ಬಳಿ ದಿವಾಕರ ಈಗಾಗಲೇ ಪ್ರೇಮ ನಿವೇದನೆ ಮಾಡಿಕೊಂಡಿದ್ದಾನೆ. ಯಾರನ್ನು ಬಾಳ ಸಂಗಾತಿಯಾಗಿ ಆರಿಸಿಕೊಳ್ಳಲಿ?



ಮೂವರಿಗೂ ನನ್ನ ಬಗ್ಗೆ ಪ್ರೀತಿಯಿದೆ. ''ದೇವರೆ ಎಂತಹ ಪರಿಸ್ಥಿತಿ ತಂದಿರುವೆ?''

ಮರುದಿನ ಚಂದ್ರಶೇಖರ್ ಬಂದು ಗೆಳೆಯನ ಕುಟುಂಬವನ್ನು ತಮ್ಮ ಮನೆಗೆ ಆಹ್ವಾನಿಸಿದರು. ಆತ ನಿವೃತ್ತ ಪ್ರಿನ್ಸ್‌ಪಾಲ್. ಮನೆಯ ಮುಂದೆ ಸೊಗಸಾದ ತೋಟ ಮಾಡಿದ್ದರು. ಸುಮಾರು ಹತ್ತು ಚದುರದ ಮನೆ ಅಚ್ಚುಗಟ್ಟಾಗಿತ್ತು. ತಾಯಿ ಮಗ ಬಾಗಿಲಲ್ಲೇ ನಿಂತು ಸ್ವಾಗತಿಸಿದರು. ಶಶಿಧರನ ತಾಯಿ ಶಾಲಿನಿಯ ಬಳಿ ಕುಳಿತು ಹತ್ತಾರು ಪ್ರಶ್ನೆ ಕೇಳಿದರು. ಜ್ಯೋತಿಯ ಬಿಗಿದ ಮುಖ ನೋಡಿ ಹರಿಪ್ರಸಾದ್‌ಗೆ ಆತಂಕ ವಾಯ್ತು. ಕಾಫಿ-ತಿಂಡಿಯ ಕಾರ್ಯಕ್ರಮ ಮುಗಿಯಿತು. ಹೊರಟು ನಿಂತವರಿಗೆ ಕುಂಕುಮ ಮಾತ್ರ ಕೊಟ್ಟರು ಆಕೆ. ''ಮದುವೆ ಮಾತು-ಕತೆ ಆಡುತ್ತಿರುವಾಗ ತಾಂಬೂಲ ಕೊಡಬಾರದು'' ಎಂದು ಶಾಲಿನಿಯ ತಾಯಿಗೆ ವಿವರಣೆ ನೀಡಿದರು. ಶಾಲಿನಿಯ ಹಣೆಗೆ ಕುಂಕುಮ ಇಟ್ಟು ''ಬೇಗ ನಮ್ಮ ನೆಗೆ ಬಂದು ಬಿಡಮ್ಮ'' ಎಂದಾಗ, ಶಶಿಧರನ ಮುಖ ಅರಳಿದರೆ, ಶಾಲಿನಿಯ ಮನ ಕಲ್ಲೆಸೆದ ಕೊಳದಂತಾಯ್ತು.

ಮರುದಿನವೇ ಬೆಂಗಳೂರಿಗೆ ಪ್ರಯಾಣ. ಮನೆಗೆ ಬರುವ ವೇಳೆಗೆ ಪ್ರತೀಕನ ಕಾಗದ ಎದುರು ನೋಡುತ್ತಿತ್ತು. ಪಕ್ಕದ ಮನೆಯ ಹಂಸ ಶಾಲಿನಿಯ ಬಳಿ ಪಿಸುಗುಟ್ಟಿದಳು ''ದಿವಾಕರ ಅನ್ನುವವರು ನಿನ್ನನ್ನು ಕೇಳಿಕೊಂಡು ಮೂರು ಸಲ ಬಂದಿದ್ರು ಕಣೆ''. ಅವಳಿಗೂ ಅವನನ್ನು ನೋಡುವ ತವಕ. ಆದರೆ ಅವನು ಸಿಗಲಿಲ್ಲ. ಅವಳು ಮನೆಗೆ ಬಂದಾಗ ತಾಯಿ-ತಂದೆಯರ ನಡುವೆ ಬಿಸಿ ಬಿಸಿ ಚರ್ಚೆ ನಡೆಯುತ್ತಿತ್ತು.

''ಡಾ। ಪ್ರತೀಕ್ ಮನೆಯವರಿಗೆ ಶಾಲಿನಿ ಒಪ್ಪಿಗೆಯಾಗಿದ್ದಾಳೆ. ಯಾವಾಗ ಅವರನ್ನು ಭೇಟಿಮಾಡ್ತೀರ?'' ತಾಯಿಯ ಪ್ರಶ್ನೆ.

''ದುಡುಕಬೇಡ ಕಣೆ, ಪ್ರತೀಕನ್ನ ಮದುವೆ ಯಾದರೆ ಶಾಲಿನಿ ಸುಖವಾಗಿರಲ್ಲ. ಅವನು ಒಳ್ಳೆಯ ಹುಡುಗ ಇರಬಹುದು. ಅವನು ಯಾವಾಗಲೂ ಪೇಷೆಂಟ್ಸ್ ಅಂತ ಒದ್ದಾಡ್ತಿದ್ರೆ ಇವಳಿಗೆ ನೆಮ್ಮದಿಯಿರತ್ತೇನೆ?''

**'ಶಾಲಿನಿ' ಕೊನೆ ಕಂತು ಓದುಗರಿಗೆ–**

**ಹೋದ ವರ್ಷದಂತೆ ಈ ಸಲವೂ ಝೋಕ್ ಧಾರಾವಾಹಿಯ ಕೊನೆ ಕಂತು ಓದುಗರ ಕಲ್ಪನೆಗೆ. ಸ್ವಾರಸ್ಯ ಅಂತ್ಯ ಪ್ರಕಟವಾಗಿ ಉತ್ತಮ ಗೌರವಧನ ಪಡೆಯುತ್ತದೆ.**

**– ಸಂಪಾದಕ**

''ಈಗ ಡಾಕ್ಟರ್ಸ್ ಹೆಂಡತಿಯರ್‍ಯಾರೂ ನೆಮ್ಮದಿಯಿಂದ ಇಲ್ವಾ? ನಿಮ್ಮದ್ಯಾಕೋ ಅತಿಯಾಯ್ತು. ಶಶಿಧರನನ್ನು ನೋಡಿದ ಮೇಲೆ ನಿಮ್ಮ ಮಾತಿನ ವರಸೇನೆ ಬದಲಾಗಿದೆ. ನನಗಂತೂ ಅವನು ಕೊಂಚಾನು ಹಿಡಿಸಲಿಲ್ಲ...''

''ಯಾಕೆ ಏನಾಗಿದ್ದಾನೆ ಅವನು? ವಿದ್ಯೆ, ಹಣ, ರೂಪು ಎಲ್ಲಾ ಇಲ್ವಾ? ಸ್ವಂತ ಮನೆ ಇದೆ. ಅತ್ತಿಗೆ-ನಾದಿನಿಯರ ಕಾಟವಿಲ್ಲ. ಶಾಲಿನಿ ಅವನನ್ನು ಮದುವೆಯಾದ್ರೆ ಖಂಡಿತಾ ಸುಖವಾಗಿರ್‍ತಾಳೆ.''

''ನೀವೆ ನಿಂತು ಮದುವೆ ಮಾಡ್ಕೊಳ್ಳಿ. ನಾನು ಮದುವೆಗೆ ಬರಲ್ಲ. ನಿಮ್ಮ ಹೆಂಡ್ತಿ ಸತ್ತುಹೋದಳು ಅಂದ್ಕೊಳ್ಳಿ.'' ಗಂಗಾ-ಭವಾನಿ ತಾಯಿಯ ಕಣ್ಣಲ್ಲಿ ಪ್ರತ್ಯಕ್ಷ.

''ಅತ್ತು ಹೆದರಿಸಬೇಡ. ಪ್ರತಿಯೊಂದು ವಿಚಾರದಲ್ಲೂ ನಿನ್ನ ಹಠಾನ್ನೇ ಗೆಲ್ಲಿಸಿ ನನಗೂ ಸಾಕಾಗಿದೆ. ಆದರೆ ಶಾಲಿನಿ ಮದುವೇಲ್ಲಿ ನನ್ನದೇ ಕೊನೆಮಾತು.'' ಅಪ್ಪ ನರಸಿಂಹಾವತಾರ ತಾಳಿದಾಗ ಶಾಲಿನಿಗೆ ಭಯವಾಯ್ತು. ಇವರಿಬ್ಬರಿಗೂ ತನ್ನ ಒಪ್ಪಿಗೆಯ ಅಗತ್ಯವಿಲ್ಲವೆ? ಅವಳು ತಕ್ಷಣ ಅವರೆದುರು ನಿಂತು ಹೇಳಿದಳು ''ಪ್ಲೀಸ್ ನಿಮ್ಮ ಕೂಗಾಟ ನಿಲ್ಲಿಸಿ, ಮದುವೆಯಾಗುವವಳು ನಾನು. ನನ್ನ ಮಾತು ಕೊಂಚ ಕೇಳಿ.'' ಅವರು ಅಚ್ಚರಿಯಿಂದ ಅವಳತ್ತ ನೋಡಿದರು. ಅವಳ ಮಾತುಗಳನ್ನು ಕೇಳಲು ಅವರ ಕಿವಿಗಳು ಕಾತುರಗೊಂಡವು....

● (ಝೋಕ್...)

"ಅತ್ತಿಗೆ ಮಾಡಿದ
ಉಪಕಾರ ನಾನೆಂದೂ
ಮರೀಲಿಕ್ಕಿಲ್ಲ.
ಅದ್ಭುತವಾದ್ದನ್ನೇ ತೋರಿಸಿದ್ರುವು.
ವ್ಹಿಸ್ಪರ್ ತಂದಂದಿಂದ
ಇನ್ನೀಗ ಒದ್ದೆಯಾಗುವ ಬಟ್ಟೆಯ
ನಾಪ್ಕಿನ್‌ನಿಂದ
ಪಾಡು ಪಡ್ಬೇಗಿಲ್ಲ ನಾನು."



"ಮೊದಲ ಬಾರಿ ಅತ್ತಿಗೆ ವ್ಹಿಸ್ಪರ್ ಬಗ್ಗೆ ಹೇಳಿದ್ದು ನಂಗಿನ್ನೂ ಚೆನ್ನಾಗಿ ನೆನ್ಪಿದೆ. ಅದೊಮ್ಮೆ ಅಣ್ಣನ ಮನೆಗ್ಹೋದಾಗ ನಾನು



ಹೊರಗಾದೆ. ಬಟ್ಟೆ ಬೇಕೆಂದು ಅತ್ತೀಗೆನ್ನ ಕೇಳ್ದೆ. ಅವ್ರ ಆಶ್ಚರ್ಯಕ್ಕೆ ಮೇರೆ ಇರ್ಲಿಲ್ಲ". ಬೆರಗಾಗಿ ಕೇಳಿದ್ರು, "ಏನಂತೀಯಾ ಶೀಲಾ ನೀನು! ಬಟ್ಟೆ ಉಪಯೋಗಿಸೋದೆ! ಹೇಗಪ್ಪಾ ನೀನು ತೇವವನ್ನು ಸಹಿಸ್ತಿ?"

"ಆದ್ರೆ ಅತ್ತಿಗೆ, ರೆಡಿಮೇಡ್ ನ್ಯಾಪ್‌ಕಿನ್‌ನಿಂದ್ಲೂ ತೇವ ಇದ್ದದ್ದೇ ಅಲ್ವೇ" ನಾನು ಕೇಳಿದೆ.

ಅತ್ತಿಗೆ ಹೇಳಿದರು, "ಈಗ ತಿಳೀತು ನೀನೀವರ್ಗೆ ವ್ಹಿಸ್ಪರ್ ಟ್ರೈಮಾಡಿಲ್ಲ.

"ಅತ್ತಿಗೆ, ವ್ಹಿಸ್ಪರ್‌ನಲ್ಲಿ ಅದೇನಿದೆ ವಿಶೇಷ?" ನಾನೂ ಕೇಳಿಯೇ ಬಿಟ್ಟೆ.



ಡ್ರೈ-ವೀವ್

"ಅದ್ದೇಗೆ ವ್ಹಿಸ್ಪರ್‌ನ ವಿಶೇಷ ಹೊರ ಆವರಣ ಡ್ರೈ-ವೀವ್ ತೇವವನ್ನು ಹೀರಿಕೊಳ್ತದೆ ಮತ್ತು ಆ ತೇವವನ್ನು ಮೈಗೆ ತಗಲದಂತಿರಿಸ್ತದೆ.



ಆದ್ರಿಂದ್ಲೇ ಅಷ್ಟು ಶುಷ್ಕ ಅನುಭವ ಆಗ್ತದೇಂತ ಅತ್ತಿಗೆ ವಿವರಿಸಿ ಹೇಳಿದ್ರು."

"ಒಂದು ಪ್ಯಾಕನ್ನಿತ್ತು ವ್ಹಿಸ್ಪರ್ ಅಂದೇ ಬಳಸಿ ನೋಡುವಂತೆ ಅತ್ತಿಗೆ ವತ್ತಾಯಿಸಿದ್ರು. ನಾನೂ ಖುಷಿಯಿಂದ ತಗೊಂಡು ನೋಡಿಯೇ ಬಿಟ್ಟೆ. ಭಾರೀ ವ್ಯತ್ಯಾಸವನ್ನೇ ಕಂಡುಕೊಂಡೆ."

ರೆಗ್ಯುಲರ್ ಎಕ್ಸ್‌ಟ್ರಾಲಾಂಗ್




**ಶುಷ್ಕ ಆರಾಮ ಪಡೆಯಿರಿ, ತೇವವೆಂದರೇನೆಂದೇ ಮರೆಯುವಿರಿ.**

ವ್ಹಿಸ್ಪರ್ ಅಥವಾ ನಾರಿ ಆರೋಗ್ಯದ ವಿಷಯದಲ್ಲಿ ಹೆಚ್ಚಿನ ಮಾಹಿತಿಗಾಗಿ ಬರೆಯಿರಿ:
ಮಿಸ್ ವ್ಹಿಸ್ಪರ್ ಸರ್ವಿಸ್, ಜಿ.ಪಿ.ಒ. ಬಾಕ್ಸ್ ನಂ. 1919, ಮುಂಬಯಿ 400 001.

ಕೇವಲ ವ್ಹಿಸ್ಪರ್ ಶುಷ್ಕ ಆರಾಮದ ಅನುಭವ ಹೇಗೆ ನೀಡುವುದೆಂದು ನೀವೇ ನೋಡಿ ತಿಳಿಯಿರಿ.

ಒಂದು ಸಣ್ಣ ಚಮ್ಮಚ ತುಂಬಾ ದ್ರವವನ್ನು ನಾವು ವ್ಹಿಸ್ಪರ್‌ನ ಮೇಲೆ ಸುರಿದೆವು.

ಮತ್ತು ಅರ್ಧ ಚಮ್ಮಚದಷ್ಟನ್ನು ಬಟ್ಟೆಯಿಂದ ಮಾಡಿದ ನ್ಯಾಪ್‌ಕಿನ್‌ನ ಮೇಲೆ ಸುರಿದೆವು.

ವ್ಹಿಸ್ಪರ್



ಬಟ್ಟೆ



ಆನಂತರ ಎರಡರ ಮೇಲೂ ಒಂದೊಂದು ಕರ್ಚೀಫನ್ನಿರಿಸಿ ಮೆಲ್ಲನೇ ಒತ್ತಿದೆವು.

ಫಲಿತಾಂಶ ನಿಮ್ಮ ಕಣ್ಣೆದುರಿಗೇ ಇದೆ.

ವ್ಹಿಸ್ಪರ್‌ನ ಡ್ರೈವೀವ್ ದ್ರವವನ್ನು ಒಳಗಡೆ ಹಿಡಿದುಕೊಂಡಿದೆ. ಆದುದರಿಂದ ವ್ಹಿಸ್ಪರ್ ಮೇಲಿನ ಕರ್ಚೀಫ್ ಶುಷ್ಕ ಹಾಗೂ ಒಣದಾಗಿದೆ. ಆದರೆ ಬಟ್ಟೆಯಿಂದ ಮಾಡಿದ ನ್ಯಾಪ್‌ಕಿನ್‌ನ ಮೇಲಿರಿಸಿದ ಕರ್ಚೀಫ್ ಒದ್ದೆಯಾಗಿದೆ.

# ಹಿರಿಯರ ಆಯ್ಕೆ

## ಆಯ್ಕೆ : ಡಾ। ರಾಮಚಂದ್ರ ಶರ್ಮ

## ಬೇರೆಲ್ಲೊ ಅವಿತಿರುವ ಹಾಡು



ಬೇರೆಲ್ಲೊ ಅವಿತಿರುವ ಹಾಡು ನೀನು
ಹೀಗಿಲ್ಲಿ ಕೊರಳಾಗಿ ಕೊಳಲಾಗಿ ಹಬ್ಬಿಕೊಂಡೆ.

ಉರಿಹಗಲ ದಿಗಿಲಲ್ಲಿ ತಾಪಗೊಂಡು
ಸಂಜೆ ಗಾಳಿ ಸುಳಿದರೆ ಸಾಕು ಹೂ ಚಿಗುರಿದೆ
ಯಾವ ತಂತಿಯ ಮೀಟ ಹೊರಡಿಸಿದ ಸ್ವರ
ಅಪಸ್ವರದ ದಿನಚರಿಗೆ ಮಧು ತುಂಬಿದೆ
ಬೇರೆಲ್ಲೊ ಅವಿತಿರುವ ಹಾಡಂತೆ ನೀನು.

ನವಿಲ ನಲಿವಿಗೆ ಮೊದಲು ಹರಿದ ಬೆವರು
ಹೊಳೆಯ ಕಲಕಲದಲ್ಲಿ ಕಲಸಿ ಕಳೆದು
ಮೂರು ಸಂಜೆಯ ನೆರಳ ಅರ್ಧಸತ್ಯವು
ನಡುರಾತ್ರಿ ತೆರೆವ ಭೀತಿ ಬಿತ್ತಿಸಿದೆ
ಆಗಲ್ಲಿ ಕೊರಳಾಗಿ ಕೊಳಲಾಗಿ ಹಬ್ಬಿಕೊಂಡೆ.

ತರಿದ ಬೆರಳಿಗೆ ಮೆಲ್ಲು ಸಿರ ಸೂಸಿ
ಅಂತೆ ಕಳೆದ ನಗುವಿಗೆ ಹಸಿರ ಮುಡಿಸಿ
ಕಾಗೆ ತೊಟ್ಟಲಿನಲ್ಲಿ ಕೋಗಿಲೆಯ ಕೂಗು
ಈಗ ಥಟ್ಟನೆ ಕರೆದ ದನಿಯು ಯಾರದು ?
ಎಲ್ಲಿ ಅವಿತಿರುವ ಹಾಡ ಕೊರಳದು ?

ಮಂಜು ಮುಸುಕಿದ ಸಂಜೆ ಕಡಿದ ನಂಜು
ದೂರ ಸವೆಸಿದ ಹಾದಿ ಗಕ್ಕನೆ ಮುಗಿದು
ನಿಂತ ನೀರಾದಲ್ಲಿ ಕೆಸರು ಕವಿದು
ಹೂ ಬಿಸಿಲಿನೊಡನೆ ಅರಳಿತ್ತೆ ಕಮಲ
ತನ್ನ ಕೋಮಲ ದಳಗಳಲ್ಲಿ ಸವಿಮಾತನಾಡಿ ?

ಬಾವಿಯಾಳದ ಅರಲಿನಂತೆ ಚಿಂತೆ
ಬೇರೆಲ್ಲಿ ಅವಿತಿರುವ ಹಾಡು ನೀನು
ಮಳೆಯಂತೆ ಗೋರಿಗೂ ಚಿಗುರ ನುಡಿಸಿ
ಅವ್ಯಕ್ತ ತನನದಿ ಸಂತೈಸುವೆ.

● ಕಮಲಾಕರ, ಪೂನಾ

## ಒಟ್ಟಾರೆ ಕವಿತೆಗಳ ಬಗ್ಗೆ ಕೆಲವು ಮಾತುಗಳು

ಹಲವಾರು ಕವನಗಳು ವಿಚಾರಭಾರದಿಂದ ನರಳುತ್ತಿವೆ ಅಂತನ್ನಿಸಿತು. ನಿಜವಾದ ಕವನ ವಿಚಾರದಲ್ಲಿ ಹುಟ್ಟುವುದಿಲ್ಲ ಅನ್ನುವುದು ನನ್ನ ನಂಬಿಕೆಗಳಲ್ಲಿ ಒಂದು. ಕವನದಲ್ಲಿರಬಹುದಾದ ವಿಚಾರ ಓದುಗನಿಗೆ ಕವನವನ್ನೋದಿದ ಮೇಲೆ ಪ್ರಾಪ್ತವಾಗುವ ಲಾಭವಾಗುವಂತಿರಬೇಕು. ಬದುಕಿನ ಬಗ್ಗೆ ಇದಮಿತ್ಥಂ ಅನ್ನುವ ಹಾಗೆ ಚಿಕ್ಕವರು ಹೇಳಿಕೆಗಳನ್ನು ಕವನದ ಆಕಾರದಲ್ಲಿ ಕೊಟ್ಟಾಗ ನಮ್ಮಲ್ಲಿ ಮೆಚ್ಚುಗೆಗಿಂತ ಅಪನಂಬಿಕೆಯೇ ಮೇಲೆ ಬರುತ್ತದೆ.

ಎಲ್ಲಿ ಕವಿಯಾದವನು ತನಗೆ ದಕ್ಕಿದ ಅನುಭವಕ್ಕೆ ಅಭಿವ್ಯಕ್ತಿ ಕೊಟ್ಟಿದ್ದಾನೆ ಅನ್ನಿಸಿತೋ ಅಂತಹ ಕವನಗಳು ಮಾತ್ರಾ ನನ್ನ ಮೆಚ್ಚುಗೆಗೆ ಪಾತ್ರವಾಗಿವೆ. ನಾನು ಆರಿಸಿರುವ ಕವನಗಳಲ್ಲಿ ಭಾಷೆಯ ಮೇಲೆ, ಲಯದ ಮೇಲೆ, ಕವಿ ಹಿಡಿತವನ್ನು ಸಾಧಿಸಿರುವುದೂ ನಿಮ್ಮ ಗಮನಕ್ಕೆ ಬರುವುದಾದರೆ ನನಗೆ ಸಂತೋಷ.

● ರಾಮಚಂದ್ರ ಶರ್ಮ

# ನೀವು ಬರುತ್ತೀರಿ

"ಬಿಡುವಾದಾಗ ಬನ್ನಿರಿ
ಆರಾಮವಾಗಿ ಕೂತು
ಮನಬಿಚ್ಚಿ ನಾಲ್ಕು ಮಾತಾಡಬಹುದು"
ಎಂದರೆ,

ಉರಿವ ಒಲೆಗಳ ಮುಂದೆ
ಅಡುಗೆಗಮಸರಿಸಿದ್ದಾಗ ಬರುತ್ತೀರಿ.
ಮುಚ್ಚುತಟ್ಟೆಯಡಿಯ ಹಬೆ
ಹನಿಯಾಗುವವರೆಗೆ ಕಾಯುವುದಿಲ್ಲ.

ಕರಗು ತೆಕ್ಕೆಯಲೊರಗಿ
ಬಳಲಿ ರೆಪ್ಪೆ ಮುಚ್ಚಿರುವಾಗ
ಕಿವಿ ತುಂಬ ನಿಮ್ಮ ಪಿಸುದನಿಯಿಂಪು
ಬೆಸುಗೆ ಬಿಚ್ಚುವ ಮುನ್ನ ಮಾಯವಾಗುತ್ತೀರಿ.

ಸಾವು ಪಕ್ಕದಲೆ ಉಸಿರಾಡಿದಾಗ
ಜೀವ ನೀವಾಗಿ ಕಣ್ಣುಮಿಟುಕಿಸುತ್ತೀರಿ.
ಆಗೊಮ್ಮೆ ನಿಮ್ಮ ಹಿಡಿದು
ನಿಲ್ಲಿಸುವಾಸೆ, ಬಚ್ಚ ಬರಿ ಕನಸು.

ಹಾದು ಸರಿಯುವ ತಂಪು ಮಳೆಹನಿ ಹಾಗೆ
ಬರುತ್ತೀರಲ್ಲ – ಸಂತೋಷ.
ಬರುತ್ತಿರಿ, ಆಗಾಗ; ತರುತ್ತಿರಿ
ಒಗರು ಬದುಕಿಗೆ ಸಮಿಸಿಂಚನ.

● ಆರ್. ನಿರ್ಮಲ, ಮೈಸೂರು

## ಮೆಚ್ಚುಗೆ ಪಡೆದ ಕವನಗಳು

1. ಲೇಡೀಸ್ ಕಂಪಾರ್ಟ್‌ಮೆಂಟ್‌ನಿಂದ
   ● ತುಳಸಿ ವೇಣುಗೋಪಾಲ್, ದೊಂಬಿವಿಲಿ-ಥಾಣಾ
2. ಎಲ್ಲೆಲ್ಲೂ ಬಾಗಿಲೇ
   ● ಬಿ. ಎಸ್. ಚಂದ್ರಶೇಖರ, ಬೆಂಗಳೂರು
3. ಬರೆಯಲಾಗದ ಕವಿತೆ
   ● ಮಾಲತಿ ಪೈ, ಮಂಡ್ಯ

# ಬೆಂಜಮಿನ ಮೊಲಾಯಿಸ ನೆನಪಿಗೆ

ಬೆಂಜಮಿನ,
ನೀನು ಕಣ್ಣು ತೆರೆದು
ಕಾವ್ಯ ಬರೆಯಲು ಕುಳಿತಾಗ
ಸುತ್ತ ಕೆಂಪು ಹೂವುಗಳನ್ನು ಕಂಡೆ
ಹೀಗಾಗಿ ನಿನ್ನ ಕಾವ್ಯ ಖಡ್ಗವಾಯಿತು.

ಕಾವ್ಯ ಖಡ್ಗವಾದದ್ದರಿಂದ
ಹದಿವಯಸ್ಸಿನ ನಿನ್ನನ್ನು
ತುಂಬಿನಿಂತ ಯಾವ ಅಪ್ಸರೆಯ
ತಾರುಣ್ಯ ಹಗಲಿರುಳು ಕಾಡಲಿಲ್ಲ.
ನೀನು ಯಾವ ಪ್ರೇಮ ಕವನವನ್ನೂ ಹೊಸೆಯಲಿಲ್ಲ.
ತಮ್ಮ ಕೋಪ ತಾಪಗಳನ್ನು
ತಮ್ಮಲ್ಲಿಯೇ ಹೊತ್ತುಕೊಂಡು
ಕಾಲಗರ್ಭದಲ್ಲಿ ಕರಗಿ ಹೋಗುತ್ತಿರುವ
ಕಡುಗಪ್ಪು ಮಾನವರ ದಗದಗಿಸುವ
ಕಷ್ಟಗಳ ಪಾಡು
ನಿನ್ನ ಹೃದಯದ ಹಾಡಾಯಿತು.

ಆದ್ದರಿಂದ ಬೆಂಜಮಿನ,
ನೀನು ಓಡಾಡುವಾಗಲೆಲ್ಲ
ಕವನ ಬರೆಯುವಾಗಲೆಲ್ಲ
ಕನಲಿ ಹೋಗುವವರ ಕನವರಿಕೆಗಳನ್ನು
ಅಧಿಕಾರಿಗಳ ಅಟ್ಟಹಾಸಗಳನ್ನು
ದುಡ್ಡಿದ್ದವರ ದೊಡ್ಡಸ್ತನದ ದಡ್ಡತನಗಳನ್ನು ಕಂಡೆ.
ಬೆಂಜಮಿನ,
ಈಗ ನೀರಿದೆ, ಗಾಳಿಯಿದೆ, ಬೆಳಕಿದೆ
ನಾವೂ ಇದ್ದೇವೆ ಆದರೆ
ನೀನು ಮಾತ್ರ ಕಣ್ಣೆದುರು ಇಲ್ಲ.
ಆದರೂ
ನಿನ್ನ ಕೊರಳಿಗೆ ಬಿಗಿಯಲ್ಪಟ್ಟ ಹಗ್ಗ
ಮಾತ್ರ ಶತಶತಮಾನಗಳ
ಶೋಷಣೆಯತ್ತ ಮುಖ ಮಾಡಿ ತೋರಿಸುತ್ತ
ನಿನ್ನ ಒಡಲಾಳ ಕಿಚ್ಚನ್ನು ಚೀರುತ್ತದೆ.
ಬೆಂಜಮಿನ ನಿನ್ನ ಜ್ವಲಂತ ಬದುಕನ್ನು ಧ್ವನಿಸುತ್ತದೆ.

● ಜಿ. ಎಂ. ಕುಲಕರ್ಣಿ, ಹಾವೇರಿ

(ಸೂಚನೆ: ಬೆಂಜಮಿನ್, ವರ್ಣಭೇದ ನೀತಿ ವಿರೋಧಿಸಿ ದ. ಆಫ್ರಿಕಾದ ಬಿಳಿಯರ ಸರ್ಕಾರದಿಂದ 1985ರ ಅಕ್ಟೋಬರ್ 18ರಂದು ನೇಣುಗಂಬ ಏರಿದ ಆಫ್ರಿಕನ್ ಕರಿಯ ಕವಿ.)



# ಕ್ನಾಡೆಲ್ನಾವ



'ಲಕ್ಷ ಬಾರಿ ಮನ್ನಿಸಿದರೂ ಮನಸ್ಸೊಪ್ಪಲಿಲ್ಲ. ದಯವಿಟ್ಟು ಯಾರಾದರೂ ಅದಕ್ಕೆ ಸಮಜಾಯಿಷಿ ನೀಡಿ. ಈ ಮನವೆಂಬ ಮರ್ಕಟವು ಪ್ರಿಯತಮೆಯ ಕನಸು ಕಾಣುತ್ತಿದೆ.' – ಇದು ಹಿಂದೀ ಗೀತೆಯೊಂದರ ಭಾವಾರ್ಥ. ಇದು ನನ್ನ ಮನಃಪಟಲದ ಮೇಲೆ ಮರೆಯಲಾರದ ರೀತಿಯಲ್ಲಿ ಮುದ್ರಿತವಾಗಿದೆ. ಹೌದು, ಈ ಹದಿಹರೆಯದ ಪರಿಸ್ಥಿತಿಯೇ ಹಾಗೆ. ಲಂಗು ಲಗಾಮಿಲ್ಲದ ಅಶ್ವದಂತೆ. ನಿರ್ಭೀತ, ಸ್ವತಂತ್ರ ಹಕ್ಕಿಯಂತೆ. ಎಚ್ಚರದಲ್ಲೂ ಸ್ವಪ್ನಾವಸ್ಥೆ, ಗಾಢ ನಿದ್ರೆಯಲ್ಲೂ ಕನವರಿಕೆ; ಚಡಪಡಿಕೆ. ಪ್ರೀತಿ, ಪ್ರೇಮ, ಸ್ನೇಹ, ಸರಸ ಸಲ್ಲಾಪ ಇವಿಷ್ಟು ಬಿಟ್ಟರೆ ಬೇರೇನೂ ತಿಳಿದೇ ಇಲ್ಲ. ಅನ್ಯ ವಿಷಯಗಳು ರುಚಿಸುವುದೂ ಇಲ್ಲ. ಹಿರಿಯರ, ಹಿತೈಷಿ ಕಿವಿ ಮಾತು ಪಥ್ಯವಾಗುವುದೂ ಇಲ್ಲ. ಹಿಂದು ಮುಂದು ನೋಡುವ ತಾಳ್ಮೆಯೂ ಅತ್ಯಲ್ಪ. ಸ್ವಲ್ಪ ತಡೆದು ವಿವೇಚಿಸುವ, ವಿಮರ್ಶಿಸುವ ಅಗತ್ಯವೂ ಕಾಣಬರುವುದಿಲ್ಲ.

ಶ್ವೇತ! ಅಬ್ಬಾ!! ಈ ಎರಡಕ್ಷರದ ಹೆಸರು



# ನೆನಪುಗಳು



ಕೇಳಿದ ಕೂಡಲೇ ನನ್ನ ಯುವರಕ್ತವೂ ಬಿಸಿ ಯೇರುತ್ತದೆ. ಮೈ ಅವರ್ಣನೀಯ ಸುಖದಿಂದ ಪುಳಕಿತಗೊಳ್ಳುತ್ತದೆ. ಸುಪ್ತವಾಗಿದ್ದ ಪ್ರೀತಿಯ ಭಾವನೆಗಳು ಜಾಗ್ರತಗೊಳ್ಳುತ್ತವೆ. ಏಕೆಂದರೆ ಆಕೆ ನಾನು ಪ್ರೀತಿಸಿದ, ನಾನು ನನ್ನವಳೆಂದೇ ತಿಳಿದಿದ್ದ ಕನ್ಯೆ. ಪರಿಸ್ಥಿತಿಯ ಒತ್ತಡಗಳಿಂದ, ಸುತ್ತಣ ಸಮಾಜದ ಖಳನಾಯಕ ಪಾತ್ರದಿಂದ ಅಸಹಾಯಕನಾಗಿ ನತದೃಷ್ಟನೆನಿಸಿಕೊಳ್ಳುವ ದುರಂತ ನನ್ನದಾಯಿತು. ಶೇಕ್ಸ್‌ಪಿಯರನ ದುರಂತಕತೆಗಳನ್ನು ಓದಿದ್ದ ನಾನು ಅವುಗಳಲ್ಲಿ ಬರುವ ಅದೃಷ್ಟಹೀನ ಪಾತ್ರಗಳ ಕರುಣಾಜನಕ ದುಃಸ್ಥಿತಿ ನನಗೂ ಬರುವುದೆಂಬ ಪರಿಕಲ್ಪನೆ ಮಾತ್ರ ನನಗಿರಲಿಲ್ಲ.

'ಶ್ವೇತ, ಸದ್ದಿಲ್ಲದೆ ಬಂದು ನನ್ನ ಹೃದಯದಲ್ಲಿ ನಿನ್ನ ರೂಪವನ್ನು ಪ್ರತಿಷ್ಠಾಪಿಸಿ ಸದ್ದಿಲ್ಲದೆ ಹೊರಟುಹೋದೆಯಲ್ಲೇ ನೀನು? ಜಡವಾಗಿ ಕರಟಿಹೋಗಿದ್ದ ನನ್ನ ಪ್ರೀತಿಯೆಂಬ ಬಳ್ಳಿಗೆ ಅಮೃತಧಾರೆಯನೆರೆದವಳು ನೀನೇ ಅಲ್ಲವೆ? ಬದುಕೆಂಬ ನಾಲ್ಕು ದಿನದ ಪಯಣದಲ್ಲಿ ಪ್ರೀತಿ,

● ಎ. ಸತೀಶ್ ರಾವ್

ಪ್ರೇಮಗಳೆಂಬ ನಿಲ್ದಾಣಗಳಿವೆ ಎಂದು ತಿಳಿಸಿದ ಹೆಣ್ಣಲ್ಲವೆ ನೀನು? ಪ್ರೀತಿಯೆಂಬ ಅನಂತ ಶರಧಿಯಲ್ಲಿ ಅಲೆಗಳ ಏರಿಳಿತಕ್ಕೆ ಸರಿಯಾಗಿ, ಭೀಕರ ಪ್ರವಾಹಕ್ಕೆ ಎದುರಾಗಿ ಸಾಗಲು ಸ್ಫೂರ್ತಿಯಾದವಳು ನೀನಲ್ಲವೇನೇ? ಈ ಪ್ರಶ್ನೆಗಳೆಲ್ಲಾ ಯಾಕೆ ಬಲ್ಲೆಯಾ? ಶರಧಿ ಎಂದಾಗ ನೆನಪಾಯಿತು! ಈಗ ನಾನು ಈ ವಿಶಾಲವಾದ ಸಮುದ್ರದ ತೀರದಲ್ಲಿ ಏಕಾಂಗಿಯಾಗಿ ಕುಳಿತಿದ್ದೇನೆ. ಗತಕಾಲದ ಘಟನೆಗಳೆಲ್ಲವೂ ನನಗೆ ಚೆನ್ನಾಗಿ ನೆನಪಿದೆ. ಈ ಸಮುದ್ರ, ಈ ನೆಲ, ಈ ಗಾಳಿ, ಈ ನೀರು, ಇಲ್ಲಿನ ಜನ ನನಗೆ ಹೊಸತೇನಲ್ಲ. ಎಷ್ಟೆಂದರೂ ಇದು ನನ್ನ ಹುಟ್ಟೂರಲ್ಲವೇ?

ಎಲ್ಲೋ ಹುಟ್ಟಿ ಎಲ್ಲೊ ಬೆಳೆಯಬೇಕಿದ್ದ ನಾನು ಕ್ರೂರ ವಿಧಿಯ ಆಟಕ್ಕೆ ಬಲಿಪಶುವಾಗಿ ಈ ಊರಲ್ಲಿ ಜನಿಸಿ, ಬೆಳೆದೆ. ನಾನು ಹುಟ್ಟಿನಿಂದ ತಬ್ಬಲಿ, ಅನಾಥ. ನನಗಾಗಿ ಈ ಪ್ರಪಂಚದಲ್ಲಿ ಯಾರೂ ಇರಲಿಲ್ಲ. ಮಾತೃವಾತ್ಸಲ್ಯದಿಂದ ವಂಚಿತನಾಗಿದ್ದೆ. ಪತಿಯ ವಿರಹವೇದನೆಯಿಂದ ತಾಯಿ ಮಾನಸಿಕವಾಗಿ ಕೃಶವಾಗಿದ್ದರು. ಸಿಡುಕು ಪ್ರವೃತ್ತಿಯನ್ನು ಬೆಳೆಸಿಕೊಂಡಿದ್ದರು. ತನಗೆ ತಾನೇ ಗೊಣಗಿಕೊಳ್ಳುತ್ತಿದ್ದರು. ವಿನಾಕಾರಣ ಪರರ ಮೇಲೆ ಸಂಶಯ ತಾಳುತ್ತಿದ್ದರು. ಇನ್ನು ನನ್ನನ್ನು ಮುದ್ದಾಡಲು ಅವರಿಗೆಲ್ಲಿದೆ ಸಹನೆ? ತಂದೆಯಂತೂ ನನ್ನ ಪಾಲಿಗೆ ಮೊದಲ ಶತ್ರುವಾಗಿದ್ದರು.

ದುಸ್ತರವಾದ, ಅಸಹನೀಯವಾದ ಪರಿಸರದಲ್ಲಿ ನನ್ನ ಬೆಳವಣಿಗೆ ಅನಿವಾರ್ಯವಾಯಿತು. ಆಗ ನನಗೆ ನಾನು ಎಲ್ಲವನ್ನೂ ಎಲ್ಲರನ್ನೂ ಕಳಕೊಳ್ಳಲೆಂದೇ ಹುಟ್ಟಿದವನೆಂಬ ಭಾವನೆ ಬರಲಾರಂಭಿಸಿತು. ನಾನು ನನ್ನ ಬದುಕಲ್ಲಿ ಅಮೂಲ್ಯವಾದದ್ದೇನೋ ಒಂದು ವಸ್ತುವನ್ನು ಕಳಕೊಂಡ ಕೊರತೆಯ ಅವ್ಯಕ್ತ ಭಾವನೆ ಕಾಡಲಾರಂಭಿಸಿತು.

ಈ ಬದುಕಿನ ವಾಸ್ತವತೆಯ ಕಟು ಸತ್ಯ ನನಗೆ ಬಾಲ್ಯದಲ್ಲಿ ಇರಲೇ ಇಲ್ಲ. ಏಕೆಂದರೆ ಬಾಲ್ಯವೆಂಬುದು ಸುಂದರ ಕನಸಿನ ಪ್ರಪಂಚ. ಅದೊಂದು ವೈವಿಧ್ಯಮಯ ಭ್ರಮಾಲೋಕ.

**ವಿಶಾಲವಾದ ಸಮುದ್ರದ ತೀರದಲ್ಲಿ ಏಕಾಂಗಿಯಾಗಿ ಕುಳಿತಿದ್ದೇನೆ. ಈ ಸಮುದ್ರ, ಈ ಗಾಳಿ, ಈ ನೆಲ, ಈ ನೀರು, ಇಲ್ಲಿನ ಜನ ನನಗೆ ಹೊಸತೇನಲ್ಲ. ಆದರೆ, ಪ್ರೀತಿಯೆಂಬ ಅನಂತ ಶರಧಿ ಮಾತ್ರ ನನಗೆ ಬರೀ ನೆನಪಾಯಿತು.**

ಆಗ ಸರ್ವವೂ ಸುಂದರವೇ. ಯೌವ್ವನವೆಂಬುದು ವ್ಯಕ್ತಿಯ ಬದುಕಿನ ಪರಿಪೂರ್ಣತೆಯ ಹಂತವಾದರೂ ಆಗ ಲಂಗುಲಗಾಮಿಲ್ಲದ ಮನಸ್ಸಿನ ನಡತೆಗಳಿಂದ ಸ್ವಂತ ವ್ಯಕ್ತಿತ್ವಕ್ಕೆ ಕಳಂಕ ತರುವ ಅವಕಾಶಗಳೇ ಹೆಚ್ಚು. ಆದರೆ ಶೈಶವ ಹಂತದಲ್ಲಿ ಆ ಪರಿಸ್ಥಿತಿ ಉದ್ಭವವಾಗುವುದೇ ಇಲ್ಲ. ಆಗಿನ ಯೋಚನೆಗಳು, ಭಾವನೆಗಳು ಬಾಲಿಶವಾಗಿರುತ್ತವೆ. ನಾನು ಕೂಡಾ ಸಹಜವಾಗಿಯೇ ಆ ಫ್ಯಾಂಟಸಿಯನ್ನು ಸಂಪೂರ್ಣವಾಗಿ ಸವಿದು ನೈಜ ಬದುಕಿಗೆ ಪಾದಾರ್ಪಣೆ ಮಾಡಿದಾಗ ನನಗೆ ಈ ಜೀವನದ ಇನ್ನೊಂದು ಮುಖದ ಪರಿಚಯವಾಯ್ತು.

ನನ್ನ ಈ ಹಳ್ಳಿ ರಾಮಪುರ ನಿಸರ್ಗದ ಅಪ್ರತಿಮ ಚೆಲುವಿನ ಗಣಿ. ಕಣ್ಣು ಹಾಯಿಸಿದಷ್ಟು ಉದ್ದಕ್ಕೂ ಗೋಚರಿಸುವ ಹಚ್ಚಹಸುರಿನ ಸಸ್ಯಸಂಪತ್ತು, ಮನಕಾನಂದ ನೀಡುವ ತೆಂಗು, ಅಡಿಕೆ, ಕಬ್ಬಿನ ತೋಟಗಳು, ಸಾಲುಸಾಲು ಹೊಲಗದ್ದೆಗಳು. ಅಂತೂ ಸೃಷ್ಟಿಕರ್ತನ ಸರ್ವಶ್ರೇಷ್ಠ ಪ್ರಕೃತಿಯ ಕಲ್ಪನೆ ಇಲ್ಲಿ ಮೈದಳೆದಂತಿತ್ತು. ಇಲ್ಲಿನ ಮಣ್ಣಿಗೆ ಅದೆಂತಹ ಕಂಪು! ಇಲ್ಲಿ ಬೀಸುವ ಮಂದಾನಿಲಕ್ಕೆ ಅದೆಂತಹ ಅಪರಿಮಿತ ಆಕರ್ಷಣ ಶಕ್ತಿ! ಇಂತಹ ಹಳ್ಳಿಯಲ್ಲಿ ನನ್ನ ಪ್ರಾಥಮಿಕ ಶಿಕ್ಷಣ ಮುಗಿಸಿ ಇಲ್ಲೇ

ಇರುವ ಪ್ರೌಢಶಾಲೆಗೆ ಸೇರಿಕೊಂಡೆ. ಅದೇ ಸಮಯದಲ್ಲೇ ನನ್ನ ಬದುಕಿಗೆ ಒಂದು ಮಹಾನ್ ತಿರುವು ದೊರಕಿತು. ನನಗೆ ನಿನ್ನ ಪರಿಚಯವಾದ ಆ ಕ್ಷಣವೇ ಸುವರ್ಣಾಕ್ಷರಗಳಲ್ಲಿ ಬರೆದಿಡಲು ಅರ್ಹವಾದುದಾಗಿದೆ.

ನಾನು ಕಲಿಯುತ್ತಿದ್ದ ಅದೇ ಹೈಸ್ಕೂಲಿಗೆ ನೀನೂ ಶಿಕ್ಷಣಾರ್ಥಿಯಾಗಿ ಬಂದದ್ದು ಒಂದು ಆಕಸ್ಮಿಕವೇ ಸರಿ. ಎಲ್ಲೋ ಹುಟ್ಟಿ ಬೆಳೆದ ನಾವು, ಪರಸ್ಪರರಿಗೆ ಅಪರಿಚಿತರಾಗಿದ್ದ ನಾವು ವಿದ್ಯಾರ್ಜನೆಗಾಗಿ ಈ ವಿದ್ಯಾಲಯಕ್ಕೆ ಬಂದುದು ನನ್ನ ದೃಷ್ಟಿಯಲ್ಲಿ ಬಹುಶಃ ನನ್ನ ಬದುಕಿನ ಗತಿಯನ್ನೇ ಬದಲಿಸಿಬಿಟ್ಟಿತು. ಆಗ ತಾನೇ ಹದಿಹರೆಯ ತನ್ನ ಪ್ರಭುತ್ವವನ್ನು ಸ್ಥಾಪಿಸುತ್ತಿರುವ ಕಾಲ. ದೈಹಿಕವಾಗಿಯೂ ಮಾನಸಿಕವಾಗಿಯೂ ಪ್ರಬುದ್ಧರಾಗುತ್ತಿರುವ ಸುಸಂಧಿ ಅದಾಗಿತ್ತು.

ನಾನು ಹತ್ತನೇ ತರಗತಿಯಲ್ಲಿದ್ದಾಗಲೇ ನನಗೆ ನಿನ್ನ ಪರಿಚಯವಾದದ್ದು. ಅಲ್ಲಿಯವರೆಗೆ ನೀನು ಅದೇ ಶಾಲೆಯಲ್ಲಿದ್ದೂ ನನಗೆ ಅನಾಮಿಕಳಾಗಿದ್ದೆ. ಯಾಕೆ ಬಲ್ಲೆಯಾ? ನಾನು ಪ್ರೀತಿ ಪ್ರೇಮಗಳ ವಿಷಯದಲ್ಲಿ ತಾಟಸ್ಥ್ಯ ಧೋರಣೆಯನ್ನು ಅನುಸರಿಸುತ್ತಿದ್ದೆ. ಅರಸಿಕನಾಗಿದ್ದೆ. ಹುಡುಗಿಯರ ಬಗ್ಗೆ, ಅವರನ್ನು ಒಲಿಸಿಕೊಳ್ಳ ಬಲ್ಲ ಕಲೆಯ ಬಗ್ಗೆ ನಿರಾಸಕ್ತನಾಗಿದ್ದೆ. ನನ್ನ ಸ್ನೇಹಿತರನೇಕರು ಇದರಲ್ಲಿ ಪಳಗಿದ್ದು, ಅವರ ಮಹಾನ್ ಸಾಧನೆಗಳನ್ನೆಲ್ಲಾ ಉಪ್ಪುಖಾರ ಹಚ್ಚಿ ಬಡಾಯಿ ಕೊಚ್ಚಿಕೊಳ್ಳುತ್ತಿದ್ದಾಗ ಕಿವಿಯಿದ್ದೂ ಕಿವುಡನಂತೆ ಇರುತ್ತಿದ್ದೆ. ನಾನು ಅಪರಿಮಿತ ಸುಂದರನಲ್ಲದಿದ್ದರೂ ನಾಲ್ಕು ಜನರು ಆಸಕ್ತಿಯಿಂದ ನೋಡಬಲ್ಲ ರೂಪ ನನ್ನದು. ವಿಶಾಲ, ಆರೋಗ್ಯವಂತ ದೃಢಕಾಯ. ಗಂಭೀರ ನಡವಳಿಕೆ, ಪಠ್ಯ ಚಟುವಟಿಕೆಗಳಲ್ಲಿ ಅಗ್ರಸ್ಥಾನ ಎಲ್ಲಕ್ಕಿಂತ ಮಿಗಿಲಾಗಿ ನನ್ನ ನಿರರ್ಗಳ ಮಾತುಗಾರಿಕೆ ಎಲ್ಲರನ್ನೂ ಮೋಡಿಗೊಳಿಸಿತ್ತು.

ನೀನೇ ಮೊದಲಾಗಿ ನನ್ನ ಗಮನವನ್ನು ನಿನ್ನೆಡೆಗೆ ಸೆಳೆದುಕೊಂಡೆ. ನನ್ನ ಮನದಲ್ಲಿ ಸುಪ್ತವಾಗಿದ್ದ ಪ್ರೀತಿಯ ಭಾವನೆಗಳಿಗೆ ಮೂರ್ತರೂಪ ಕೊಟ್ಟೆ. ನನ್ನಲ್ಲಿ ಆಸೆ ಆಶೋತ್ತರಗಳ ಬೆಳಕನ್ನು ಮೂಡಿಸಿದೆ.

ನೀನು ನಿನ್ನ ಹೆಸರಿಗೆ ತಕ್ಕಂತೆ ಶ್ವೇತವರ್ಣದವಳಾಗಿದ್ದು ಸುಂದರಿಯಾಗಿದ್ದೆ. ಗುಂಪಿನ ನಡುವೆ ಎದ್ದು ಕಾಣುವ ಸೌಂದರ್ಯ ನಿನ್ನದು. ನಿನ್ನ ನೀಳವಾದ ಕೇಶರಾಶಿ ಯಾರನ್ನೂ ಒಂದುಕ್ಷಣ ವಿಚಲಿತರನ್ನಾಗಿ ಮಾಡಬಲ್ಲುದು. ಚಿಗರೆಮರಿಗಳಂತೆ ಪುಟಿಯುವ ನಿನ್ನ ನಯನಗಳು ಯುವ ಹೃದಯಗಳಿಗೆ ಸೆಳೆದುಬಿಟ್ಟ ಮಂತ್ರಾಸ್ತ್ರದಂತೆ. ನಿನ್ನ ಆ ಗಂಭೀರ ನೋಟಕ್ಕೆ ಸೋತು ಶರಣಾಗುವುದೇ ಉಳಿದ ಏಕೈಕ ಮಾರ್ಗವಾಗಿದೆ.

ನಿನ್ನ ನವಿಲಿನಂತಹ ಬಳುಕುವ ನಡಿಗೆ ನನಗೆ ಮೋಡಿ ಹಾಕಿತ್ತು. ನೀನು ನಕ್ಕಾಗ ಮುತ್ತು ಉದುರುವಂತಿತ್ತು. ಆ ಶುಭ್ರ, ಶ್ವೇತ ದಂತಪಂಕ್ತಿಗಳನ್ನು ವರ್ಣಿಸಲಸದಳ. ಎಲ್ಲೆಲ್ಲಿ ಎಷ್ಟು ಬೇಕೋ ಅಷ್ಟನ್ನು ಧಾರಾಳವಾಗಿ ನೀಡಿದ ಬ್ರಹ್ಮನು ಪರಿಶ್ರಮಪಟ್ಟು ತನ್ನಲ್ಲಿರುವ ಜ್ಞಾನವನ್ನೆಲ್ಲಾ ಧಾರೆಯೆರೆದು ನಿನ್ನನ್ನು ಸೃಷ್ಟಿಸಿರಬೇಕು. ಒಬ್ಬ ಹುಡುಗ ಒಂದು ಹುಡುಗಿಯಲ್ಲಿ ಅನುರಕ್ತನಾಗಲು ಇಷ್ಟೇ ಸಾಕು. ಆದರೆ ನನ್ನ ದೃಷ್ಟಿಯಲ್ಲಿ ಇನ್ನೂ ಕೆಲವು ಅರ್ಹತೆಗಳು ಆಕೆಯಲ್ಲಿ ಇರಬೇಕಿತ್ತು.

ಯೋಗ್ಯ ಗುಣನಡತೆ, ನೇರವಾಗಿ, ಸ್ಪಷ್ಟವಾಗಿ ಮಾತನಾಡುವ ವ್ಯಕ್ತಿತ್ವವಿರಬೇಕು. ಆಕೆ ದಯೆ, ಅನುಕಂಪ, ವಾತ್ಸಲ್ಯ, ಮಮತೆಗಳ ಸಾಕಾರ ಮೂರ್ತಿಯಾಗಿರಬೇಕು. ಧ್ಯೇಯ ಧೋರಣೆಗಳಲ್ಲಿ, ಚಿಂತನೆಯಲ್ಲಿ ಯೋಚನೆ, ಯೋಜನೆಗಳಲ್ಲಿ ಸಾಮ್ಯತೆ ಇರಬೇಕು.

ನಾನು ನಿನ್ನನ್ನು ಬಹಳ ಸಾಮೀಪ್ಯದಿಂದ ಅಧ್ಯಯನ ಮಾಡಲಾರಂಭಿಸಿದೆ. ನೀನು ನನ್ನ ವಿಷಯದಲ್ಲಿ ಆಸಕ್ತಳಾದುದು ನನ್ನ ಗಮನಕ್ಕೆ ಬಂದ ಕೂಡಲೇ ನಾನೂ ನಿನ್ನ ಬಗ್ಗೆ ಯೋಚಿಸಲಾರಂಭಿಸಿದೆ. ದೇವರು ಈ ಭೂಮಿಯನ್ನು ಸೃಷ್ಟಿಸಿ ಕೊಂಚ ವಿರಾಮ ಪಡೆದ. ದೇವರು ಗಂಡನ್ನು ಸೃಷ್ಟಿಸಿ ವಿಶ್ರಾಂತಿ ಪಡೆದ. ಆದರೆ ದೇವರು ಹೆಣ್ಣನ್ನು ಸೃಷ್ಟಿಸಿದ ಮೇಲೆ ದೇವರಿಗಾಗಲೀ ಗಂಡಿಗಾಗಲೀ ವಿರಾಮವೇ ಇಲ್ಲ. ಈ ಮಾತು ಅಕ್ಷರಶಃ ಸತ್ಯ. ಹೆಣ್ಣಿನ ಒಂದು ನೋಟಕ್ಕೆ ಗಂಡಿನ ಎಲ್ಲಾ ಯೋಚನೆ,

ನಿರ್ಧಾರಗಳು ತಲೆಕೆಳಗಾಗುತ್ತವೆ.

ಚಂದ್ರನ ಬೆಳದಿಂಗಳಿಗೆ ಕೋಟಿ ನಕ್ಷತ್ರಗಳ ಮಿನುಗುಪ್ರಭೆ ಸರಿಸಾಟಿಯಲ್ಲ. ನೀನು ಅಪ್ರತಿಮ ಸುಂದರಿ. ನಾನು ನಿನಗೆ ಸೋತು ಹೋದೆ. ನಾನು ಯಾವಾಗಲೂ ಸೌಂದರ್ಯದ ಆರಾಧಕ. ನೀನು ಬಿಚ್ಚುಮನಸ್ಸಿನ, ನೇರ ಮಾತಿನ ಮಾತುಗಾರ್ತಿ ಎಂದು ನನಗೆ ತಿಳಿದ ಮೇಲಂತೂ ನಿನ್ನ ಮಾತಿಗಾಗಿ ಹಾತೊರೆಯ ಲಾರಂಭಿಸಿದೆ. ನಿನ್ನ ಆ ಮಾಂತ್ರಿಕ ನೋಟಕ್ಕಾಗಿ ಪರಿತಪಿಸಲಾರಂಭಿಸಿದೆ.

ನಿನ್ನನ್ನು ಮೊದಲಬಾರಿಗೆ ನೋಡಿದಾಗಲೇ ನನಗೆ ಅರಿವಿಲ್ಲದೆ ನಿನ್ನ ಪ್ರೀತಿಸಲಾರಂಭಿಸಿದೆ. ಹಾಂ! ಹೌದು, ನಿನ್ನನ್ನು ಗಾಢವಾಗಿ ಪ್ರೀತಿಸಲಾರಂಭಿಸಿದೆ. ಅದು ಸಾಮಾನ್ಯ ಮಟ್ಟದ್ದಾಗಿರಲಿಲ್ಲ. ಅದು ನಿಷ್ಕಳಂಕವಾಗಿತ್ತು. ಪರಿಶುದ್ಧವಾಗಿತ್ತು. ಅದರಲ್ಲಿ ನಾಟಕೀಯತೆ ಯಿರಲಿಲ್ಲ. ಕಪಟತನವಿರಲಿಲ್ಲ. ಸ್ವಾರ್ಥತನ ವಿರಲಿಲ್ಲ.

ನಿನ್ನನ್ನು ಕಂಡಾಕ್ಷಣದಲ್ಲೇ ನೀನು ನನ್ನವಳು ಎಂಬ ಭಾವನೆ ನನ್ನಲ್ಲಿ ನೆಲೆಸಿತ್ತು. ಇದು ಮುಗ್ಧತೆಯ ಪರಮಾವಧಿಯಲ್ಲದೆ ಇನ್ನೇನು? ಈ ರೀತಿ ಪರಕೀಯರನ್ನು ತನ್ನವರು ಎಂದು ಭಾವಿಸಬಾರದೆಂಬ ಸಣ್ಣ ವಿಷಯವೂ ನನಗಾಗ ಹೊಳೆಯಲಿಲ್ಲ.

ಪ್ರೀತಿಯು ಜೀವನದ ಅತಿದೊಡ್ಡ ಶಕ್ತಿ. ಅದನ್ನು ಸೋಲಿಸುವ ಯಾವ ದುಃಶಕ್ತಿಯೂ ಪ್ರಪಂಚದಲ್ಲಿಲ್ಲ. ಕುರುಡರು ನೋಡುವ, ಮೂಗರು ಮಾತನಾಡುವ, ಕಿವುಡರು ಕೇಳ ಬಹುದಾದ ವಸ್ತು ಪ್ರೀತಿ. ಪರಸ್ಪರರನ್ನು ಅರ್ಥೈಸಿಕೊಳ್ಳಲು ವರ್ಷಗಳು ಬೇಕಿಲ್ಲ. ಕೆಲವು ಕ್ಷಣಗಳು ಸಾಕು. ಇಬ್ಬರ ಹೃದಯ, ಆತ್ಮಗಳನ್ನು ಮಿಲನಗೊಳಿಸಿ ಒಂದಾಗಿಸಲು ಕೆಲವು ಘಳಿಗೆ ಸಾಕು.

ನಿನ್ನ ಸೌಂದರ್ಯದ ಬಗ್ಗೆ ಕವನ ಬರೆಯೋಣ ವೆಂದರೆ ನಾನು ಕವಿಯಲ್ಲ. ನಿನ್ನ ಬಗ್ಗೆ ಹಾಡಿ ಹೊಗಳೋಣವೆಂದರೆ ನಾನು ಗಾಯಕನೂ ಅಲ್ಲ. ನಿನ್ನ ಅಂದವನ್ನು ಚಿತ್ರಿಸೋಣವೆಂದರೆ ನಾನು ಚಿತ್ರಕಾರನೂ ಅಲ್ಲ. ನಿನ್ನನ್ನು ಮುಗ್ಧ ವಾಗಿ ಪ್ರೇಮಿಸಬಲ್ಲ - ಸಾಮಾನ್ಯ - ಪ್ರೇಮಿ ಯಷ್ಟೇ.

ನಾನು ಬದುಕಲ್ಲಿ ಹಲವಾರು ಆಸೆಗಳನ್ನು ಇಟ್ಟುಕೊಂಡಿದ್ದೆ. ನಾನು ಪ್ರೀತಿಯ ಸಾಮೀಪ್ಯ ಕ್ಕಾಗಿ, ಅದರ ಮಧುರ ಅನುಭವಕ್ಕಾಗಿ ಹಾತೊರೆದೆ. ನಾನು ಒಂಟಿ, ದುರಾದೃಷ್ಟಶಾಲಿ ಎಂಬ ಭಾವನೆಗಳು ನನ್ನಲ್ಲಿ ಮಾನಸಿಕ ತುಮುಲ ವನ್ನೆಬ್ಬಿಸಿದ್ದವು. ನನ್ನ ಭಾವನೆಗಳೊಂದಿಗೆ ಸ್ಪಂದಿಸುವ ಆತ್ಮೀಯ ವ್ಯಕ್ತಿಯ ಸಾಮೀಪ್ಯ ನನಗೆ ಬೇಕಾಗಿತ್ತು. ನಾನು ನಿನ್ನನ್ನು ಅಕಾರಣ ವಾಗಿ ಪ್ರೀತಿಸಿದೆ. ನನ್ನ ಬಾಳಸಂಗಾತಿಯಾಗಲು ನೀನೇ ತಕ್ಕವಳು ಎಂದು ನಿರ್ಧರಿಸಿದೆ. ನನ್ನ ಗುರಿಸಾಧನೆಗೆ ನೀನು. ಗಂಡಸರ ಕೂದಲು ಬೆಳ್ಳಗಾಗುವುದು ಹೆಂಗಸರ ಬಗ್ಗೆ ಹೆಚ್ಚು ಚಿಂತಿಸುವುದರಿಂದಂತೆ. ನನ್ನ ಕೂದಲು ಬೆಳ್ಳ ಗಾಗಲೂ ಅದೇ ಕಾರಣವಿರಬೇಕು. ಆದರೆ ನಾನು ಹೆಂಗಸರ ಬಗ್ಗೆ ಚಿಂತಿಸುವುದಿಲ್ಲ. ನಿನ್ನ ಬಗ್ಗೆ ಮಾತ್ರ ಚಿಂತಿಸುತ್ತೇನೆ. ನಿನ್ನನ್ನು ನಾನು ಬಹಳ ಹಚ್ಚಿಕೊಂಡಿದ್ದೇನೆ.

ಪ್ರೇಮಕ್ಕೆ ಸಿಕ್ಕಿಬಿದ್ದ ನಾಯಿಯೂ ಕವಿತೆ ಹಾಡಿ ಊಳಿಡುತ್ತದೆ ಎಂದು ಬಲ್ಲವರು ಹೇಳುತ್ತಾರೆ. ಹಾಗಿರುವಾಗ ನನ್ನಂತವರ ಪಾಡೇನು? ಬಹುಶಃ ನಿನಗೆ ನೆನಪಿರಬಹುದು. ಅಂದು ನೀನು ಒಂಟಿಯಾಗಿ ಸಿಕ್ಕ ನನ್ನನ್ನು ನಿನ್ನ ಸ್ನೇಹಿತೆಯರ ಜತೆಗೂಡಿ ಛೇಡಿಸಿದ್ದು, ಆದರೆ ಶಾಲೆಯಲ್ಲೇ ಒಳ್ಳೇ ವಾಗ್ಮಿ ಎಂದು ಹೆಸರು ಗಳಿಸಿದ್ದ ನಾನು, ನಿನ್ನ ಬಾಯನ್ನೇ ಮುಚ್ಚಿಸಿದ್ದು, ನನ್ನ ಸ್ನೇಹಿತರ ಪೈಕಿ ಯಾರೋ ಮಾಡಿದ ಕುಕೃತ್ಯಕ್ಕೆ ನನ್ನನ್ನೇ ಅಪರಾಧಿ ಎಂದು ಬಗೆದು ನೀನು ನನಗೆ ಬಯ್ದದ್ದು, ಆಮೇಲೆ ನಿಜದ ಅರಿವಾಗಿ ಪೆಚ್ಚುಮೋರೆ ಹಾಕಿಕೊಂಡು ದೀನ ಸ್ವರದಲ್ಲಿ ಕ್ಷಮೆ ಯಾಚಿಸಿದ್ದು ಇವೆಲ್ಲಾ ನನಗೆ ಚೆನ್ನಾಗಿ ನೆನಪಿದೆ.

ನನಗರಿವಿಲ್ಲದೆ ನೀನು ನಿನ್ನ ವರ್ಣ ಭಾವ ಚಿತ್ರವನ್ನು ನನ್ನ ಭಾಷಾ ಪಠ್ಯಪುಸ್ತಕದೊಳಕ್ಕೆ ಸೇರಿಸಿದ್ದು, ಅದು ನನ್ನ ಗೆಳೆಯರ ಬಳಗಕ್ಕೆ ಸಿಕ್ಕಿ ಬೇಡದ ರಾದ್ಧಾಂತವಾದದ್ದು, ವಿರಾಮದ ಸಮಯದಲ್ಲಿ ನನ್ನ ತರಗತಿಯ ಪಕ್ಕದಲ್ಲೇ

ನೀನು ಸುಳಿದಾಡುತ್ತಿದ್ದುದು, ನನಗೋಸ್ಕರ ನಿನ್ನ ಕಣ್ಣುಗಳು ಹುಡುಕಾಟ ನಡೆಸುವುದು ಇವೆಲ್ಲಾ ನನ್ನ ಗಮನಕ್ಕೆ ಬಂದು ನೀನು ನನ್ನನ್ನು ಇಷ್ಟಪಡುತ್ತಿರುವ ವಿಷಯ ತಿಳಿಯಿತು. ಅಂದಿನಿಂದ ನನಗೆ ಸ್ವರ್ಗಕ್ಕೆ ಮೂರೇ ಗೇಣು ಇದ್ದಂತೆ ಭಾಸವಾಯಿತು.

ಆದರೆ ನೀನು ನನಗೆ ಚಿದಂಬರ ರಹಸ್ಯ ವಾಗಿಯೇ ಉಳಿದೆ ಶ್ವೇತಾ. ನನ್ನೆಲ್ಲಾ ಆಸೆಗಳು ಕನಸಿನ ಗೋಪುರವಾಗುತ್ತದೆ, ನಾನು ಬಯಸಿದ್ದು ನನಗೆ ಮರೀಚಿಕೆಯಾಗುತ್ತದೆ ಎಂದು ನಾನು ಕನಸಲ್ಲೂ ಬಗೆದಿರಲಿಲ್ಲ. ಇಷ್ಟು ಸಮಯದಲ್ಲಿ ನೀನು ನನ್ನ ಜತೆ ಮಾತಾಡಲೇ ಇಲ್ಲವಲ್ಲೇ? ಎದುರು ಸಿಕ್ಕಾಗ ಬರೀ ಮುಗುಳ್ನಗೆಯಲ್ಲೇ ಜಾರಿಕೊಳ್ಳುತ್ತಿದ್ದೆ. ನಿನ್ನ ಮನದಭಿಪ್ರಾಯವನ್ನು ನನಗೆ ಅರುಹಲೇ ಇಲ್ಲ. ನನಗೆಂದೂ ಮೌನವನ್ನು ಸಹಿಸ ಲಾಗದು. ನಿನ್ನ ಮೌನವು ನನ್ನನ್ನು ಸೂಜಿ ಯಿಂದ ಚುಚ್ಚಿದಂತಾಗುತ್ತಿತ್ತು.

ದೀರ್ಘ ಸಮಯದ ಮೌನದ ನಂತರ ನಾನೇ ನನ್ನ ಮನದ ಆಸೆಯನ್ನು, ನಾನು ನಿನ್ನನ್ನು ಪ್ರೀತಿಸುತ್ತಿರುವ ವಿಷಯವನ್ನು ನಿನಗೆ ತಿಳಿಸಿದೆ. ಆ ಬಗ್ಗೆ ನಿನ್ನ ಅಭಿಪ್ರಾಯವನ್ನು ಆದಷ್ಟು ಬೇಗನೆ ತಿಳಿಸೆಂದೂ ಹೇಳಿದ್ದು ಮರೆತೆಯೇನೆ? ಆದರೆ ನೀನು ಇನ್ನೂ ಮೌನಿಯಾಗಿಯೇ ಇದ್ದೀಯಾ!

ನೀನು ನನ್ನ ಜತೆ ಈ ರೀತಿ ಯಾಕೆ

## ತಿಂಡಿ ತಿನಿಸುಗಳ ಸ್ವರ್ಗ

ಮೈಸೂರು ತಿಂಡಿ-ತಿನಿಸು, ಭೋಜನಪ್ರಿಯರಿಗೆ ಒಂದು ಸ್ವರ್ಗವಿದ್ದಂತೆ. ಇಲ್ಲಿಯ ಬಹುತೇಕ ಜನರು ಪರವೂರಿನಿಂದ ಬರುವ ಅತಿಥಿಗಳಿಗೆ ತಮ್ಮ ಮನೆಯ ಸತ್ಕಾರದ ಜೊತೆಗೆ ಇಲ್ಲಿರುವ ಹೊಟೇಲ್‌ಗಳಲ್ಲಿ ತಿಂಡಿತಿನಿಸುಗಳನ್ನು ತಿನಿಸಿ ಸತ್ಕರಿಸುತ್ತಾರೆ. ಈ ಊರು ತನ್ನದೇ ಆದ ಕೆಲವು ತಿಂಡಿ ತಿನಿಸುಗಳಿಗೆ ಪ್ರಸಿದ್ಧಿಯಾಗಿದೆ. 'ಮೈಸೂರು ಪಾಕ್' ಇದೇ ಊರಿನಲ್ಲಿ ಜನ್ಮ ತಳೆದ ಸಿಹಿ ತಿಂಡಿ. ಇಲ್ಲಿಯ 'ಇಂದ್ರ ಭವನ್'ನ ಮೈಸೂರು ಪಾಕ್‌ನ ರುಚಿ ಬೇರೆಲ್ಲಿಯೂ ಸಿಗಲಾರದು. ಇಲ್ಲಿಯ ಜನರ ಆಸೆ ಆಕಾಂಕ್ಷೆಗಳಿಗೆ ಇಲ್ಲಿಯ ಹೊಟೇಲ್ ಉದ್ಯಮಿಗಳು ಸಹಕರಿಸುತ್ತಿರುವಂತೆ ಕಾಣುತ್ತದೆ. ತಿಂಡಿಪೋತರಿಗೆ ರುಚಿರುಚಿ ಯಾದ ತಿಂಡಿಗಳನ್ನು ಕೊಡುವ ಹಲವಾರು ರೆಸ್ಟೋರೆಂಟ್‌ಗಳು, ತಂಪು ಪಾನೀಯ ಹಾಗೂ ಐಸ್‌ಕ್ರೀಂ ಅಂಗಡಿಗಳು ಬಹಳವಾಗಿವೆ. ಅವುಗಳಲ್ಲಿ ಮುಖ್ಯವಾದವುಗಳು ಧನ್ವಂತರಿ ರಸ್ತೆಯಲ್ಲಿರುವ 'ನ್ಯೂ ಗಾಯಿತ್ರಿ ಭವನ್', ದೇವರಾಜ್ ಅರಸ್ ರಸ್ತೆಯಲ್ಲಿರುವ 'ನಳಪಾಕ'. ಇಲ್ಲಿಯ ಬಗೆಬಗೆಯ ದೋಸೆ ಬಹಳ ರುಚಿಕರವಾಗಿದ್ದು ಮತ್ತೊಮ್ಮೆ ತಿನ್ನಬೇಕೆಂಬ ಆಸೆ ಉಂಟಾಗುತ್ತದೆ. ತ್ಯಾಗರಾಜ ರಸ್ತೆಯಲ್ಲಿ 'ಪ್ರಸಾದ್ ಲಂಚ್ ಹೋಂ', ಇಲ್ಲಿಯ ಗರಿಗರಿ ಸೆಟ್ ಮಸಾಲೆ ಎಂತಹವರಾದರೂ ತಿನ್ನಲೇಬೇಕೆನಿಸು ತ್ತದೆ. ಚಾಮುಂಡಿಪುರಂನಲ್ಲಿರುವ ಗಾಯಿತ್ರಿ ಟಿಫಿನ್ ರೂಂ (GTR) ಇದು ಬೆಂಗಳೂರಿನ ಎಂಟಿಆರ್‌ನಷ್ಟೇ ಪ್ರಸಿದ್ಧ. ದಾಸ್‌ಪ್ರಕಾಶ್ ಸಂಸ್ಥೆಯ ದಾಸ್‌ಪ್ರಕಾಶ್‌ನಲ್ಲಿ ಉತ್ತರ ಭಾರತದ ಹಾಗೂ ದಕ್ಷಿಣ ಭಾರತದ ಸಸ್ಯಾಹಾರ ತಿಂಡಿಗಳು ಬಹಳ ರುಚಿಯಾಗಿರುತ್ತದೆ.

ಇಷ್ಟೇ ಅಲ್ಲದೆ ಹಲವಾರು ಫಾಸ್ಟ್‌ಫುಡ್ ಸೆಂಟರ್‌ಗಳು ತಿಂಡಿ ಪ್ರಿಯರಿಗೆ ರಸದೌತಣ ನೀಡುತ್ತದೆ. ಅವುಗಳೆಂದರೆ ನಜರ್‌ಬಾದ್‌ನಲ್ಲಿರುವ ಹೊಟೇಲ್ ಇಂದ್ರಾಣಿ, ಜೆ.ಎಸ್.ಬಿ. ರಸ್ತೆಯಲ್ಲಿರುವ ಹೊಟೇಲ್ ರಮ್ಯ, ಸಯ್ಯಾಜಿರಾವ್ ರಸ್ತೆಯ ಬಾಂಬೆ ಟಿಫಾನಿಸ್, ಧನ್ವಂತರಿ ರಸ್ತೆಯ ಕಟ್ಟಾ-ಮಿಟಾ, ಜಯಲಕ್ಷ್ಮಿಪುರಂನ Chic-chic-Tha, ವಿಧವಿಧದ ದೋಸೆಗಳಿಂದ ಜನರನ್ನು ಆಕರ್ಷಿಸುತ್ತದೆ.

ಶ್ರೀಮಂತರಾಗಿಯೇ ಇರುವ ಅತಿ ದೊಡ್ಡ ಹೊಟೇಲ್‌ಗಳಾದ ಸುಜಾತ, ಹೊಟೇಲ್ ಹೈವೆ, ದಾಸಪ್ರಕಾಶ್ ಪ್ಯಾರಡೈಸ್, ರಿಟ್, ಮೆಟ್ರೋಪೋಲ್, ಕಿಂಗ್ಸ್‌ಕೋರ್ಟು, ಸದರನ್‌ಸ್ಟಾರ್, ಲಲಿತ ಮಹಲ್ ಪ್ಯಾಲೇಸ್ ಮುಂತಾದವುಗಳು. ಇಲ್ಲಿ ರುಚಿಯಾದ ತಿನಸು ಸಿಗುವುದರ ಜೊತೆಗೆ ಇಲ್ಲಿಯವರು ನೀಡುವ ಅತಿಥ್ಯ, ರೀತಿ ನೀತಿಗಳು ವೈವಿಧ್ಯಪೂರ್ಣ. ಇಲ್ಲಿಯ ಶುಚಿ ರುಚಿ ಎರಡೂ ಚೆನ್ನ.

● ಆರ್. ಗಣೇಶ್ ಮೈಸೂರು

ನಡೆದುಕೊಂಡೆ! ಹಾಗಾದರೆ ನಾನು ನಿನ್ನ ಬಗ್ಗೆ ತಿಳಿದುಕೊಂಡದ್ದೆಲ್ಲಾ ಸುಳ್ಳೇ? ನೀನು ನನ್ನನ್ನು ಪ್ರೀತಿಸಲೇ ಇಲ್ಲವೆ? ನಾವು ಯಾವಾಗಲೂ ಜೀವನದ ವಿಷಯದಲ್ಲಿ ಹುಡುಗಾಟವಾಡ ಬಾರದು. ತಿಳಿದೂ ತಿಳಿದೂ ನಮ್ಮ ಬದುಕನ್ನು ನರಕಸದೃಶ್ಯವನ್ನಾಗಿಸಬಾರದು. ನೀನು ಒಮ್ಮೆಯೂ ನನ್ನೊಂದಿಗೆ ಪ್ರೀತಿಯಿಂದ ಮಾತಾಡಲಿಲ್ಲ. ನೀನು ನನ್ನನ್ನು ಪ್ರೀತಿಸಿದ್ದರೂ ಇಲ್ಲದಿದ್ದರೂ ನನ್ನೊಂದಿಗೆ ಹೇಳಬೇಕಿತ್ತು. ನಿನ್ನ ಆಸೆ ಆಕಾಂಕ್ಷೆಗಳನ್ನು ಧ್ಯೇಯಧೋರಣೆಗಳನ್ನು ನನಗೆ ತಿಳಿಸಬೇಕಿತ್ತು.

ನಿನ್ನ ಭವಿಷ್ಯವನ್ನು ರೂಪಿಸಿಕೊಳ್ಳುವ ಅಧಿಕಾರ ನಿನಗೆ ಇದ್ದೇ ಇದೆ. ಆದರ ಮೇಲೆ ಅಧಿಕಾರ ಚಲಾಯಿಸುವ, ದಬ್ಬಾಳಿಕೆ ನಡೆಸುವ ಹಕ್ಕು ನನಗಿಲ್ಲ. ನಾನು ಎಂದಿಗೂ ಸೌಜನ್ಯ ವನ್ನು, ನೈತಿಕತೆ ದಾಟಿ ಹೋಗಿರಲಿಲ್ಲ. ನೀನು ನನ್ನನ್ನು ಅರ್ಥ ಮಾಡಿಕೊಳ್ಳಬೇಕಿತ್ತು. ತನ್ಮೂಲಕ ನಿನ್ನನ್ನು ಅರ್ಥಮಾಡಿಕೊಳ್ಳುವ ಅವಕಾಶ ಕೊಡಬೇಕಿತ್ತು.

ನಾನು ಎಂದಿಗೂ ನಿನ್ನೊಂದಿಗೆ ಅಂಕೆ ಮೀರಿದ, ನೀತಿಗೆಟ್ಟ ವರ್ತನೆ ತೋರಿಸಿರಲಿಲ್ಲ. ನಿನ್ನ ಮನಸ್ಸಿಗೆ ನೋವಾಗುವ ಕೃತ್ಯ ನಾನು ಎಸಗಿರಲಿಲ್ಲ. ನಿನಗೆ ಕೇಡು ಬಗೆಯುವ, ಮೋಸ ಮಾಡುವ ಇಚ್ಛೆ ನನಗಿರಲಿಲ್ಲ. ನಿನ್ನ ಮೇಲಿನ ನನ್ನ ಪ್ರೀತಿ ವರ್ಣನೆಗೂ ಮೀರಿದ್ದು.

ನಾನು ಆರ್ಥಿಕವಾಗಿ ಕಡು ಬಡವನಾಗಿದ್ದೆ. ಆದರೆ ನನ್ನ ಹೃದಯ ಶ್ರೀಮಂತಿಕೆಯಿಂದ ಕೂಡಿತ್ತು. ನೀನು ಪ್ರೀತಿಗೆ ಬೆಲೆ ಕೊಡಬೇಕಿತ್ತು. ನಾನು ತಪ್ಪು ಖಂಡಿತಾ ಮಾಡಿಲ್ಲ. ಪ್ರೀತಿಸು ವುದು ಒಂದು ದೊಡ್ಡ ಅಪರಾಧವಾದರೆ ಈ ಜಗತ್ತಿನಲ್ಲಿರುವ ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಅಪರಾಧಿಗಳೇ. ದೇವರು ಪರಿಶುದ್ಧ ಪ್ರೀತಿಯ ಪರೀಕ್ಷೆ ಮಾಡುತ್ತಾನೆ ಎಂಬುದು ನನ್ನ ಮಟ್ಟಿಗೆ ಸತ್ಯವೇ.

ಹೆಂಗಸರಿಗೆ ಕಡಿಮೆ ತಿಳಿದಿದ್ದರೂ ಹೆಚ್ಚು ಅರ್ಥವಾಗುತ್ತದೆ ಎಂಬ ಮಾತಿದೆ. ಆದರೆ ನಿನಗೆ ಹೆಚ್ಚು ತಿಳಿದಿದೆ. ಆದರೆ ಏನೂ ಅರ್ಥವಾಗಲೇ ಇಲ್ಲ. ಒಂದು ವೇಳೆ ನಾನು ಮಾಡಿದ್ದು ಅಪರಾಧವಾಗಿದ್ದಲ್ಲಿ ಅದರ ಪ್ರಾಯಶ್ಚಿತ್ತವನ್ನು ನಾನೊಬ್ಬನೇ ಏಕಾಂಗಿಯಾಗಿ ಅನುಭವಿಸಬೇಕು ಎಂಬ ನಿರ್ಧಾರಕ್ಕೆ ಬಂದಿದ್ದೇನೆ.

ಪ್ರೀತಿ ನನಗೆ ಬರೀ ನೋವು, ದುಃಖ, ಬೇಸರ ಕೊಟ್ಟಿತು. ಆದರೆ ಎಂದಿಗೂ ನಾನು ಪ್ರೀತಿಗೆ ಮೋಸ ಮಾಡುವುದಿಲ್ಲ. ನಾನು ಅದನ್ನು ಗೌರವಿಸುತ್ತೇನೆ. ಅದಕ್ಕಾಗಿ ನನ್ನ ಸುಖ, ಸಂತೋಷಗಳನ್ನು ತ್ಯಾಗ ಮಾಡುತ್ತೇನೆ. ನನಗೀಗ ಬರೆಯುವ ಚಟ ಅಂಟಿಬಿಟ್ಟಿದೆ. ಜೀವನದಲ್ಲಿ ಏನನ್ನೂ ಸಾಧಿಸಲಾಗದವರು ಕವಿ ಗಳಾಗುತ್ತಾರೆ ಎಂಬ ಮಾತಿದೆ. ನಾನು ಮದುವೆ ಯಾಗುವುದಾದರೇ ನಿನ್ನನ್ನೇ ಎಂದು ನಿರ್ಧರಿಸಿದ್ದೆ. ಇಲ್ಲವಾದರೆ ಈ ಜನ್ಮವಿಡೀ ಏಕಾಂಗಿಯಾಗಿಯೇ ಉಳಿವೆನೆಂದು ಪ್ರತಿಜ್ಞೆ ಮಾಡಿದ್ದೆ. ಅದನ್ನು ಇಲ್ಲಿಯವರೆಗೆ ಪಾಲಿಸಿ ಕೊಂಡು ಬಂದಿದ್ದೇನೆ.

ನಾನು ನಿನ್ನನ್ನು ಮಾನಸಿಕವಾಗಿ ವರಿಸಿ ಬಿಟ್ಟಿದ್ದೆ. ಈಗ ನನಗೆ ಪುಸ್ತಕಗಳು, ಪೆನ್ನು, ಕಾಗದಗಳೇ ಸಂಗಾತಿಯಾಗಿಬಿಟ್ಟಿವೆ. ಪುಸ್ತಕವೇ ಈಗ ನನ್ನ ಎರಡನೇ ಹೆಂಡತಿ. ಊರು ಬಿಟ್ಟು ಇಷ್ಟು ವರ್ಷಗಳಾದರು ಗತಕಾಲದ ಪ್ರತಿ ಯೊಂದು ಘಟನೆಯೂ ಹಚ್ಚ ಹಸುರಾಗಿ ಮನದಲ್ಲಿ ಉಳಿದಿದೆ. ಈ ಊರಿಗೆ ಬಂದಾಗ ಲಂತೂ ಸಿನೇಮಾ ರೀಲಿನಂತೆ ಅವು ಮರು ಕಳಿಸುತ್ತವೆ.

ನೀನು ಎಲ್ಲಿದ್ದೀಯೋ ಹೇಗಿದ್ದೀಯೋ ನನಗೆ ತಿಳಿದಿಲ್ಲ. ಆದರೆ ನನ್ನ ಬದುಕಲ್ಲಿ ಕ್ಷಣಕಾಲ ಪ್ರವೇಶಿಸಿ ಬಿರುಗಾಳಿ ಎಬ್ಬಿಸಿಬಿಟ್ಟೆ. ಈ ಭೂಮಿ ಗುಂಡಗಿರುವುದರಿಂದ ಒಂದಲ್ಲ ಒಂದು ದಿನ ನಾವು ಮತ್ತೆ ಸಂಧಿಸುವೆವು ಎಂಬ ಭರವಸೆ ನನಗಿದೆ.

ಇವನ್ನೆಲ್ಲಾ ಯೋಚಿಸುತ್ತಾ ಎಷ್ಟು ಸಮಯ ಕುಳಿತು ಬಿಟ್ಟೆನೋ ನನಗರಿವಿಲ್ಲ. ಅದೋ ದಿನವಿಡೀ ಕಾರ್ಯತತ್ಪರನಾಗಿದ್ದ ದಿನಕರನು ದಣಿದಂತೆ ಕಂಡುಬಂದು ನಿನ್ನ ಬದುಕೂ ಹೀಗೆಯೇ ನಶ್ವರ ಎಂದು ಅಣಕವಾಡುತ್ತಾ ದೂರದ ದಿಗಂತದಲ್ಲಿ ಕಡಲಲ್ಲಿ ಮುಳುಗಿ ಕಣ್ಮರೆಯಾಗುತ್ತಿದ್ದಾನೆ. ●

ನಗೆ ಸೀರಿಯಲ್

# ಕಂಡಕ್ಟರ್ ಕರಿಯಪ್ಪ ಜೂನಿಯರ್

## 10 : ಕುದುರೆಗಾಡಿ-ಕನ್ನಂಬಾಡಿ

● ಎಂ. ಎಸ್. ನರಸಿಂಹಮೂರ್ತಿ

ಗಿಲೀಟು ವಾಲೆ ಪ್ರಕರಣ ನಡೆದ ಮೇಲೆ ನಿಂಗಿ ಯೋಚನಾಕ್ರಾಂತಳಾದಳು. ಕರಿಯಪ್ಪನಿಗೆ ತನ್ನ ಮೇಲೆ ಪ್ರೀತಿ ಇಲ್ಲ ಎಂಬುದು ಕಂಡುಕೊಂಡಿದ್ದಳು. ಸೀನಿಯರ್ ಕರಿಯಪ್ಪನಿಗೂ ಇದು ಗಮನಕ್ಕೆ ಬಂದಿತ್ತು. ಮಗ ರೂಟು ಬದಲಾಯಿಸಿದ್ದಾನೆ. ಯಾವುದೋ ಹೊಸ ರೂಟು ಹಿಡಿದಿದ್ದಾನೆ. ಅವಳ್ಯಾವೊಳೋ ಲೈಲಾ ಮೇಡಂ ಅಂತೆ.

ರಾತ್ರಿ ಕಂಡ ರೂಟಿನಲ್ಲಿ ಬೆಳಿಗ್ಗೆ ಗಾಡಿ ಓಡಿಸುವುದು ತಪ್ಪು. ಫೇರ್‌ಸ್ಟೇಜ್ ಯಾವುದೋ, ಎಂಟ್ರಿ ಎಲ್ಲಿ ಹಾಕಬೇಕೋ ಒಂದೂ ತಿಳಿಯುವುದಿಲ್ಲ. ಮಗನನ್ನು ಲೈನಿಗೆ ವಾಪಸ್ ಎಳೆಯದೇ ಹೋದರೆ ಕಷ್ಟವಾಗುತ್ತದೆ ಎಂದುಕೊಂಡ.

**ನಿಂಗಮಾರನಹಳ್ಳಿ ನಿಂಗಿ ಗಿಲೀಟ್ ವಾಲೆಗಳನ್ನು ನೋಡಿ 'ಚಾವುಂಡಿ' ಅವತಾರ ತಾಳಿದಾಗ ಜೂನಿಯರ್ ಮೆತ್ತಗಾಗಲೇ ಬೇಕಾಯಿತು. 'ನೀನೇ ಬೇರೆ ವಾಲೆ ಮಾಡಿಸ್ಕಂಡು ಬಾ, ಕಾಸು ನಾ ಕೊಡ್ತೀನಿ' ಎಂದು ಸೀನಿಯರ್ ಹೇಳಿದಾಗ ಸಂಬಂಧಗಳಲ್ಲಿ ಮತ್ತೆ ರಂಗು ಬಂದಿತ್ತು.**

ನಿಂಗಿ ಮಾತು ಕಡಿಮೆ ಮಾಡಿದ್ದಳು. ಅಡಿಗೆ ಮಾಡಿ ಮಾವನಿಗೆ ಬಡಿಸುತ್ತಾಳೆ. ಆದರೆ ಕರಿಯಪ್ಪನ ತಟ್ಟೆಗೆ ಏನೂ ಬಡಿಸುವುದಿಲ್ಲ. ಅಡಿಗೆಪಾತ್ರೆಗಳು ಅವನ ಮುಂದೆ ಕುಕ್ಕಿ ಒಳಗೆ ಹೋಗುತ್ತಾಳೆ.

'ಅಪ್ಪಾ, ನಿಂಗೀಗೆ ವಾಲೆಗಳ್ನ ಮಾಡಿಸ್ತೀಯಾ?' ಮಗ ಕೇಳಿದ.

'ನಾನ್ಯಾಕೋ ಮಾಡಿಸಲಿ? ಸಂಪಾದ್ನೆ ಮಾಡ್ತಿರೋನು ನೀನು. ನನ್ನ ಕೇಳೋಕೆ ನಾಚ್ಕೆ ಆಗೋಲ್ವ?' ಎಂದ ಅಪ್ಪ ದಬಾಯಿಸಿದ್ದ.

'ಮತ್ತೆ ಮೊನ್ನೆ ಆಶ್ವಾಸನೆ ಕೊಡ್ತಿದ್ದ?'

'ಅವಳ ಕಣ್ಣಾಗ ನೀರು ನೋಡಿ ಅಂಗಂದೆ.'

'ನಾನು ಮಾಡಿಸೋಲ್ಲ.'

'ಅವಳು ಯಾವೊತ್ತಿದ್ರೂ ಈ ಡಿಪೋಗೇ ಸೇರೋವಳು. ಚೆಂದಾಗಿ ಯೋಚ್ನೆ ಮಾಡು. ಅವಳೇ ನನ್ನ ಸೊಸೆ. ತಿಳೀತೇನ್ಲೇ ಮಂಕ್ ನನ್ಮಗನೆ' ಎಂದು ಅಪ್ಪ ರೇಗಿದ.

'ಆ ಹಳ್ಳೀ ಗುಗ್ಗೂನ ನಾನ್ ಮದುವೆ ಆಗಬೇಕಾ?'

'ಇಲ್ಲ, ನಿಮ್ಮಪ್ಪ ಆಗ್ತಾನೆ. ಪಟ್ಟಣದ ರಂಗು ನೋಡಿ ಬಾಯಿ ಬಿಡಬೇಡ. ಫಾರಂ ಕೋಳಿಗಿಂತ ನಾಟಿ ಕೋಳಿ ರುಚಿ ಜಾಸ್ತಿ. ತಿಳೀತೇನ್ಲೇ ಬೆಪ್‌ನನ್ಮಗನೇ.'

ಅಪ್ಪನಿಗೆ ಎದುರು ಹೇಳಲಾಗಲಿಲ್ಲ. ಕರಿಯಪ್ಪ ಡ್ಯೂಟಿಗೆ ಹೊರಟ. ಕಿಟಕಿಯ ಹಿಂದೆ ಸಪ್ಪಗೆ ನಿಂತಿದ್ದ ನಿಂಗಿ ಅವನನ್ನೇ ನೋಡಿದಳು.

ಸೀನಿಯರ್‌ಗೆ ಮನೆಯಲ್ಲಿ ಕೂರಲು ಆಗಲಿಲ್ಲ. ತನ್ನ ಹಳೆಯ ಸ್ನೇಹಿತನಾದ ಈರಭದ್ರ

ವನ್ನು ಕಾಣಲು ಹೊರಟ. ಬಸ್‌ಸ್ಟ್ಯಾಂಡಿಗೆ ಬಂದು ಎರಡು ದಮ್ ಬೀಡಿ ಎಳೆಯುವ ವೇಳೆಗೆ ಬಂದ ಯಾವುದೋ ಬಸ್‌ನಿಂದ ಈರಭದ್ರು ಇಳಿದ.

'ಓಹೋ! ಏನ್ ಕರಿಯಪ್ಪಣ್ಣ? ಇವತ್ತು ಇಲ್ಲೀಗಂಟ ಬಂದಿದ್ದೀಯ?' ಎಂದು ಈರಭದ್ರು ಮುಖ ಅಗಲಿಸಿದ.

'ನಿನ್ ತಾವ್ಕೇ ಬಂದೆ. ಅದೇ ನನ್ ಮಗನ ವಿಷ್ಯ ಕೇಳೋಣಾಂತ...'

'ಅವ್ನು ಬುಡು. ಚೆಂದಾಗೇ ಡ್ಯೂಟಿ ಮಾಡ್ತಾನೆ. ಎಲ್ಲಾ ನಿನ್ನಂಗೇ.'

'ಬಸ್‌ನಾಗ ಯಾರನಾದ್ರೂ ಪ್ರೇಮ-ಗೀಮ ಮಾಡವ್ನಾ?'

'ಮಾಡ್ದೇ ಇರ್ತಾನಾ? ಅವ್ನು ಎಲ್ಲಾ ನಿನ್ನಂಗೇ' ಎಂದು ಈರಭದ್ರು ನಕ್ಕ.

'ಅವಳ್ಯಾರೋ ಲೈಲಾ ಮೇಡಂ ಅಂತೆ?'

'ನಿನ್ ಮಗನ್ಗೆ ಅವಳ್ನ ಕಂಡ್ರೆ ಬೋ ಪ್ರೀತಿ. ಅವಳು ಸಿಕ್ರೆ ಸಾಕು, ಟಾಪ್‌ಗೇರ್ ಆಕ್ಕೊಂಡು ಮಾತು ಶುರು ಮಾಡ್ಕೊಂತಾನೆ. ಅವಳು ಬಂದ್ರೆ ಕೆಲ್ಸ ಎಲ್ಲಾ ತಬ್ಬಿಬ್ಬು ಮಾಡ್ಕೊಂತಾನೆ. ಪಂಚ್ ಮಾಡ್ದೆ ಟಿಕೆಟ್ ಕೊಡೋದು, ರಾಂಗ್ ಎಂಟ್ರಿ ಆಕೋದು, ಜನಕ್ಕೆ ಚಿಲ್ರೆ ಜಾಸ್ತಿ ಕೊಡೋದು... ಬೇಡ ಆ ಶಿವಲೀಲೆ. ಎಲ್ಲಾ ನಿನ್ನಂಗೇ.'

ಸೀನಿಯರ್‌ಗೆ ಸಾಕಷ್ಟು ವಿಷಯ ತಿಳಿದಂತಾಯ್ತು. ಮಗನ ಬಸ್ಸು ನಿಲ್ಲುವ ಪ್ಲಾಟ್‌ಫಾರಂಗೆ ಬಂದ. ಮರೆಯಲ್ಲಿ ನಿಂತ. ಅಲ್ಲೊಂದು ಬಸ್ಸು ನಿಂತಿದೆ. ಮಗ ಟಿಕೆಟ್ ಕೊಡುತ್ತಿದ್ದಾನೆ. ಲೈಲಾ ಮೇಡಂ ಕಿಟಕಿ ಪಕ್ಕ ಕುಳಿತಿದ್ದಾಳೆ. ಅವಳ ಜೊತೆ ಕುಲುಕುಲು ನಗು. ಕಣ್ಣಿಂದ ನೋಡಿದ್ಮೇಲೆ ನಂಬಲೇಬೇಕು. ಭಾರವಾದ ಮನಸ್ಸಿನಿಂದ ಮನೆಗೆ ಬಂದ.

ಮರುದಿನ ಬೆಳಗ್ಗೆ ಟೆಲಿಗ್ರಾಂ ಒಂದು ಮನೆಗೆ ಬಂತು. ಮನೆಯಲ್ಲಿದ್ದ ನಿಂಗಿ, ಕರಿಯಪ್ಪ ಮತ್ತು ಅವನ ಅಪ್ಪ ಎಲ್ಲರಿಗೂ ಗಾಬರಿ.

'ಗೋಪಾಲಯ್ಯನಿಗೆ ಮೈ ಚೆನ್ನಾಗಿಲ್ಲ. ನಿಂಗೀನ, ಕರಿಯಪ್ಪನ್ನ ಮೈಸೂರಿಗೆ ಕಳಿಸಿ' ಎಂದಿತ್ತು ಅದರಲ್ಲಿ.

ಗೋಪಾಲಯ್ಯ ಹತ್ತಿರದ ಬಂಧು. ಅವನಿಗೆ ಮೈ ಕೆಡುವುದೇ ಅಪರೂಪ. ಹೀಗಿರುವಾಗ ಹೋಗದಿದ್ದರೆ ಏನು ಚೆನ್ನ?

'ಈಗೇನು ಮಾಡ್ಲಿ ಅಪ್ಪ?' ಎಂದ ಕರಿಯಪ್ಪ.

'ಅದರಾಗ ಕೇಳೋದೇನೈತೆ? ನೀನು, ನಿಂಗಿ ಮೈಸೂರಿಗೆ ಇವತ್ತೇ ಓಗಿ. ಗೋಪಾಲಯ್ಯನ ಮಾತಾಡಿಸಿಕೊಂಡು ಬನ್ನಿ.'

'ನಾವಿಬ್ರೇನಾ?' ನಿಂಗಿ ಅಳುಕಿದಳು.

'ಔದಮ್ಮ. ಯಾಕೆ ಭಯ?'

'ನೀನೇ ಹೋಗಿದ್ರೆ ಚೆನ್ನಾಗಿತ್ತಪ್ಪ' ಎಂದ ಕರಿಯಪ್ಪ.

'ಅಲ್ಲೋ, ಸಾಯೋಕೆ ಮುಂಚೆ ನಿಮ್ಮಿಬ್ಬರ್ನೂ ನೋಡಬೇಕು ಅಂತ ಗೋಪಾಲಿ ಇರೋವಾಗ ನೀವು ತಾನೇ ಓಗಬೇಕು?'

ಕರಿಯಪ್ಪ ಮಾತಾಡಲಿಲ್ಲ. ಸೂಟ್‌ಕೇಸಿಗೆ ಬಟ್ಟೆ ತುಂಬಿದ. ನಿಂಗಿ ತನ್ನ ಸೀರೆ, ಲಂಗ, ಬಾಡಿಗಳನ್ನೂ ಅದೇ ಪೆಟ್ಟಿಗೆಗೆ ತುರುಕಿದಳು.

'ಇದರಲ್ಲಿ ಯಾಕೆ ಇಡ್ತಾ ಇದ್ದೀಯ?'

'ಬೇಕಿದ್ರೆ ನಾನೇ ಒತ್ಕೊಂಡ್ ಬರ್ತೀನಿ. ನಿನಗ್ಯಾಕೆ ಚಿಂತೆ?' ಎಂದಳು ನಿಂಗಿ.

ನಿಂಗಿ ಮತ್ತು ಕರಿಯಪ್ಪ ಮೈಸೂರಿನ ಬಸ್ ಏರಲು ಬಂದರು. ಶನಿವಾರ ಎಂದರೆ ಹೇಳಲಾಗದಷ್ಟು ರಶ್ಶು. ಆಗಸ್ಟ್ 15ಕ್ಕೆ ರೈಲು ಓಡಿಸುತ್ತೇವೆ ಎಂದು 'ರೈಲು' ಬಿಟ್ಟಿದ್ದ ಜನ ಇನ್ನೂ ಪ್ರಾರಂಭಿಸಿರಲಿಲ್ಲ. ಬಸ್ಸಿಗೆ ಭಯಂಕರ ನೂಕುನುಗ್ಗಲು.

ಮೈಸೂರು ಬಸ್ಸಿನಲ್ಲಿ ನಿಂಗಿಯ ಪಕ್ಕ ಕರಿಯಪ್ಪ ಕುಳಿತ. ಕರಿಯಪ್ಪನ ಸ್ಪರ್ಶದಿಂದ ನಿಂಗಿ ಪುಲಕಗೊಂಡಳು. ಗೋಪಾಲಯ್ಯನಿಗೆ ಮೈ ಕೆಟ್ಟಿದ್ದೂ ಸಾರ್ಥಕವಾಯಿತು ಎನ್ನಿಸಿತು.

ಬಸ್ಸಿನ ಕುಲುಕಾಟ, ಆಗಾಗ ಹಾಕುತ್ತಿದ್ದ ಏರ್‌ಬ್ರೇಕ್, ದಿಢೀರನೆ ಏರಿಸುತ್ತಿದ್ದ ಸ್ಪೀಡಿನಿಂದಾಗಿ ನಿಂಗಿ ಮತ್ತು ಕರಿಯಪ್ಪನ ನಡುವೆ ಕರೆಂಟ್ ಹರಿದಂತಾಗುತ್ತಿತ್ತು. ಕರಿಯಪ್ಪ ನಿಂಗಿಯನ್ನು ಓರೆ ಕಣ್ಣಲ್ಲಿ ಬಹಳ ಸಲ ನೋಡಿದ. ನಿಂಗಿ ಲಕ್ಷಣವಾಗಿದ್ದಾಳೆ. ಸುಂದರ ಮೂಗು. ಪುಟ್ಟ ಬಾಯಿ. ಲೈಲಾ ಮೇಡಂ ಕಣ್ಮುಂದೆ ಬಂದಳು. ಅವಳನ್ನು ನಿಂಗಿಯೊಡನೆ ತೂಗಿ

ನೋಡಿದ. ಅವಳಿಗೆ ಇರುವುದೆಲ್ಲಾ ಇವಳಿಗೂ ಇದೆ. ತನಗೇಕೆ ಈ ವಿಷಯ ಮೊದಲೇ ತಿಳಿಯಲಿಲ್ಲ ಎನ್ನಿಸಿತು.

ಮೈಸೂರಲ್ಲಿ ಬಂದಿಳಿದಾಗ ಟಾಂಗಾ ಗಾಡಿಗಳನ್ನ ನೋಡಿದ ನಿಂಗಿ ಅದರಲ್ಲಿ ಹೋಗಲು ಆಸೆಪಟ್ಟಳು.

'ಕುದ್ರೆ ಗಾಡಿನಾಗ ಓಗೋಣ?'

'ರಿಕ್ಷಾ ಇದೆ ನಿಂಗಿ.'

'ಬ್ಯಾಡಾ. ನಂಗೆ ಕುದುರೆ ಅಂದರೆ ಪ್ರಾಣ.'

ಟಾಂಗಾದಲ್ಲಿ ಕರಿಯಪ್ಪನಿಗೆ ಮೈ ಒತ್ತಿ ಕುಳಿತಳು. ಅದರ ಓಟ ಬಹಳ ಆಪ್ಯಾಯಮಾನ. ಥೇಟ್ ಹಳೆಯ ಸರ್ಕಾರಿ ಬಸ್ಸಿನಂತೆ ಅಲುಗಾಡುತ್ತಿದೆ. ಪಕ್ಕದಲ್ಲಿ ಕೂತವರಿಗೆ ಮೈ ಒತ್ತುತ್ತಾ ಪ್ರಯಾಣ ಮಾಡಬೇಕಾದ ಪರಿಸ್ಥಿತಿ. ಕರಿಯಪ್ಪ ಬೆಂಗಳೂರನ್ನು ಮರೆತ.

ಗೋಪಾಲಯ್ಯನ ಮನೆ ಮುಂದೆ ಗಾಡಿ ಬಂದು ನಿಂತಾಗ ಸ್ವತಃ ಗೋಪಾಲಯ್ಯನೇ ಬಾಗಿಲಿಗೆ ಬಂದ.

'ಓಹೋ! ಬಾಮ್ಮ ನಾಗವೇಣಿ ಬಾರೋ ಮರಿ. ನಿಮ್ಮಪ್ಪ ಚೆನ್ನಾಗಿದ್ದಾನಾ?' ಎಂದು ಕೇಳಿದ.

'ಹೆಂಗಿದೆ ನಿಮ್ಮ ಆರೋಗ್ಯ?' ಕರಿಯಪ್ಪನ ಪ್ರಶ್ನೆ.

'ನನಗೇನಾಗಿದೆ? ಆರಾಮವಾಗಿದ್ದೀನಲ್ಲ?'

'ಮೈ ಚೆನ್ನಾಗಿಲ್ಲ ಅಂತ ಟೆಲಿಗ್ರಾಂ ಕಳಿಸಿದ್ರಿ?'

'ಇಲ್ಲವಲ್ಲ? ಅದು ಯಾರ ತಂತೀನೋ ಏನೋ. ಹೋಗ್ಲಿ, ನೀವು ಬಂದಿದ್ದು ಸಂತೋಷ ಆಯ್ತು' ಎಂದ ಗೋಪಾಲಯ್ಯ. ಗೋಪಾಲಯ್ಯನ ಮಡದಿ ಗಿರಿಜಮ್ಮ ಬಾಗಿಲಲ್ಲಿ ಬಂದು ನಿಂತು ನಕ್ಕಳು.

'ಬನ್ನಿ ಒಳಗೆ. ಅಂತೂ ಒಳ್ಳೇ ಟೈಂಗೇ ಬಂದ್ರಿ.'

'ಅದ್ಯಾಕತ್ತೆ?' ಎಂದ ಕರಿಯಪ್ಪ. ಹೆಂಗಸರನ್ನು ಅತ್ತೆ ಎನ್ನುವ ಅಭ್ಯಾಸ. ಗಂಡಸಾದರೆ ಮಾವ. ಗೋಪಾಲಯ್ಯ ಅದು ಎಲ್ಲಿ ಯಾವ ರೀತಿ ಸಂಬಂಧವೋ ತಿಳಿಯದು. ಅಂತೂ ಬಂಧು. ಒಳ್ಳೆಯ ಬಂಧು.

'ಕನ್ನಂಬಾಡಿ ತುಂಬ್ಕೊಂಡಿದೆ. ಈಗ ನೋಡೋಕೆ ಚೆನ್ನ... ಏನೇ ನಿಂಗಿ? ನೀನೂ ತುಂಬ್ಕೊಂಡಿದ್ದೀಯ?' ಎಂದಳು ಅತ್ತೆ.

'ಮಾವನಿಗೆ ಮೈ ಚೆನ್ನಾಗಿಲ್ಲ ಅಂತ ಬಂದ್ವಿ' ಎಂದು ರಾಗ ಎಳೆದ ಕರಿಯಪ್ಪ.



'ಅವರ್ಗಲ್ಲ, ನನಗೆ. ಸೊಂಟ ಎಲ್ಲ ನೋವು. ಕೂತ್ರೆ ಕೂತೇ ಇರೋಣ ಅನ್ಸುತ್ತೆ. ಮಲಗಿದ್ರೆ ಮಲಗೇ ಇರೋಣ ಅನ್ಸುತ್ತೆ.'

'ನನಗೂ ಹಂಗೇ ಆಗುತ್ತೆ' ಎಂದ ಕರಿಯಪ್ಪ.

ಕಾಫಿ-ತಿಂಡಿ ಮುಗಿಯಿತು. ಮೈಸೂರಿಗೆ ತಾವು ಯಾಕೆ ಬಂದಿದ್ದು ಎಂಬುದೇ ಕರಿಯಪ್ಪನಿಗೆ ತಿಳಿಯಲಿಲ್ಲ. ಎಲ್ಲರೂ ಗಟ್ಟಿ ಯಾಗೇ ಇದ್ದಾರೆ. 'ತಾರು' ಬಂದು ತಕರಾರು ಎಬ್ಬಿಸಿತಲ್ಲ ಎಂದು ಕರಿಯಪ್ಪ ಆಶ್ಚರ್ಯಪಟ್ಟ.

ಮರುದಿನ ಮಧ್ಯಾಹ್ನ ಕನ್ನಂಬಾಡಿ ನೋಡಿ

## ಡಿಮ್ಮು - ಡಿಪ್ಪು

**ಉಚ್ಚಂಗಿ ಎಂ. ವಾಸುಕಿ, ಬೆಂಗಳೂರು – 21**

? *ಸರಕಾರಿ ಬಸ್ಸುಗಳಲ್ಲಿ ನಿರ್ವಾಹಕರ ಪೀಠಗಳು ಕಿಟಕಿಯ ಪಕ್ಕದಲ್ಲಿ ಇರಲು ಕಾರಣ ?*

* ಟಿಕೆಟ್ ಪಡೆಯದೆ ಇಳಿಯುವವರನ್ನು ಗಮನಿಸಲು.

**ಕೆ. ಶಿವರಾಮ ಹೆಮ್ಮಣ್ಣ, ಹೊಸಂಗಡಿ**

? *ನನ್ನ ಮಿತ್ರನೊಬ್ಬ ಕೆ.ಎಸ್.ಆರ್.ಟಿ.ಸಿ. ಕೆಂಪು ಬಸ್ಸನ್ನು ಕೆಂಪು ಸೀರೆಯ ಅಜ್ಜಿಗೆ ಹೋಲಿಸುತ್ತಾನೆ. ಸರಿಯೆ ?*

* ಈ ಮಾತನ್ನು ಡ್ರೈವರ್ ಒಪ್ಪುವುದಿಲ್ಲ.

**ಜಿ. ಕೆ. ಹಾಲಪ್ಪ, ಕುಕ್ಕುಜೆ**

? *ಆಟೋ ಡ್ರೈವರ್‌ಗಳೂ ಹೆಂಗಸರು ಇರುವಾಗ ಸರಕಾರಿ ಬಸ್ ಡ್ರೈವರ್ ಕೆಲಸಕ್ಕೆ ಅವರನ್ನೇಕೆ ನೇಮಿಸಬಾರದು ?*

* ನೂರು ಜನ ತುಂಬಿ ಲೋಡ್ ಆದ ಗಾಡಿಗೆ ಗೇರು ಹಾಕುವುದು ಕಷ್ಟ. ಅಲ್ಲದೆ ನೀರು ಸೇದುವ ಹೆಂಗಸರಿಗೆ ಬೀಡಿ ಸೇದಲು ಬರುವುದಿಲ್ಲ.

**ಅಶೋಕ್ ಸೂರಗೊಂಡ, ರಾಣೇಬೆನ್ನೂರು**

? *ಬಸ್‌ನ ಒಳಗಡೆ ಧೂಮಪಾನ ನಿಷೇಧಿಸಿದೆ ಎಂದು ಯಾತಕ್ಕಾಗಿ ಬರೆದಿರುತ್ತಾರೆ ?*

* ಬೋಳಾಗಿ ಹಾಗೇ ಬಿಡುವ ಬದಲು ಕೆಲವು ಅಕ್ಷರಗಳನ್ನು ಬರೆದಿರುತ್ತಾರೆ.

**ಯು. ಎಂ. ಸತೀಶ್, ಬೆಂಗಳೂರು**

? *ಹೆಚ್ಚಾಗಿ ಸಿಟಿ ಬಸ್ಸುಗಳೇ ಅಪಘಾತಕ್ಕೆ ಒಳಗಾಗಲು ಕಾರಣವೇನು ?*

* ಕುರಿಮಂದೆಯಂತೆ ರಸ್ತೆ ತುಂಬಾ ವಾಹನಗಳು ಇರುವುದರಿಂದ.

**ಮಹಮ್ಮದಾಲಿ, ಮುಕ್ಕ**

? *ಸಾರಿಗೆ ಸಂಸ್ಥೆ ಸೋರುವುದೇಕೆ ?*

* ಈ ಪ್ರಶ್ನೆಗೆ ನಾಲ್ಕು ದಶಕಗಳಿಂದ ಉತ್ತರ ಹುಡುಕುತ್ತಲೇ ಇದ್ದೇವೆ.

**ಎ. ಜಿ. ಮಂಜುನಾಥ, ಶೃಂಗೇರಿ**

? *ಪ್ಯಾಸೆಂಜರ್ ಹತ್ತುವಾಗ ಷೇಕ್ ಆಗದ ಬಸ್ಸು ಡ್ರೈವರ್ ಹತ್ತುವಾಗ ಷೇಕ್ ಆಗುವುದೇಕೆ ?*

* ತನ್ನನ್ನು ನಿಯಂತ್ರಿಸುವ ಯಜಮಾನ ಬಂದ ಎಂದು ಬಸ್ಸಿನ ಬಾಡಿ ನಡುಗುವುದರಿಂದ.

**ಡಿ. ಕಿರಣಕುಮಾರ, ಬೆಂಗಳೂರು**

? *ಬಸ್ಸಿಗೆ ಡಿಮ್ಮು – ಡಿಪ್ಪು ಇಲ್ಲವಾದರೆ ಏನಾಗುತ್ತದೆ ಗುರು ?*

* ರಾತ್ರಿಯ ವೇಳೆ ನಮಗೆ ಸೈಡು ಹೊಡೆಯುವ ಆಸೆಯಾದರೆ ಹೇಳಲಾಗುವುದಿಲ್ಲ.

**ಬಾಬು, ಬೆಟ್ಟದೂರು**

? *ಬೋರ್ಡು ಇದ್ದರೂ ಬದಲಿಸದ ಸಿಬ್ಬಂದಿಗೆ ಏನನ್ನಬೇಕು ?*

* ಅವರಿಗೆ ಯೂನಿಫಾರಂ ಬದಲಿಸಲು ಸಹ ವೇಳೆಯಿಲ್ಲವಲ್ಲ.

**ನೀ. ಶ್ರೀಶೈಲ, ನರೇಗಲ್ಲ**

? *ಕಂಡಕ್ಟರನನ್ನು ತಲೆ ತಿನ್ನುವ ಗಳಿಗೆ ಯಾವುದು ?*

* ಕನ್ನಂಬಾಡಿಯ ಬಸ್ ಹತ್ತಿ ಜೋಗದ ಗುಂಡಿಗೆ ಟಿಕೆಟ್ ಕೇಳಿದಾಗ.

ಬರಲು ಕರಿಯಪ್ಪ ಸಿದ್ಧನಾದ. ನಿಂಗಿ ಅತ್ತೆ ಕೊಟ್ಟ ರೇಷ್ಮೆ ಸೀರೆ ಉಟ್ಟಳು.

'ನೀವೂ ಬನ್ನಿ ಮಾವ' ಎಂದ ಕರಿಯಪ್ಪ. ಅವರು ಬಂದೇಬಿಟ್ಟರೆ ಕಷ್ಟ ಎಂಬ ಭಯವೂ ಇತ್ತು. ಆದರೂ ಸೌಜನ್ಯಕ್ಕೆ ಕೇಳಬೇಕಾದ ಪ್ರಶ್ನೆಯದು.

'ಬೇಡ, ನೀವು ಇಬ್ರೇ ಹೋಗಿ ಬನ್ನಿ. ನಾನು ಎಲ್ಲಾ ನೋಡಿದ್ದಾಗಿದೆ.'

'ಬಂದಿದ್ರೆ ಚೆನ್ನಾಗಿತ್ತು' ಎಂದ ಕರಿಯಪ್ಪ.

'ಅದೇ ಬಾಡಿ, ಅದೇ ಕನ್ನಂಬಾಡಿ. ಎಷ್ಟು

---

**ಕೆ. ವೆಂಕಪ್ಪನಾಯಕ್, ಕೋಡಿಂಬಾಳ**

? ಬಸ್ಸಿನ ಕಂಡಕ್ಟರ್ ಮೇಲೋ, ಡ್ರೈವರ್ ಮೇಲೋ?

* ಡ್ರೈವರ್! ಅವನ ಪೀಠ ಬಹು ಎತ್ತರದಲ್ಲಿರುತ್ತದೆ.

**ಶಶಿಕಾಂತ ಎಚ್. ಉದಗಟ್ಟಿ, ಕೆರೂರ**

? 12 ವರ್ಷಗಳ ಬದಲಾಗಿ 18 ವರ್ಷದೊಳಗಿನವರಿಗೆಲ್ಲ ಅರ್ಧ ಚಾರ್ಜು ಎಂದು ಮಾಡಿದರೆ ಹೇಗೆ?

* ಅದು ವಾದಗ್ರಸ್ಥ ವಿಷಯವಾದಾಗ ಸೈಜು ನೋಡಿ ವಯಸ್ಸು ಹೇಳುವುದು ಕಷ್ಟವಾಗಬಹುದು.

**ಕೆ. ಎಸ್. ಮಡಿವಾಳರ, ಬಸವನ ಬಾಗೇವಾಡಿ**

? ಬಸ್ಸಿನಲ್ಲಿ ಟಿಕೆಟ್‌ಗಳಿಗೆ ಪಂಚ್ ಹೊಡೆದು ಕೊಡುವುದೇಕೆ?

* ಉಪಯೋಗಿಸಲಾಗಿದೆ ಎಂಬುದಕ್ಕೆ ದಾಖಲೆ.

**ಕೆ. ಸೌಭಾಗ್ಯ, ಕಲ್ಮಂಜೆ**

? ಬಾಗಿಲಿಲ್ಲದ ಬಸ್ಸಿಗೂ, ರಾಜಕಾರಣಿಗೂ ಇರುವ ವ್ಯತ್ಯಾಸವೇನು?

* ಅವರು ಇತರರ ಮೇಲೆ ಹತ್ತಬಲ್ಲರು, ಆದರೆ ಬೇರೆಯವರು ಅವರ ಮೇಲೆ ಹತ್ತಲಾಗದು.

**ಅಶೋಕ ದಾ. ಶೆಟ್ಟಿ, ಡೊಂಬಿವಿಲಿ**

? ಹೆಂಡತಿ ಬಂದರೆ ಕಂಡಕ್ಟರ್ ಟಿಕೆಟ್ ಕೊಡುತ್ತಾನೆಯೆ?

* ಯಾರ ಹೆಂಡತಿ ಎಂಬುದೂ ಮುಖ್ಯ.

**ಪ್ರಯಾಣಿಕ, ಚಳ್ಳಕೆರೆ**

? ತಮ್ಮ ಪ್ರಯಾಣ ಸುಖವಾಗಿರಲಿ ಎಂದು ಬಸ್‌ಸ್ಟ್ಯಾಂಡಿನಲ್ಲಿ ಬರೆದಿರುತ್ತಾರೇಕೆ ಶಿವ?

* ಬಸ್ಸು ಹತ್ತಿದ ಮೇಲಂತೂ ಸುಖವಿಲ್ಲ, ಬಸ್‌ಸ್ಟ್ಯಾಂಡಿನಲ್ಲಾದರೂ ಸುಖವಾಗಿರಲಿ ಎಂದು.

**ಕೃಷ್ಣಾನಂದ ರಾ. ನಾಯಕ್, ಲಕ್ಷ್ಮೇಶ್ವರ**

? ಕಂಡಕ್ಟರ್ ವಿಷಲ್ ಹೊಡೆದಾಗ ಥಟ್ಟನೆ ಬಸ್ಸು ನಿಲ್ಲುತ್ತದಲ್ಲ, ಹೇಗೆ?

* ಬಸ್ಸಿಗೆ ಆ ರೀತಿ ಟ್ರೈನಿಂಗ್ ಕೊಟ್ಟಿರುತ್ತಾರೆ.

**ಮಲ್ಲಿಕಾರ್ಜುನ, ಕೊಲ್ಲಾಪುರ**

? 'ತರ್ಲೆ ನನ್ಮಗ' ಸಿನಿಮಾ ನೋಡಲು ಬಸ್ಸಲ್ಲಿ ಹೊರಟ ಗರ್ಭಿಣಿಯೊಬ್ಬಳು ಬಸ್ಸಲ್ಲೇ ಗಂಡು ಮಗುವಿಗೆ ಜನ್ಮ ಕೊಟ್ಟಿದ್ದಾಳೆ. ಹೆಸರು ಏನು ಇಡೋಣ?

* ಗೇರ್ ನನ್ಮಗ!

**ಗುರುರಾಜ, ತೊದಲಬಾಗಿ**

? ಮಹಿಳೆಯರ ಸೀಟಿನಲ್ಲಿ ಹುಡುಗಿಯರು ಕೂರಲು ಕಾರಣವೇನು?

* ಎಳಗರುಂ ಎತ್ತಾಗದೆ?



ಸಲ ನೋಡೋದು ? ಈ ಸಲ ವಾನಿಯಂಬಾಡಿ ನೋಡೋಕೆ ಹೋಗ್ತೀನಿ' ಎಂದು ನಕ್ಕ ಗೋಪಾಲಯ್ಯ.

ಕೆ.ಆರ್.ಎಸ್.ಗೆ ಬಂದ ಕರಿಯಪ್ಪ. ಅವನ ಪಕ್ಕದಲ್ಲೇ ಇದ್ದಾಳೆ ನಿಂಗಿ. ಅವಳಿಗಂತೂ ಯಾವುದೋ ಭ್ರಮಾಲೋಕಕ್ಕೆ ಬಂದಂತಾಗಿದೆ. ಎಲ್ಲಿ ನೋಡಿದರೂ ರವರವ ಹರಿಯುವ ಕಾವೇರಿಯ ಮಂಜುಳ ನಿನಾದ. ಬಣ್ಣದ ದೀಪಗಳ ಮಾಲೆ. ಉಕ್ಕಿ ಉಗಿಯುತ್ತಿರುವ ಕಾರಂಜಿಗಳು. ನಗುತ್ತಾ ಓಡಾಡುವ ಪ್ರೇಮಿಗಳ ದಂಡು.

ನಿಂಗಿ ಚಕ್ಕನೆ ಕರಿಯಪ್ಪನ ಕೈ ಹಿಡಿದಳು. ಐದು ಬೆರಳುಗಳು ಹತ್ತಾದವು. ಕರಿಯಪ್ಪನಿಗೆ ಯಾವುದೋ ಅವ್ಯಕ್ತ ಆನಂದ. ನಿಂಗಿಯ ಕೈ ಇಷ್ಟು ನುಣುಪಾಗಿದೆ ಎಂದು ತಿಳಿದಿರಲಿಲ್ಲ.

ಸಂಗೀತ ಕಾರಂಜಿಯನ್ನು ನೋಡಿದ ನಿಂಗಿ ಮೂಕವಿಸ್ಮಿತಳಾದಳು. ಹಾಡಿನ ಲಯಕ್ಕೆ ನೀರಿನ ಬುಗ್ಗೆಗಳ ನರ್ತನ. ಒಂಟಿಯಾಗಿ, ಜಂಟಿಯಾಗಿ, ಪ್ಲೆಂಟಿಯಾಗಿ ಬುಗ್ಗೆಗಳು ಎದ್ದು ಕುಣಿಯುತ್ತವೆ. ಅದಕ್ಕೆ ಬಣ್ಣದ ಮೆರುಗು ನೀಡುತ್ತಿವೆ ದೀಪಗಳು. ಗಳಿಗೆಗೆ ಒಂದು ಬಣ್ಣ. ನೋಡಲು ಸಾಲದು ಎರಡು ಕಣ್ಣು.

ಕನ್ನಂಬಾಡಿಯಿಂದ ವಾಪಸ್ ಹೊರಟಾಗ ಕತ್ತಲಾಗಿತ್ತು. ಕರಿಯಪ್ಪ ಖುಷಿಯಾಗಿದ್ದ. ನಿಂಗಿ ತನ್ನನ್ನು ತಾನು ಮರೆತಿದ್ದಳು.

'ಹೋಗೋಣವಾ ?' ಎಂದ ಕರಿಯಪ್ಪ.

'ಹುಂ... ಕುದ್ರೆಗಾಡಿ ಇದೆಯಾ ?'

'ನಿನ್ನ ತಲೆ. ಇಲ್ಲಿಂದ ಬಸ್ಸಲ್ಲೇ ಹೋಗಬೇಕು. ಬಾ, ಬೇಗ' ಎಂದು ಕರಿಯಪ್ಪ ಅವಳ ಕೈ ಹಿಡಿದು ಎಳೆದು ಹೊರಟಿದ್ದ ಬಸ್ಸಿಗೆ ಶಿಳ್ಳೆ ಹೊಡೆದು 'ಹೋಲ್ಡಾನ್' ಎಂದ. ಬಸ್ ಹತ್ತಿದ ಮೇಲೆ ನಿಂಗಿ ಮುಖ ನೋಡಿ ನಕ್ಕು 'ರೈಟ್' ಎಂದು ಕೂಗಿದ. ●

ನನ್ನೂರು ನನ್ನ ಜನ

# ಮೈಸೂರು–
# ಗಂಧರ್ವರ ಸೀಮೆ

● ಡಾ। ಎಚ್. ಕೆ. ರಂಗನಾಥ್

'ಮೈಸೂರು' ಎಂಬ ಮಾತು ಕಿವಿಗೆ ಬಿದ್ದಿತೆಂದರೆ ಸಾಕು– ವೀಣಾ ವಿತಾನದ ಮಾಧುರ್ಯದೊಂದಿಗೆ ಮಲ್ಲಿಗೆಯ ಪರಿಮಳ ಇಂದಿಗೂ ಬೀಸಾಡುತ್ತದೆ; ಐವತ್ತು ವರುಷಗಳ ಹಿಂದೆ ಸವಿಯುತ್ತಿದ್ದ ಚಿಗುರು ವೀಳೆಯದೆಲೆಯ ತಂಬುಲ ನಾಲಿಗೆಯ ಮೇಲೆ ಹೊರಳಾಡುತ್ತದೆ; ಮೊಗರು ಬದನೆಯ ಪಲ್ಲೆಯ ಬಾಯಲ್ಲಿಯ ರಸವನ್ನು ಉಗ್ಗಿಸುತ್ತದೆ. ಪ್ರತಿ ಶುಕ್ರವಾರ ಸಂಜೆಯೋ-ಮುಂಜಾನೆಯೋ ನಾವು ನಾಲ್ವರು ಜೀವದ ಗೆಳೆಯರು ದೇವಿಯ ಬೆಟ್ಟವನ್ನೇರಿ ಹೋಗುತ್ತಿದ್ದುದು ನೆನಪಾಗಿ ನಿಂತಲ್ಲಿಯೇ ಕಾಲುಗಳು ಕುಣಿಯುತ್ತವೆ. ಸಂಜೆಗೆ ಏರಿ ಹೋಗಿದ್ದರೆ, ಬೆಟ್ಟದ ಅಡಿಯಲ್ಲಿ ಮೈಸೂರಿನ ನಕ್ಷತ್ರಲೋಕ; ಮುಂಜಾನೆಯಾಗಿದ್ದರೆ ಇಳಿದು ಬರುತ್ತ ದಾರಿ ಬದಲಿಸಿ, ಹಳೆಯ ಅಗ್ರಹಾರದ ರಾಜ್ ಹೊಟೇಲಿನಲ್ಲಿನ ಘಮಘಮಿಸುವ ತುಪ್ಪದ ಕೇಸರಿಭಾತು-ಗರಿಗರಿಯಾದ ಮಸಾಲೆದೋಸೆ, ಬಿಸಿಬಿಸಿ ಅಪ್ಪಟ ಕಾಫಿ ಇಳಿಸುತ್ತಿದ್ದ ನೆನಪು ಇಂದಿಗೂ ಕಾಡುತ್ತದೆ. ವಾರಕ್ಕೆ ಎರಡು ಮೂರು ಸಂಜೆ ಕುಕ್ಕರಹಳ್ಳಿ ಕೆರೆಗೆ! ಎಂಥ ದಿವ್ಯ-ಅಂದು-ಆ ಕೆರೆ! ರಾಮೋತ್ಸವದ ಸಂದರ್ಭದಲ್ಲಿ ಹತ್ತುದಿನ ಸಂಗೀತದ ಮಹೋತ್ಸವ– ಬಿಡಾರಂ ಕೃಷ್ಣಪ್ಪ



ವರ್ಣಪಾರದರ್ಶಿಕೆ: ಬಿ. ವಿಶ್ವನಾಥ್

ನವರ ಶ್ರೀರಾಮಮಂದಿರದಲ್ಲಿನ ಆ ರಸದೂಟ ವನ್ನೂ ತಪ್ಪಿಸಿಕೊಳ್ಳುವುದುಂಟೆ! ಅರಿಯಾಕುಡಿ, ಶೆಮ್ಮಂಗುಡಿ, ಚಂಬೈ, ಜಿ.ಎನ್.ಬಿ., ಎಂ.ಎಸ್., ಎಂ.ಎಲ್.ವಿ., ವಸಂತಕೋಕಿಲಂ ಮತ್ತೆ ನಮ್ಮವರೇ ಆಗಿ, ಒಟ್ಟು ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ನವರತ್ನ ಮುಡಿಸಿದ ವಾಸುದೇವಾಚಾರ್ಯ, ಚೌಡಯ್ಯ, ಗೋಟುವಾದ್ಯಂ ನಾರಾಯಣ ಅಯ್ಯಂಗಾರ್, ದೇವೇಂದ್ರಪ್ಪ, ತಿಟ್ಟೆ – ನಮ್ಮ ಸಂಭ್ರಮ ಹೇಳಿ ತೀರದು. ರಾಮೋತ್ಸವದ ಕಡೆಯರಾತ್ರಿ ರಾಮಮಂದಿರ ದಿಂದ ಹತ್ತಕ್ಕೆ ಹೊರಟು, ಸಿಟಿಮಾರ್ಕೆಟ್ ಸುತ್ತುಹಾಕಿ, ತಂಜಾವೂರಿನ 'ಜೊತೆಡೋಲು' – ನಾಗಸ್ವರದ ಮೇಳದೊಂದಿಗೆ ಶ್ರೀರಾಮ ರಥ ಮತ್ತೆ ನೆಲಸೇರಬೇಕಾದರೆ ಮುಂಜಾನೆ ಆರು! ಇನ್ನು ಅಂದಿನ ಆ ನವರಾತ್ರಿ! ಅರಮನೆ ಯಂತೂ ಸಂಜೆ ಏಳಕ್ಕೆ ಝಗಝಗಿಸಿ ಇಂದ್ರ ಲೋಕದ ಸೃಷ್ಟಿಯಾಗುತ್ತದೆ. ಅದಕ್ಕಿಂತ ಹೆಚ್ಚಾಗಿ ಮನೆಮನೆಯಲ್ಲಿನ ಸಡಗರದೊಂದಿಗೆ ಬೊಂಬೆಮೇಳವಾಗಿ ದೀಪೋತ್ಸವದಲ್ಲಿ ಊರಿಂದ ಬಂದ ಬಂಧುಗಳೊಂದಿಗೆ ಆಟ-ಬೇಟ-ಸುತ್ತಾಟ, ಕಿತ್ತಾಟ ಸಹ – ಊರಿಗೆ ಊರೇ ಸಂತೋಷ-ಸಂಭ್ರಮಗಳಲ್ಲಿ ಉಬ್ಬೇಳುತ್ತದೆ. ಉಳಿದ ಕಾಲ ದಲ್ಲಿ ಸಾತ್ವಿಕ ಸಂಸ್ಕೃತಿ ತುಂಬಿ ತುಳುಕುವ ಊರು ಅದು – ಮೈಸೂರು; ಆರು ದಶಕಗಳ ಹಿಂದಿನ ಮೈಸೂರು.

ನಾನು ಹುಟ್ಟಿದ್ದು ಮಲೆನಾಡಿನ ತೀರ್ಥಹಳ್ಳಿ ಯಲ್ಲಿ. ಬಾಲ್ಯ-ಹೊಳೇನರಸೀಪುರ. ಮೈಸೂರಿಗೆ ಬಂದದ್ದು ಐದು-ಆರನೆಯ ವಯಸ್ಸಿನಲ್ಲಿ. ಮುಂದಿನ ಎರಡು ದಶಕಗಳವರೆಗೆ ಅಲ್ಲಿ ವಾಸ್ತವ್ಯ, ಅಭ್ಯಾಸ, ಗೋಪಾಲಸ್ವಾಮಿಯವರು ಹುಟ್ಟು ಹಾಕಿದ ಆಕಾಶವಾಣಿಯ ನಿಕಟ ಸಂಪರ್ಕ-ಮತ್ತೆ ಮಹಾರಾಜಾ ಕಾಲೇಜಿನಲ್ಲಿ ಅಧ್ಯಾಪಕವೃತ್ತಿ. ಆ ಇಪ್ಪತ್ತು ವರುಷಗಳ ಅವಧಿಯ ಒಂದೊಂದು ದಿನವೂ ಮೈಸೂರಿ ನಲ್ಲಿ, ರುಚಿ ರುಚಿಯಾದ ಹೊಸ ಹೊಸ ಅನುಭವದ ಶ್ರೀಮಂತಿಕೆ ನನ್ನ ಪಾಲಿಗೆ ಕೂಡಿ ಬಂದಿತು. ಅಲ್ಲಿನ ನೆಲ, ನೀರು, ಕೆರೆ, ಕಲೆ, ಹೂ, ಹಸಿರು, ಹುಲ್ಲು, ವಾತ್ಸಲ್ಯ, ಸ್ನೇಹ ಸಂಸ್ಕೃತಿಗಳು

**ಮೈಸೂರಿನಲ್ಲಿ ಎರಡು ದಶಕಗಳ ಸ್ಮರಣೀಯ ನಂಟು ಪಡೆದುಕೊಂಡು, ಅಲ್ಲಿನ ಸೊಗಸು, ಸೂಕ್ಷ್ಮ-ವಿಶೇಷಗಳನ್ನು ಕಂಡು-ಅನುಭವಿಸಿರುವ ಡಾ। ಎಚ್. ಕೆ. ರಂಗನಾಥ್ ಅವರ ಆತ್ಮೀಯ ನೋಟ.**

ನನ್ನನ್ನು ಕೈಹಿಡಿದು ನಡೆಸಿದವು. ಶಾಲೆಗಳಲ್ಲಿನ ನಮ್ಮ ಉಪಾಧ್ಯಾಯರು 'ಶಿಕ್ಷಕ'ರಲ್ಲ. ಮುದ್ದಿಸಿ ತಿದ್ದಿದವರು, ತಿಳಿವನ್ನೂ ಕಲೆಯನ್ನೂ ಊಡಿಸಿ ಕಡೆದವರು. ನಿಸರ್ಗವಿತ್ತ ದೇಣಿಗೆಯನ್ನು ಕುದುರಿಸಿ ಅರ್ಥಕೊಟ್ಟು ಬೆಳೆಸಿದವರು. ಊರಿಗೇ ಬೆಲೆ ತಂದುಕೊಟ್ಟ ಅಂಥವರನ್ನು ಮರೆಯಲು ಸಾಧ್ಯವೆ?

ಕೃಷ್ಣಮೂರ್ತಿಪುರದಲ್ಲಿ ನಮ್ಮ ಮನೆಯ ಎದುರಿಗೇ ಟಿ. ಎಸ್. ವೆಂಕಣ್ಣಯ್ಯನವರ ಬಂಗಲೆ. ಅವರಲ್ಲಿಗೆ ಬಂದು ಹೋಗುವವರ, ಅಲ್ಲಿಯೇ ದಿನಗಟ್ಟಲೆ ಉಳಿದುಬಿಡುವವರ ಲೆಕ್ಕ ಇಲ್ಲ. ಆಗ ಬಾಲಕನಾಗಿದ್ದ ನಾನು ಅವರ ಮನೆಯಲ್ಲಿಯೇ ಬಿಂದೂ ರಾಯರ ಭಾರತ ವಾಚನವನ್ನು ಏಳೆಂಟು ದಿನ ಪ್ರತಿಸಂಜೆ ಕೇಳಿ ಮಾರುಹೋದದ್ದು. ಅಲ್ಲಿಯೇ ದೃಷ್ಟಿ ತಾಕು ವಂಥ ಸ್ಫುರದ್ರೂಪಿ ಯುವಕ ಕುವೆಂಪು ಅವರನ್ನು ಮೊದಲು ಕಂಡದ್ದು. ರಾಳ್ಳಪಲ್ಲಿ ಅನಂತಕೃಷ್ಣ ಶರ್ಮರೂ ವೆಂಕಣ್ಣಯ್ಯನವರೂ ಅಲ್ಲಿ ಆಡುತ್ತಿದ್ದ ಸುಸಂಗೀತದಂತಹ ತೆಲುಗನ್ನು ಕೇಳಿದ್ದು. ವೆಂಕಣ್ಣಯ್ಯನವರ ವಿದ್ವತ್ತಿನ ಪರಿಚಯ ಆಗ ಆಗಿರಲಿಲ್ಲ. 'ಬಲು ದೊಡ್ಡ ಪ್ರೊಫೆಸರು – ಬಲು ದೊಡ್ಡ ಮನುಷ್ಯರು' ಎಂಬುದು ಅವರ ಬಗೆಗೆ ಜನ ಆಡುತ್ತಿದ್ದ

ಮಾತು. ಅಂಥವರು, ಪ್ರತಿ ಮುಂಜಾನೆ, ಆರೇಳು ಗಂಟೆಯಹೊತ್ತಿಗೆ, ತಮ್ಮ ಕಾಂಪೋಂಡಿನ ಗಿಡಗಳಿಂದ ಬಿಡಿಸಿದ ಹಲವು ಬಗೆಯ ಹೂ ಗಳನ್ನು ಬೊಗಸೆಯಲ್ಲಿ ತುಂಬಿಕೊಂಡು 'ರಂಗನಾಥಾ' ಎಂದು ಮಂಜುಳವಾಗಿ ಕರೆದು, ತಾತನ ಪೂಜೆಗೆಂದು ನನಗೆ ಕೊಡುತ್ತಿದ್ದರು. ಅವರ ಮನೆಯಲ್ಲಿ ನನಗೆ ಸಲುಗೆ. ಅವರ ಪಕ್ಕದ ಮನೆಯಲ್ಲಿಯೇ ಮೊದಲು ಡಾ। ಎ. ಎನ್. ನರಸಿಂಹಯ್ಯನವರು ಆ ನಂತರ ತೀ. ನಂ. ಶ್ರೀ. ಬಿಡಾರ ಮಾಡಿದ್ದು. ಅದರ ಪಕ್ಕದಲ್ಲಿ 'ವಿದ್ಯಾನಿಧಿ ಬುಕ್ ಡಿಪೋ'ದ ವೆಂಕಟರಾಮಯ್ಯನವರು. ನಮ್ಮ ಬಲಪಕ್ಕದಲ್ಲಿ, ಸಬ್‌ಜಡ್ಜ್ ಆಗಿ ನಿವೃತ್ತ ರಾಗಿದ್ದ ಟಿ. ಕೃಷ್ಣಯ್ಯಂಗಾರ್ಯರ ಬಂಗಲೆ. ಅದರ ಪಕ್ಕಕ್ಕೆ ತತ್ವಶಾಸ್ತ್ರದ ಪ್ರಾಧ್ಯಾಪಕ ವೆಂಕಟರಾಯರ ಮನೆ. ಎದುರಿಗೆ ಮೈಸೂರು ವಿಶ್ವವಿದ್ಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್ ಕಪ್ಪಣ್ಣನವರ ಮಾಟ ವಾದ ಮನೆ. ನಮ್ಮ ಹಿಂದಿನ ರಸ್ತೆಯಲ್ಲಿಯೇ ರಾಳ್ಳಪಲ್ಲಿಯವರು. ಮತ್ತೆ ಎರಡು ರಸ್ತೆ ದಾಟಿ ದರೆ ತಿಟ್ಟೆ ಕೃಷ್ಣಯ್ಯಂಗಾರ್ಯರು. ಎಲ್ಲರ ಮನೆ ಯಲ್ಲಿಯೂ ನನ್ನ ಓರಿಗೆಯ ಬಾಲಕ ಬಾಲಕಿ ಯರು. ಏನೊಂದು ಹಬ್ಬ ಹರಿದಿನ, ಮದುವೆ-ಮುಂಜಿ, ಚೌಲ, ಕಡೆಗೆ ತಿಥಿ ಎಂದರೂ ನಮ್ಮ ರಸ್ತೆಯ ಜನವೆಲ್ಲ ಸೇರಲೇಬೇಕು. ದಿನದಿನವೂ ಸುಗ್ಗಿ. ನಮ್ಮ ರಸ್ತೆ ನಮ್ಮಲ್ಲಿ ಬಿಗಿದ ಬಾಂಧವ್ಯದ ಬಗೆಗೆ ತೀರದಂಥ ಹೆಮ್ಮೆ ನಮಗೆ– ಆಗ ಗೊತ್ತಿರಲಿಲ್ಲ – ಮೈಸೂರಿನ ರಸ್ತೆ ರಸ್ತೆಗೂ ನಿಜವಾಗಿ ಅಂಥ ಹೆಮ್ಮೆ. ಮೈಸೂರೇ ಹೆಮ್ಮೆ ಪಡುವಂಥ ಊರು. ಏನೆಂಥ ವ್ಯತ್ಯಾಸ ಗಳನ್ನೂ ತುಳಿದಿದ್ದ ಅಲ್ಲಿನ ಜನ ಎಂದರೆ ಒಂದು– ಅವರ ಮನ ಎಂದರೆ ಒಂದು.

ಅಂಥ ಸುಸಂಸ್ಕೃತ ಪರಿಸರದಲ್ಲಿ ನಾವು ಮೂವರು ಎಚ್.ಕೆ., ಎಂ.ಕೆ. (ಸುಬ್ಬರಾವ್), ಟಿ.ಕೆ. (ಶ್ರೀನಿವಾಸ್) ಜೀವದ ಗೆಳೆಯರಾಗಿ ಬೆಳೆದೆವು. ಅರಮನೆ, ಗುರುಮನೆ ಇರಲಿ, ಪರಕಾಲ ಮಠ, ಜುಮ್ಮಾ ಮಸೀದಿ, ಸೈಂಟ್ ಫಿಲೋಮಿನಾ ಚರ್ಚು, ತ್ರಿನಯನ ದೇವಸ್ಥಾನದ ಎಲ್ಲ ಉತ್ಸವಗಳಲ್ಲಿಯೂ ಭಾಗವಹಿಸಿದ ಭಾಗ್ಯ ನಮ್ಮದು. ಸುಬ್ಬರಾಯನ ಕೆರೆಯ ರಾಜಕೀಯ ಭಾಷಣಗಳನ್ನು (ಕೆ. ಸಿ. ರೆಡ್ಡಿ, ಕೆ. ಟಿ. ಭಾಷ್ಯಂ, ಎಂ. ಎನ್. ಜೋಯಿಸ್, ಎಚ್. ಬಿ. ಗುಂಡಪ್ಪ ಗೌಡ) ಒಳಗೊಂಡು, ಏನೆಲ್ಲ ಸಂಗೀತ ಕಛೇರಿ, ಎಂತೆಂತಹ ನಾಟಕಗಳನ್ನು ಬಿಡದೆ ನೋಡಿದ, ಕೇಳಿದ ಸುಮ್ಮಾನ– ನಮಗೆ. ಅಂಥದೊಂದು ಸಂದರ್ಭದಲ್ಲಿ ಬಂಗಾಳದ ಪಂಕಜಕುಮಾರ್

ಮೈಸೂರು ಲ್ಯಾನ್ಸ್‌ಡೌನ್ ಕಟ್ಟಡ



ಫೋಟೋ: ಪ್ರಗತಿ ಗೋಪಾಲಕೃಷ್ಣ



ಚಾಮುಂಡೇಶ್ವರಿ ದೇವಾಲಯ

ಮಲ್ಲಿಕ್, ಕನ್ನಡದ ''ನಾನ್ಯಾಕೆ ಪರದೇಶಿ– ನಾನ್ಯಾಕೆ ಬಡವನಯ್ಯಾ'' ಹಾಡಿದ್ದು ಕೇಳಿ ಮೈಯಲ್ಲಿ ಪುಳಕದ ಹೊಳೆ. ಮತ್ತೊಂದು ಸಂದರ್ಭದಲ್ಲಿ ಟೈಗರ್ ವರದಾಚಾರ್ಯರು, ಆವರೆಗೆ ಒದಗದಿದ್ದ ತಮ್ಮ ಶಾರೀರವನ್ನು ಪಳಗಿಸುವ ಸಲುವಾಗಿ ಕುದಿ ನೀರನ್ನು ನೇರವಾಗಿ ಗಂಟಲಿಗೆ ಸುರಿದುಕೊಂಡದ್ದನ್ನು ಕಂಡು ಬೆಚ್ಚಿ ಬಿದ್ದದ್ದು. ಅರಮನೆಯ ಕಲಾಶಾಲೆಯಲ್ಲಿ, ಶಿಲ್ಪ ಸಿದ್ಧಾಂತಿ ಸಿದ್ಧಲಿಂಗಸ್ವಾಮಿಯವರು ದೇಗುಲದಲ್ಲಿ ಚಿತ್ರ ಹಾಗೂ ಶಿಲ್ಪಗಳನ್ನು ನೋಡುತ್ತ ಮೈಮರೆತು ನಿಂತದ್ದು. ಇದು ಮಾತ್ರ ನಿಜ, ಮೈಸೂರಿನ ರಸಿಕ ವಿಮರ್ಶಕರನ್ನು ಮೆಚ್ಚಿಸಿದನೆಂದರೆ ಅಂಥ ನಟ, ಗಾಯಕ, ವಾದಕ, ಶಿಲ್ಪಿ ಹಾಗೂ ಕಲಾವಿದನಿಗೆ ಎಲ್ಲಿಯೂ ಸೋಲಿಲ್ಲ.

ನಮ್ಮ ಮೊದಲ ಅಭ್ಯಾಸ ಕೃಷ್ಣಮೂರ್ತಿಪುರಂ ಪ್ರೈಮರಿ ಶಾಲೆಯಲ್ಲಿ. ಎಷ್ಟು ಸ್ವಚ್ಛ! ಎಂಥ ಶಿಸ್ತು! ಮುಖ್ಯೋಪಾಧ್ಯಾಯರು ಕೃಷ್ಣಮಾಚಾರ್ಯರು. ಅವರಷ್ಟು ಮುದ್ದಾಗಿ ಅಕ್ಷರ ಬರೆದವರನ್ನು ಕಾಣೆ. ಮೂರನೆಯ ಕ್ಲಾಸಿಗೆ ಬಂದಾಗಲೇ ಅವರ ನೇರ ಸಂಪರ್ಕ. ಈಗ ನೆನೆದರೆ, ಅವರ ವಿದ್ವತ್ತು ಅಗಾಧವಾದದ್ದು; ಅಂಥ ವಿದ್ವತ್ತಿಗೆ ಒಪ್ಪುವಂಥ ವಿನಯ. ಅವರನ್ನು ಕಂಡರೆ ಭಯ ಸುಳಿಯದು– ಗೌರವ ಉಕ್ಕಬೇಕು. ಆಗಿನ ಕಾಲಕ್ಕೆ ವಿಪರೀತ ಬೆಲೆ ಎನಿಸಿದಂತೆ ತಮ್ಮ ಸಂಬಳದಲ್ಲಿ ಒಂಭತ್ತು ರೂಪಾಯಿಕೊಟ್ಟು ಮಾನವ ದೇಹದ ಒಳ ಅಂಗಾಂಗಗಳ ಉಬ್ಬು ಚಿತ್ರದ ಇಂಗ್ಲಿಷ್ ಪುಸ್ತಕವನ್ನು ಕೊಂಡುತಂದು ತೋರಿ ವಿವರಿಸಿ ನಮಗೆ ಪಾಠಮಾಡಿದರು. ಅನೇಕ ವಾದ್ಯಗಳನ್ನು ತಂದು, ನುಡಿಸಿ, ವಿಶ್ಲೇಷಿಸಿ ವಿದ್ಯಾರ್ಥಿಗಳಲ್ಲಿ ಗಾಯನ, ವಾದನಗಳ ಬಗೆಗೆ ಆಸ್ಥೆ ಮೊಳೆಯಿಸಿದರು. ಪ್ರಪಂಚದ ಹೆಸರಾಂತ ಕಲಾವಿದರ ತೈಲಚಿತ್ರಗಳ ಗ್ರಂಥ ತಂದು ಆ ಮಹಾಸಂಪತ್ತಿನ ಪರಿಚಯ ಮಾಡಿಸಿದರು. ಗಾಮಾ-ಅಲ್ಲಾಭಕ್ಸ್, ಕನ್ನೇಗೌಡನ ಕೊಪ್ಪಲಿನ ಬಸವಯ್ಯನವರ ಕುಸ್ತಿಗಳಿಗೆ ಕರೆದೊಯ್ದರು. ಒಲಂಪಿಯಾದಲ್ಲಿ ಒಳ್ಳೆಯ ಸಿನಿಮಾ ಬಂದಾಗ ಹೋಗಿ ನೋಡಲು ಹುರಿದುಂಬಿಸಿದರು. ಜಗತ್ತಿನ ಹೆಸರಾಂತ ಸಾಹಿತಿ– ಕವಿ– ನಾಟಕಕಾರರ ಜೀವನ– ಸಾಧನಗಳ ನಿಷ್ಕೃಷ್ಟವಾದ ವಿವರಗಳನ್ನು ಹೇಳಿದರು. ಇಂಥ ಅಧ್ಯಾಪಕರು ಕಡೆಯ ಪಕ್ಷ ಒಬ್ಬಿಬ್ಬರಾದರೂ– ಮೈಸೂರಿನ ಪ್ರತಿಯೊಂದು ಶಾಲೆಯಲ್ಲಿಯೂ ಆಗ ಇದ್ದರೆನ್ನಬೇಕು. ಆದರೆ ಕೃಷ್ಣಮಾಚಾರ್ಯರ ಬಹುಮುಖ ಪ್ರತಿಭೆ, ಅವರನ್ನು ವಿದ್ಯಾರ್ಥಿಗಳ ಮನಸ್ಸಿನಲ್ಲಿ ಚಿರಂಜೀವಿಯನ್ನಾಗಿಸಿತು.

ಮುಂದೆ ಲಕ್ಷ್ಮೀಪುರಂ ಮಾಧ್ಯಮಿಕ ಶಾಲೆಗೆ! ಮೈಸೂರಿನ ದಕ್ಷಿಣ ವಲಯದಲ್ಲಿದ್ದ ಒಂದೇ ಶಾಲೆ ಅದು. ಅಲ್ಲಿ ನಮ್ಮ ಅಚ್ಚುಮೆಚ್ಚಿನ ಕನ್ನಡ ಪಂಡಿತರು ಜಿ. ವಿ. ರಾಮಸ್ವಾಮಿ ಅಯ್ಯಂಗಾರ್ಯರು. ಅವರ ಪಾಠಕ್ರಮದಲ್ಲಿ ವಿನೋದ– ಸಂಗೀತ ಹಾಸುಹೊಕ್ಕಾಗಿದ್ದುದು ಒಂದು ವಿಶೇಷ. ಶಾಲೆಯ ನಂತರ ವೃತ್ತಿ ನಾಟಕ ಕಂಪನಿ ನಡೆಯಿಸುತ್ತಿದ್ದರು. ''ಕರ್ನಾಟಕ ನಾಟಕ ಸಭಾ''– ಅಭಿನಯಿಸುತ್ತಿದ್ದ ನಾಟಕಗಳು– 'ನಿರ್ಭಾಗ್ಯ

ಭಾರತೀ', 'ಆಶಾ-ನಿರಾಶಾ', ನಾಟಕದ ತಾಲೀಮು ಇಲ್ಲದ ದಿನಗಳಲ್ಲಿ ಸಂಜೆ ಅಲ್ಲಲ್ಲಿ ಹರಿಕಥೆ ಮಾಡುತ್ತಿದ್ದರು. ಶ್ರುತಿ ಸೇರಿಸುತ್ತಿದ್ದ ವಿದ್ಯಾರ್ಥಿಗಳನ್ನು ಪತ್ತೆಮಾಡಿ ಮೊದಲಿಗೆ ತಮ್ಮ ಹರಿಕಥೆಗಳಲ್ಲಿ ''ಪಿನ್‌ಪಾಟು''ಗಳಾಗಿ ಪಳಗಿಸಿ ಆನಂತರ ತಮ್ಮ ನಾಟಕ ಮಂಡಳಿಗೆ ಸೇರಿಸಿ ಕೊಳ್ಳುತ್ತಿದ್ದರು. ಹೀಗೆ ಮಿಡಲ್ ಸ್ಕೂಲಿನಲ್ಲಿಯೇ ಬಲಿತ ಯುವಕನಾಗಿದ್ದ ಕಾಗೆಶಾಮನನ್ನು ಮಂಡಳಿಯ ಖಳನಾಯಕನನ್ನಾಗಿ ಮಾಡಿಕೊಂಡಿದ್ದರು. ಶಾಲೆಗೆ ಸೇರಿದ ಎರಡನೆಯ ತಿಂಗಳಿನಿಂದಲೇ ನಾನು, ಶ್ರೀಶೈಲ, ಶ್ರೀರಾಮ ಅಯ್ಯಂಗಾರಿ ಅವರಿಟ್ಟ . ಮೋಹನಾಸ್ತ್ರಕ್ಕೆ ಮರುಳಾಗಿ, ಹರಿಕಥೆ-ನಾಟಕಗಳಲ್ಲಿ ಪಳಗಿ, ಮಾರನೆಯ ವರುಷ ಸ್ತ್ರೀಪಾತ್ರಧಾರಿಗಳಾಗಿ ಅವರ ಕಮರ್ಷಿಯಲ್ ಕಂಪೆನಿಗೆ ಸೇರಿಕೊಂಡೆವು, ತಲೆ ಬೆಳೆಸಿದೆವು– ಟೋಫನ್ ಬದಲು. ನಮ್ಮದೇ ಮನೆಗಳಿಂದ ನಾಟಕದ ದಿನ ಸೀರೆ, ರವಿಕೆ, ಆಭರಣ-ಅಲಂಕಾರಗಳನ್ನು ಸಪ್ಲೈ ಮಾಡಿಕೊಂಡೆವು. ಪರೀಕ್ಷೆ ಮುಗಿದ ನಂತರ ನಾಲ್ಕು ತಿಂಗಳ ಬೇಸಿಗೆ ರಜೆಯಲ್ಲಿ, ಅಲ್ಲಿ-ಇಲ್ಲಿ-ಕೇಳಿದಲ್ಲಿ ಪ್ರದರ್ಶನ. ಒಂದೊಂದು ಪ್ರದರ್ಶನಕ್ಕೆ ಒಟ್ಟು ಕಲೆಕ್ಷನ್ ಅಬ್ಬಾ ಎಂದರೆ ಇಪ್ಪತ್ತು– ಮೂವತ್ತು ರೂಪಾಯಿ. ನನಗೆ ನಾಟಕಕ್ಕೆ ನಾಲ್ಕಾಣೆ ಸಂಭಾವನೆ-ಅದೇ ನನ್ನ ಮೊಟ್ಟಮೊದಲ ಸಂಪಾದನೆ. ಆದರೆ ಅಂದು ಬೆನ್ನು ಹತ್ತಿದ ನಾಟಕದ ಗೀಳು ಇನ್ನೂವರೆಗೆ ಬಿಡದೆ, ನನ್ನಂತೆ ಅಯ್ಯಂಗಾರ್ಯರ ಅನೇಕ ಶಿಷ್ಯರಿಗೆ ಜೀವನ ಸಾಧನವೂ ಆಯಿತು.

ಮುಂದೆ ನನ್ನ ಪುಣ್ಯ ವಿಶೇಷದಿಂದಾಗಿ ಮರಿಮಲ್ಲಪ್ಪಾ ಹೈಸ್ಕೂಲಿಗೆ. ಈಗ ಅದು ಮೊದಲ ರ್‍ಯಾಂಕುಗಳನ್ನು ಕಸಿಯುತ್ತ ಪ್ರಸಿದ್ಧಿ ಪಡೆದಿದೆ. ಆಗ ಅದು ''ಮರಿಮಲ್ಲಪ್ಪನ ದೊಡ್ಡಿ!'' ನಾನು ಸೇರಿಕೊಂಡ ಹಿಂದಿನ ಆರೆಂಟು ವರುಷಗಳಿಂದ, ರ್‍ಯಾಂಕು ಬಿಡಿ, ಒಂದು ಫಸ್ಟ್‌ಕ್ಲಾಸು ಕೂಡ ಶಾಲೆಗೆ ಗಿಟ್ಟಿರಲಿಲ್ಲ. ಅಂಥದನ್ನು ಇಂದಿನ ಕೀರ್ತಿಗೆ ಸಲ್ಲಿಸಿದ ಕೀರ್ತಿಯ ಬಹುಪಾಲು ಅಲ್ಲಿನ ಅಧ್ಯಾಪಕರಿಗೆ ಸೇರಬೇಕು. ಅಲ್ಲಿ ನಾನಿದ್ದ ವರುಷಗಳಲ್ಲಿಯೇ

---

ಮೈಸೂರು ಅರಮನೆ ಹೆಬ್ಬಾಗಿಲು

ವರ್ಣಛಾಯಾಚಿತ್ರ: ವಿ. ಗೋಪಾಲ್



(1936-39) ಎಂತೆಂಥ ಉಪಾಧ್ಯಾಯರು! ಮುಂದೆ ಯುನೆಸ್ಕೊ ವತಿಯಿಂದ ಆಫ್ರಿಕಾದಲ್ಲಿ ಅಕ್ಷರದ ಆಂದೋಲನವನ್ನು ಸಾಧಿಸಿದ ಎಸ್. ವಿ. ಶ್ರೀನಿವಾಸರಾಯರು ನಮ್ಮ ಆರಾಧ್ಯದೈವ. ಗಣಿತ-ವಿಜ್ಞಾನದ ವಿಷಯ ಗಳನ್ನು ಅವರಷ್ಟು ರಂಜಕವಾಗಿ ಪಾಠ ಮಾಡಿದವರನ್ನು ಕಾಣೆ. ಎಸ್.ಎಸ್.ಎಲ್.ಸಿ.ಯಲ್ಲಿ ಅವರ ಕ್ಲಾಸಿಗೆ ಬೇರೆ ಬೇರೆ ಶಾಲೆಗಳ ಸೀನಿಯರ್ ವಿದ್ಯಾರ್ಥಿಗಳು ಕೂಡ ಅಪ್ಪಣೆ ಪಡೆದುಬರುತ್ತಿದ್ದರು. ಕೇವಲ ಕೈಬೆರಳುಗಳ ಆಟ-ಮಾಟಗಳಿಂದಲೇ ಕೆಮಿಸ್ಟ್ರಿಯ ಎಕ್ಸ್‌ಪರಿಮೆಂಟುಗಳನ್ನು ಮನದಟ್ಟು ಮಾಡಿಕೊಡುತ್ತಿದ್ದ ಗೋಪಾಲ ಅಯ್ಯಂಗಾರ್, ಇಂಗ್ಲಿಷಿನ ತುಂಬಿದಕೊಡ-ಜಿ. ಆರ್. ರಂಗಸ್ವಾಮಿ-ಸಂಗೀತ-ಸಾಹಿತ್ಯಗಳ ತುಂಬು ಪಾಂಡಿತ್ಯದಿಂದ ಕನ್ನಡದ ಬಗೆಗೆ ನಮ್ಮ ಆಸಕ್ತಿ ಒಲವುಗಳನ್ನು ಹಾಲೆರೆದು ಬೆಳೆಯಿಸಿದ ಕೃಷ್ಣಪ್ಪನವರು (ವಿದ್ವಾನ್ ಆರ್. ಕೆ. ಶ್ರೀಕಂಠನ್ ಅವರ ತಂದೆ) ಹೀಗೆ-ಒಬ್ಬರೆ ಇಬ್ಬರೆ? ಈ ಎಲ್ಲರಿಗೂ ಸಂಗೀತ-ನಾಟಕ ಎಂದರೆ ಮೈಯೆಲ್ಲ ಕಣ್ಣು-ಕಿವಿ. ವಿದ್ಯಾರ್ಥಿಗಳಲ್ಲಿ ಕಲೆ ಕಂಡರೆ ಸಾಕು, ಬೆನ್ನುತಟ್ಟಿ, ಅನೇಕ ಅವಕಾಶಗಳನ್ನೂ ಕಲ್ಪಿಸಿ, ವಿಶೇಷವಾದ ವೈಯಕ್ತಿಕ ಶಿಕ್ಷಣಕ್ಕೆ ಅನುವುಮಾಡಿಕೊಟ್ಟವರು ಅವರು. ನಮ್ಮ ಕಾಲದಲ್ಲಿಯಂತೂ ನಮ್ಮ ಶಾಲೆ, ಸಂಗೀತ-ನಾಟಕಗಳಲ್ಲಿಯೂ ಮೊದಲೆನಿಸಿ ಊರಿನ ಪ್ರಶಸ್ತಿ ಪಡೆಯಿತು. ಶಾಲೆಯ ವಾರ್ಷಿಕ ಮಹೋತ್ಸವದಂದು ಆಗ ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲ್ ಅವರು ಮುಖ್ಯ ಅತಿಥಿಗಳಾಗಿ ಬಂದು ಕಡೆಯವರೆಗೂ ಇದ್ದು ವಿದ್ಯಾರ್ಥಿ ಕಲಾವಿದರ ಬೆನ್ನುತಟ್ಟಿ ನಮಗೆಲ್ಲ ಕೋಡು ಮೊಳೆಯಿಸಿದರು. ''ಹೋಲಿಸ್ಟಿಕ್'' ಎಂಬ ಮಾತು ಈಗ ಎಲ್ಲ ಕ್ಷೇತ್ರಗಳಲ್ಲಿ ಕೇಳಿಬರುತ್ತಿದೆ. ವಿದ್ಯಾರ್ಥಿಗಳ ''ಹೋಲಿಸ್ಟಿಕ್'' ಬೆಳವಣಿಗೆಯನ್ನು ಮೊದಲಿಗೆ ಸಾಧಿಸಿದವರೆಂದರೆ ಮೈಸೂರು ಶಾಲೆಗಳಲ್ಲಿನ ಉಪಾಧ್ಯಾಯರು ಎಂದು ನನ್ನ ನಂಬಿಕೆ; ಅನುಭವ. ಇದನ್ನು ಕರ್ನಾಟಕದ ಅನೇಕ ಕಡೆ ಉದಾಹರಿಸಿ ವಿಸ್ತರಿಸಿದಾಗ ಯಾರೂ ಜಗಳಕ್ಕೆ ಬರಲಿಲ್ಲ!

ಮೈಸೂರಿನಲ್ಲಿ ಮುಂಜಾನೆ ವಾಕಿಂಗ್ ಹೋಗಬೇಕು. ಆಹ-ಅದೆಂಥ ಸೊಗಸಾದ ಹವೆ, ಅದೆಂಥ ಅತಿಶುದ್ಧವಾದ ಗಾಳಿ! ಅದನ್ನೇರಿ ಸವಾರಿ ಮಾಡಿಕೊಂಡು ಬರುತ್ತಿದ್ದುದೆಂದರೆ ಪುಷ್ಪ ಪರಿಮಳ. ಮನೆ ಮನೆಗಳಿಂದಲೂ ಸಂಸ್ಕೃತದ ಪಾಠ ಇಲ್ಲವೆ ಸಂಗೀತದ ಅಭ್ಯಾಸ ಬೀದಿಗೇ ಕೇಳಿಬರಬೇಕು. ಅದರಲ್ಲಿಯೂ ವೀಣೆ-ಮೈಸೂರಿನ ಸ್ವಂತ ಸ್ವತ್ತು. ಶುಕ್ರವಾರ ಮುಂಜಾನೆ ಬೆಟ್ಟಕ್ಕೆ ಹೋಗುವಾಗ ಮಧುವನದ ಮಧ್ಯೆ ತಾನೆ ಹೋಗಬೇಕು! ಏನೆಂತಹ ಕಂಪು ಅಲ್ಲಿ! ಇಲ್ಲವೇ ಥಂಡೀ ಸಡಕ್‌ನ ಗಾಢವಾದ ನೆರಳಲ್ಲಿ ಮೈಲು ಉದ್ದ ಮೈ-ಕೈ-ಬೀಸಿಕೊಂಡು ಬರಬೇಕು. ಹಾಲುಖೋವ ತಿನ್ನುವ ಸಲುವಾಗಿಯೇ ಜಗನ್ಮೋಹನ ಬಂಗಲೆಯ ಮುಂದಿನ ರಸ್ತೆಗೆ ಹೋಗಬೇಕು. ಅಲೆಗಳ ಸಪ್ಪಳ ಸಂಗೀತ ಕೇಳುವ ಸಲುವಾಗಿಯೇ ಕುಕ್ಕರಹಳ್ಳಿ ಕೆರೆಯ ದಂಡೆಯ ಗುಂಟ ತಾಸೆರಡುತಾಸು ಅಡ್ಡಾಡಬೇಕು. ಮೈಸೂರಿನ ಹಕ್ಕಿ ಪಕ್ಷಿಗಳಿಗೆ ಅದರಲ್ಲಿಯೂ ಕೋಗಿಲೆಗೆ ಬೆಂಗಳೂರಿನ ಕೋಗಿಲೆಗಿಂತ ಹೆಚ್ಚು ಮಧುರವಾದ ಕಂಠ ಎಂದು ಹುಚ್ಚುನಂಬಿಕೆ ಹುಟ್ಟಿಸಿಕೊಂಡದ್ದೂ ಉಂಟು. ಆದರೆ, ನೀವು ಮೈಸೂರಿನ ಹಿಂದಿನ ಪ್ರೊಫೆಸರ್ ಕ್ವಾರ್ಟರ್ಸ್ ವೈಶಾಲ್ಯದಲ್ಲಿನ ವೃಕ್ಷಗಳಿಂದ ಸ್ವಚ್ಛಂದವಾಗಿ ಉಚ್ಚಸ್ವರದಲ್ಲಿ ಹೊಮ್ಮಿಬರುವ ಕೋಗಿಲೆಗಳ ಕುಹೂ ಮಾಲಿಕೆಯನ್ನು ಒಮ್ಮೆ ಕೇಳಿದರೆ ಸಾಕು-ಅಂಥ ಭ್ರಾಂತಿ ತಾನಾಗಿ ಬರುತ್ತದೆ. ಏನೆಂದರೂ ಮುಂಜಾನೆಯ ಮೈಸೂರು ಬೇಂದ್ರೆಯವರ ಮಾತನ್ನು ಸುಳ್ಳು ಮಾಡದೆ ''ಗಂಧರ್ವರ ಸೀಮೆ'' ಆಗುತ್ತದೆ– ಅಂದಿಗೂ ಇಂದಿಗೂ.

ಅಂಥ 'ಗಂಧರ್ವಸೀಮೆ'ಯಲ್ಲಿ ಎರಡು ದಶಕಗಳ ಕಾಲವನ್ನು ಉತ್ಸವದಲ್ಲಿ ಕಳೆದು, 1949ರಲ್ಲಿ ಆವರೆಗೆ ಕಾಣದ ಧಾರವಾಡಕ್ಕೆ ಹೊರಟು ನಿಂತಾಗ ತಬ್ಬಲಿತನದ ಅನುಭವ. ನನ್ನ ಒಳಗೂ-ಹೊರಗೂ ಒಂದೇ ಮಳೆ! ●

ನಮ್ಮೂರು ನಮ್ಮ ಜನ

# ಓಹ್, ಅಂದಿನ ಮೈಸೂರು !

● ಕಮಲಾ ಎನ್. ಮೂರ್ತಿ

ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಮೈಸೂರು. ಮೈಸೂರು ಎಂದೊಡನೆ ದಸರಾಹಬ್ಬ, ಜಂಬೂಸವಾರಿ, ದೀಪಾಲಂಕೃತ ಅರಮನೆ, ಮೃಗಾಲಯ, ಚಾಮುಂಡಿಬೆಟ್ಟ ನೆನಪಾಗುತ್ತದೆ. ಜೊತೆಗೆ ಮೈಸೂರು ಮಲ್ಲಿಗೆಯ ಕಂಪೂ ಶ್ರೀಗಂಧದ ಮಧುರವಾದ ವಾಸನೆಯೂ ತೇಲಿ ಬರುತ್ತದೆ. ಮೈಸೂರಿನ ರೇಶ್ಮೆ, ಚಿಗುರೆಲೆ, ಬದನೆಕಾಯಿ ಕೂಡ ಮೈಸೂರಿನಷ್ಟೆ ಪ್ರಸಿದ್ಧವಾದುದು.

ನನ್ನ ಮನಸ್ಸು ಮಾತ್ರ ಮೈಸೂರು ಎಂದೊಡನೆ ಐವತ್ತು ವರ್ಷಗಳ ಹಿಂದೆ ಜಾರುತ್ತದೆ. ಕಾಲೇಜು ವಿದ್ಯಾಭ್ಯಾಸಕ್ಕಾಗಿ ಅಂದು ಮೈಸೂರಿಗೆ ಕಾಲಿಟ್ಟಾಗ ನನ್ನನ್ನು ಮೋಹಗೊಳಿಸಿದ್ದು ಮೈಸೂರಿನ ಪ್ರಶಾಂತತೆ ಹಾಗೂ ಅದರ ಸೌಂದರ್ಯ. ಅಂದಿಗೂ-ಇಂದಿಗೂ ಅದೆಷ್ಟು ಅಂತರವೆನ್ನಿಸುತ್ತದೆ.

ನಾನಾಗ ಕಾಲೇಜು ವಿದ್ಯಾರ್ಥಿನಿ. ಮಹಾರಾಣಿ ಕಾಲೇಜು ಆಗ ನಾರಾಯಣ ಶಾಸ್ತ್ರಿ ರಸ್ತೆಯಲ್ಲಿ, ಈಗ ಇರುವ ಮಹಾರಾಣಿ ಕಿರಿಯ ಕಾಲೇಜಿನ ಕಟ್ಟಡಲ್ಲಿತ್ತು. ಆಗ ಕಾಲೇಜಿನಲ್ಲಿದ್ದ ವಿದ್ಯಾರ್ಥಿನಿಯರ ಸಂಖ್ಯೆಯೂ ಕಡಿಮೆ. ಆದ್ದರಿಂದ ಪ್ರತಿ ಚಟುವಟಿಕೆಗಳಲ್ಲೂ ಪ್ರತಿಯೊಬ್ಬ ವಿದ್ಯಾರ್ಥಿನಿಯೂ ಭಾಗವಹಿಸಲು ಅವಕಾಶವಿತ್ತು. ನಮ್ಮ ಹಾಗೂ ನಮ್ಮ ಗುರುಗಳ ನಡುವೆ ಮಧುರ ಬಾಂಧವ್ಯ ಇತ್ತು. ಯಾವುದೋ ಒಂದು ಹಬ್ಬದ ಸಂದರ್ಭದಲ್ಲಿ ನಮ್ಮ ಕಾಲೇಜಿನ ಪ್ರಿನ್ಸಿಪಾಲ್, ನಮ್ಮೆಲ್ಲರನ್ನು ಮನೆಗೆ ಆಹ್ವಾನಿಸಿ ಉಪಚರಿಸಿದ್ದು ನನಗಿನ್ನೂ ನೆನಪಿದೆ. ವಿಜ್ಞಾನ ವಿಭಾಗದ ವಿದ್ಯಾರ್ಥಿನಿಯರು ಪ್ರಾಕ್ಟಿಕಲ್ಸ್‌ಗೆ ಯುವರಾಜಾ ಕಾಲೇಜಿಗೆ ಹೋಗಬೇಕಿತ್ತು. ಅಲ್ಲಿದ್ದ ಹುಡುಗರು ತುಂಬಾ ಮರ್ಯಾದೆಯಿಂದ ವರ್ತಿಸುತ್ತಿದ್ದರು.

ನಮ್ಮನೆ ಇದ್ದಿದ್ದು ವೀವರ್ಸ್ ಲೈನ್‌ನಲ್ಲಿ. ಅಲ್ಲಿಂದ ಗೆಳತಿಯರ ಜೊತೆ ಹರಟುತ್ತಾ ನಡೆಯುತ್ತಿದ್ದರೆ ಹಾದಿ ಸವೆಯುತ್ತಿದ್ದುದೇ ತಿಳಿಯುತ್ತಿರಲಿಲ್ಲ. ಕಾಲೇಜಿಗೆ ಹೊತ್ತಾದ ದಿನ ನಾಲ್ಕು ಜನ ಸೇರಿ 'ನಾಲ್ಕಾಣೆ' ಹಾಕಿ 'ಷಾಪಸಂದ್'ನಲ್ಲಿ ಹೋಗುತ್ತಿದ್ದೆವು. ಆ ಪ್ರಯಾಣದ ಸೊಗಸೇ ಸೊಗಸು! ಆಗತಾನೆ ಸಿಟಿಬಸ್ ಆರಂಭವಾಗಿತ್ತು. ಆದರೂ ನಮಗೆ ನಡೆಯುವುದರಲ್ಲೇ ತುಂಬಾ ಖುಷಿಯಿರುತ್ತಿತ್ತು. ಮಾರ್ಕೆಟ್‌ಗೂ ನಡೆದು ಹೋಗಿ 'ಇಂದ್ರಭವನ್'ನಲ್ಲಿ ಬಿಸಿಬಿಸಿ ಮಸಾಲೆ ದೋಸೆ, ಇಡ್ಲಿ ಸಾಂಬರ್ ತಿಂದು ಬರುತ್ತಿದ್ದುದುಂಟು.

ಅಂದು ಇಷ್ಟೊಂದು ಸಿನಿಮ ಥಿಯೇಟರ್‌ಗಳು ಇರಲಿಲ್ಲ... ಗಣೇಶ, ಪದ್ಮಾ, ಗಾಯತ್ರಿ, ರಾಜಕಮಲ್ – ಈ ಥಿಯೇಟರ್‌ಗಳು ಮಾತ್ರ ನಮಗೆ ಪರಿಚಯವಿತ್ತು. ಬೆಳಗ್ಗೆ ಕಾಲೇಜ್‌ಗೆ ನಡೆದು ಹೋಗಿ ಬಂದು, ಸಾಯಂಕಾಲ ಬ್ಯಾಂಡ್‌ಮೆಂಟನ್ ಆಡಿ, ರಾತ್ರಿ ಸೆಕೆಂಡ್‌ಷೋ ಸಿನಿಮಾಕ್ಕೆ ಹೋಗುತ್ತಿದ್ದೆವು. ಎಲ್ಲಾ ಕಡೆಗೂ ಕಾಲ್ನಡಿಗೆಯ ಸಂಚಾರ! ಆಗ ಭಯವೇನೆಂದರೆ ನಮಗೆ ತಿಳಿದಿರಲಿಲ್ಲ. ರಾತ್ರಿ ಎಷ್ಟು ಹೊತ್ತಾದರೂ ನಿರ್ಭಯವಾಗಿ ಸಂಚರಿಸಬಹುದಿತ್ತು.

ಸಾಯಂಕಾಲ ವಾಕಿಂಗ್ ಹೋಗಲು ಮೈಸೂರಿನಲ್ಲಿದ್ದಷ್ಟು ಪ್ರಶಾಂತ ಸ್ಥಳಗಳು ಬೇರೆ ಊರಿನಲ್ಲಿರಲಿಲ್ಲವೇನೊ? ಕುಕ್ಕರಹಳ್ಳಿಯ ಕೆರೆಯ ಕಡೆಗೋ, ಕಾಲೇಜು ರಸ್ತೆಯಲ್ಲೋ ಅಥವಾ ಮೃಗಾಲಯದ ಕಡೆಗೋ ನಡೆಯುತ್ತಿದ್ದೆವು. ಸಾಯಂಕಾಲ ಬೀದಿಬೀದಿಯಲ್ಲಿ ಹೊತ್ತು ಮಾರುತ್ತಿದ್ದ ಗರಂ ಗರಂ ಕಡಲೆಕಾಯಿ, ಬಿಸಿಬಿಸಿ ಗಂಜಾಂಪುರಿ, ಅಂಜೂರ – ಇವುಗಳ ರುಚಿ ಇಂದಿಗೂ ಬಾಯಲ್ಲಿ ನೀರೂರಿಸುತ್ತದೆ.

ದಸರಾ ಬಂದೊಡನೆ ಮೈಸೂರಿಗೆ ಹೊಸ ಕಳೆ ಬರುತ್ತಿತ್ತು. ಮನೆಮನೆಯಲ್ಲೂ ಸಂಭ್ರಮ.

ಊರುಗಳಿಂದ ಬರುವ ನೆಂಟರ ಆಗಮನಕ್ಕೆ ಸಿದ್ಧತೆ. ದಿನವೂ ರಾಜದರ್ಬಾರ್ ನೋಡಲು ಅರಮನೆಗೆ ಓಡಾಟ! ಅಲ್ಲಿಯ ಸಂಗೀತದ ರಸದೌತಣ ಸವಿಯುವ ಸುವರ್ಣಾವಕಾಶ. ಅಂದಿನ ದೀಪಾಲಂಕೃತ ಅರಮನೆ, ಅಲೆ ಅಲೆಯಾಗಿ ತೇಲಿಬರುತ್ತಿದ್ದ ಮಧುರ ಸಂಗೀತದ ಮಧುರ ನೆನಪು ಇನ್ನೂ ಮನದಲ್ಲಿ ಹಸಿರಾಗಿದೆ. ಪ್ರತಿದಿನ ಸಾಯಂಕಾಲ ಬಣ್ಣಬಣ್ಣದ ಲಂಗ, ಪೋಲಕ ತೊಟ್ಟ ಹುಡುಗಿಯರು, ಜರೀಸೀರೆ ಯುಟ್ಟ ಅಮ್ಮಂದಿರ ಕೈಹಿಡಿದು 'ಬೊಂಬೆ ಬಾಗಿನಕ್ಕೆ' ಕರೆಯಲು ಹೋಗುತ್ತಿದ್ದ ದೃಶ್ಯ ಈಗೆಲ್ಲಿ? ಅಂದಿನ ವಸ್ತುಪ್ರದರ್ಶನವೂ ಚಿತ್ತಾಕರ್ಷಕವಾಗಿರುತ್ತಿತ್ತು. ಅಬ್ಬರದ ಪ್ರಚಾರ ವಿಲ್ಲದೆ, ಆಡಂಬರದ ಪ್ರದರ್ಶನಗಳಿಲ್ಲದೆ ಸೊಗಸಾಗಿರುತ್ತಿತ್ತು. ವಸ್ತುಪ್ರದರ್ಶನದಲ್ಲಿ ಏರ್ಪಡಿಸಿರುತ್ತಿದ್ದ ಸಂಗೀತ, ನೃತ್ಯ, ನಾಟಕದ

## ಮೈಸೂರಿನ 'ಮಧುವನ'

ರಾಜ-ಮಹಾರಾಜರುಗಳು ಆಳಿದ, ಸುಂದರ ನಗರವೆಂದು ಬಣ್ಣಿಸಿಕೊಳ್ಳುವ ಮೈಸೂರು ದಿನೇ ದಿನೇ ಕಲುಷಿತ ಗೊಳ್ಳುತ್ತಿರುವುದು ನಗ್ನಸತ್ಯ. ಐತಿಹಾಸಿಕ ಸ್ಮಾರಕಗಳಾಗಿ ಅರಮನೆಯನ್ನೊಳಗೊಂಡಂತೆ ಇತರ ಕೆಲವು ಮುಖ್ಯ ತಾಣಗಳು ಮಾತ್ರ ಜನಸಾಮಾನ್ಯರಿಗೆ ತಿಳಿದಿದೆ. ಇನ್ನೂ ಹತ್ತು ಹಲವು ಸ್ಮಾರಕಗಳು ತಮ್ಮ ಆಕರ್ಷಣೆ ಯನ್ನು ಕಳೆದುಕೊಂಡು ಪಾಳು ಬಿದ್ದಿವೆ ಎಂಬುದಕ್ಕೆ 'ಮಧುವನ'ವೇ ಸಾಕ್ಷಿ.

ಮೈಸೂರನ್ನಾಳಿದ ಪ್ರಮುಖ ರಾಜರು ಗಳ, ರಾಜ ಮನೆತನದವರ ಸಮಾಧಿ ಸ್ಥಳ ವಾದ ಮಧುವನದಲ್ಲಿ ಯಾಲಕ್ಕಪ್ಪಾಚಾರಿ ಎಂಬ ಶಿಲ್ಪಿಯ ಮುಂದಾಳುತನದಲ್ಲಿ, ದಿವಾನ್ ಪೂರ್ಣಯ್ಯನವರ ಮಾರ್ಗದರ್ಶನ ದಂತೆ ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರ ಬೃಂದಾವನ ವಿರಚಿತ ವಾಯಿತು. ಕಾಲಕ್ರಮೇಣ ನಾಲ್ವಡಿ ಕೃಷ್ಣರಾಜ ಒಡೆಯರ್, ಜಯಚಾಮರಾಜ ಒಡೆಯರ್, ರಣಧೀರ ಕಂಠೀರವ ನರಸಿಂಹರಾಜ ಒಡೆಯರ್, ಚಾಮರಾಜೇಂದ್ರ ಒಡೆಯರ್ ಮೊದಲಾದ ವರಲ್ಲದೆ ರಾಜಪತ್ನಿಯರಾದ ರಮಾದೇವಿ ಯವರು, ಪ್ರತಾಪಕುಮಾರಿದೇವಿಯವರು, ಸತ್ಯಪ್ರೇಮಕುಮಾರಿದೇವಿಯವರು, ವಾಣಿ ವಿಲಾಸ ಸನ್ನಿಧಾನ ಹೀಗೆ ಹಲವು ಬೃಂದಾವನ ಗಳು ರಚಿತವಾದವು. ಈ ಬೃಂದಾವನಗಳು ಅಪೂರ್ವ ಶಿಲ್ಪಕಲಾ ಕೆತ್ತನೆಯಿಂದ ಕಂಗೊಳಿಸುತ್ತಿದ್ದು ಇತ್ತೀಚೆಗೆ ಅಲಕ್ಷ್ಯದಿಂದ ಕಳೆಗುಂದುತ್ತಿವೆ. ಇವುಗಳ ಸುತ್ತಲೆಲ್ಲಾ ಕಾಡು–ಗಿಡಗಳು ಬೆಳೆದು ಈ ತಾಣವನ್ನು ವಿರೂಪಗೊಳಿಸಿವೆ. ಈ ಬೃಂದಾವನಗಳ ಮಂಟಪದ ಮೇಲೆ ಕಿರೀಟವಿದ್ದವೆಂದೂ ಇಲ್ಲಿದ್ದ ಪೊಲೀಸ್‌ಪಹರೆಯನ್ನು ತೆಗೆದು ಹಾಕಿದಾಗಿನಿಂದ ಕಾಣೆಯಾದವೆಂಬ ವದಂತಿ ಯಿದೆ. ಅನೇಕ ಸುಂದರ ಶಿಲಾಕಲಾಕೃತಿ ಗಳು ಮಾಯವಾಗಿವೆ. ಒಳ ಪ್ರವೇಶಿಸಲು ಇದ್ದ ದ್ವಾರವೀಗ ಯಾರಿಂದಲೋ 'ಅಪಾಯ' ಎಂದು ಬರೆಸಿಕೊಂಡು ನೇತಾಡುತ್ತಿದೆ. ರಸ್ತೆಯಂಚಿನಲ್ಲಿದ್ದ ಅಡ್ಡಗೋಡೆಗಳ ಅವಶೇಷ ಮಾತ್ರ ಉಳಿದಿದೆ. ಮಂಟಪದ ಕಲ್ಲುಗಳೆಲ್ಲಾ ಪಡ್ಡೆಹುಡುಗರ ಅಡ್ಡ ಭಂಡಾರವಾಗಿದೆ.

ನಗರದ ಗದ್ದಲದಿಂದ ದೂರ ಇರ ಬಯಸುವ ಕೆಲ ವಿದ್ಯಾರ್ಥಿಗಳಿಗೆ ಮಾತ್ರ ಈ ಜಾಗ ಸಹಾಯಕವಾಗಿದೆ. ಸೂಕ್ತ ರಕ್ಷಣಾ ಕ್ರಮ ಕೈಗೊಂಡರೆ ಇದೂ ಸಹ ಪ್ರಮುಖ ಪ್ರವಾಸಿ ಸ್ಥಳಗಳಲ್ಲೊಂದಾಗುವುದರಲ್ಲಿ ಎರಡು ಮಾತಿಲ್ಲ.

● ಎಂ. ಅಶೋಕ, ಉಚ್ಚಂಗಿ

ಕಾರ್ಯಕ್ರಮಗಳೂ ಒಳ್ಳೆಯ ಗುಣಮಟ್ಟದ್ದಾಗಿರುತ್ತಿದ್ದವು. ಹತ್ತನೆಯ ದಿನ, ಮಹಾರಾಜರು ಚಿನ್ನದ ಅಂಬಾರಿಯ ಮೇಲೆ ಕುಳಿತು ಮೆರವಣಿಗೆ ಹೊರಡುವ ದೃಶ್ಯ ನೋಡಲು ಸಾವಿರಾರು ಜನ ಹಳ್ಳಿಗಳಿಂದ ಬಂದು ಸೇರುತ್ತಿದ್ದರು. ಅಂದಿನ ಮೈಸೂರಿನ ಪ್ರತಿದಿನವೂ ಹಬ್ಬ!

ಚಾಮುಂಡಿಬೆಟ್ಟಕ್ಕೂ ಆಗಿದ್ದ ಆಕರ್ಷಣೆಯೇ ಬೇರೆ ತರಹ, ಬೆಟ್ಟಕ್ಕೆ ಹೋಗಬೇಕೆಂದು ನಿರ್ಧಾರವಾದೊಡನೆ ಮನೆಯಲ್ಲಿ ವಿಧ-ವಿಧವಾದ ತಿಂಡಿ-ತಿನಿಸು ತಯಾರಾಗುತ್ತಿತ್ತು. ಬೆಳಗ್ಗೆಯೇ ಎದ್ದು ಕಾಲ್ನಡಿಗೆಯಲ್ಲಿ ಬೆಟ್ಟವೇರುತ್ತಾ ಸುತ್ತಲಿನ ಸುಂದರ ಪ್ರಕೃತಿಯ ಸೊಬಗನ್ನು ಸವಿಯುತ್ತಾ ಬುಟ್ಟಿಯಲ್ಲಿದ್ದ ಪರಮಾನ್ನಗಳ ಸುವಾಸನೆ ಆಘ್ರಾಣಿಸುತ್ತಾ ದಾರಿ ಸವೆಸುತ್ತಿದ್ದಾಗ ದಣಿವೆಲ್ಲಿಂದ ಬರಬೇಕು?

## ಮೈಸೂರು–ಇಂದು

ಇಂದಿನ ಮೈಸೂರು ಕಾಲಕ್ಕೆ ತಕ್ಕಂತೆ ಬದಲಾಗಿದೆ. ಎಲ್ಲೆಲ್ಲೂ ಜನ. ಹೊಸರೀತಿಯ ಕಟ್ಟಡಗಳೂ ಹೊಸ ಬಡಾವಣೆಗಳೂ ಹೊಸ ಹೊಸ ರಸ್ತೆಗಳೂ ಮೈಸೂರಿನ ಸ್ವರೂಪ ಬದಲಾಯಿಸಿದೆ. ಸೀರೆ ಉಟ್ಟು ಬಳುಕುತ್ತಾ ನೀಳಜಡೆಯನ್ನು ತೂಗಾಡಿಸುತ್ತಾ ನಡೆಯುತ್ತಿದ್ದ ತರುಣಿಯರ ಭಾಗವನ್ನು ಬಾಬ್‌ಕಟ್, ತುಂಡುಜಡೆಗಳ, ಚೂಡಿದಾರ್, ಮಿಡಿ, ಸ್ಕರ್ಟ್‌ಗಳ ತರುಣಿಯರು ಆಕ್ರಮಿಸಿದ್ದಾರೆ. ಯಾವ ಬಸ್‌ಸ್ಟಾಪ್ ನೋಡಲಿ ಹನುಮಂತನ ಬಾಲದುದ್ದಕ್ಕೂ ಸಾಮಾನ್ಯ ದೃಶ್ಯ. ರಸ್ತೆಯಲ್ಲಿ ಕಾಲಿಟ್ಟೊಡನೆ ತುಂಬಿದ ಬಸಿರಿಯರಂತೆ ನಡೆಯುವ ಸಿಟಿಬಸ್‌ಗಳೂ ಭರ್ರೆಂದು ಸಾಗುವ ರಿಕ್ಷಾಗಳೂ ದ್ವಿಚಕ್ರ ವಾಹನಗಳೂ ರಾಕ್ಷಸನಂತೆ ಧಾವಿಸುವ ಲಾರಿಗಳೂ ನಮ್ಮಲ್ಲಿ ಭಯಹುಟ್ಟಿಸುತ್ತವೆ. ಯಾವ ಬಡಾವಣೆ ನೋಡಿ ಅಲ್ಲೊಂದು 'ಮಿನಿ ಮಾರ್ಕೆಟ್' ಕಂಡುಬರುತ್ತದೆ. ವಿಧವಿಧವಾದ ತರಕಾರಿ, ಹಣ್ಣು-ಹಂಪಲು ಮಾರುವ ಅಂಗಡಿಗಳೂ ಪರ್ಸ್, ಸರ, ಹೇರ್‌ಪಿನ್ ಇತ್ಯಾದಿ ಮಾರುವ ರಸ್ತೆಯ ವ್ಯಾಪಾರಿಗಳೂ ರಸ್ತೆಯ ಇಕ್ಕೆಲಗಳಲ್ಲೂ ಕಾಣುತ್ತಾರೆ. ಸಾಯಂಕಾಲವಾಗುತ್ತಿದ್ದಂತೆ ಬಿಸಿಬಿಸಿ ಬೋಂಡ, ಪಕೋಡ, ಕುರುಕುತಿಂಡಿ, ಪಾನಿಪೂರಿ, ಚುರುಮುರಿ ಮಾರುವ ಗಾಡಿಗಳು ದಿಢೀರೆಂದು ಪ್ರತ್ಯಕ್ಷವಾಗುತ್ತವೆ.

ಮೈಸೂರಿನಲ್ಲಿ ಈಗ ಸಿನಿಮಾ ಮಂದಿರಗಳ ಸಂಖ್ಯೆಯೂ ಹೆಚ್ಚಾಗಿದೆ. ಆದರೆ ಮೊದಲಿನಂತೆ ಸೆಕೆಂಡ್‌ಷೋಗೆ ಹೋಗುವ ಧೈರ್ಯ ಜನರಿಗಿಲ್ಲ. ಆಗಿದ್ದ ಸುರಕ್ಷತೆ ಈಗಿಲ್ಲ. ಮೈಸೂರು ಕೈಗಾರಿಕಾ ನಗರವಾಗಿ ಬೆಳೆಯುತ್ತಿದೆ. ಒಂದು ಕಡೆ ಹೆಬ್ಬಾಳ್, ಮತ್ತೊಂದು ಕಡೆ ವಿಜಯನಗರ, ಶ್ರೀರಾಂಪುರ, ಜೆ.ಪಿ.ನಗರ, ರಾಮಕೃಷ್ಣನಗರ– ಇತ್ಯಾದಿ ಹೊಸ ಬಡಾವಣೆಗಳು ಮೈಸೂರನ್ನು ಹಿಗ್ಗಿಸುತ್ತಾ ಸಾಗಿವೆ. ಎಲ್ಲೆಲ್ಲೂ ಜನಜಾತ್ರೆ, ಅಂಗಡಿಗಳ ಸಾಲು. ಈಗಂತೂ ಪ್ರತಿ ರಸ್ತೆಗೆರಡು ಹೊಟೇಲ್‌ಗಳಿವೆ. ಯಾವ ಹೊಟೇಲ್‌ಗಳಲ್ಲೂ ಶುಚಿ-ರುಚಿಗಳಿಗೆ ಪ್ರಾಧಾನ್ಯತೆ ಇಲ್ಲ. ಅಂದದ ಕಟ್ಟಡ, ಆಕರ್ಷಕ ವಿನ್ಯಾಸ, ಹೊಸಬಗೆಯ ತಿಂಡಿಗಳನ್ನು ಒದಗಿಸುವ ಹೊಟೇಲ್‌ಗಳಲ್ಲಿ ಬೆಲೆಗಳು ಅತಿ ದುಬಾರಿ. ಶ್ರೀಸಾಮಾನ್ಯ ಇವುಗಳಿಗೆ ಕಾಲಿಡಲೂ ಸಾಧ್ಯವಿಲ್ಲ.

ಮೈಸೂರು ಒಂದಾನೊಂದು ಕಾಲದಲ್ಲಿ 'ವಿದ್ಯಾಭ್ಯಾಸಕ್ಕೆ ಪ್ರಶಾಂತವಾದ ಸ್ಥಳ' ಎಂಬ ಹೆಗ್ಗಳಿಕೆಗೆ ಪಾತ್ರವಾಗಿತ್ತು. ಈಗ ಶಾಲೆ, ಕಾಲೇಜುಗಳ ಸಂಖ್ಯೆ ಹೆಚ್ಚಾದಂತೆ ವಿದ್ಯಾರ್ಥಿಗಳ ಸಂಖ್ಯೆಯೂ ಹೆಚ್ಚಾಗಿದೆ. ಅದರಂತೆ ಗಲಭೆಯೂ ಹೆಚ್ಚಾಗಿದೆ. ಶಾಂತಿಯ ತವರೂರಾಗಿದ್ದ ಮೈಸೂರು ಇಂದಿಲ್ಲ. ಕಣ್ಣುಮುಚ್ಚಿಕೊಂಡು ಹಳೆಯ ಮೈಸೂರನ್ನೋ ಹಳೆಯ ದಿನಗಳನ್ನೋ ನೆನಪು ಮಾಡಿಕೊಳ್ಳಲು ಪ್ರಯತ್ನಿಸುತ್ತೇನೆ. ಮಕ್ಕಳ, ಮೊಮ್ಮಕ್ಕಳ ಕರೆ ನನ್ನನ್ನು ಈ ಲೋಕಕ್ಕೆ ತರುತ್ತದೆ. ಎದುರಿಗೆ ಕಾಣುವ ಹೊಸಮುಖಗಳ ನಡುವೆ ಹಳೆಯ ಮುಖಗಳನ್ನು ಕಾಣಲು ಪ್ರಯತ್ನಿಸಿ ಸೋಲುತ್ತೇನೆ. ●

# ಸುಂದರ ಸೊಬಗಿನ ಬೀಡು

ನನ್ನೂರು ನನ್ನ ಜನ

● ಶೇಷನಾರಾಯಣ
21, ಎಂ.ಎಸ್.ಆರ್. ನಗರ
ಮತ್ತೀಕೆರೆ
ಬೆಂಗಳೂರು – 560 054.

ಮೈಸೂರು ಎಂದೊಡನೆ ಮಹಾರಾಜರು, ಅರಮನೆ, ಚಾಮುಂಡಿ ಬೆಟ್ಟ, ಕನ್ನಂಬಾಡಿ– ಹೀಗೆ ಪ್ರವಾಸಿಗರಿಗೆ ಹಳೆಯ ನೆನಪುಗಳೂ ಭಾವನೆಗಳೂ ಮರುಕಳಿಸುವುದು ಸಹಜ. ಇದಕ್ಕೆ ಶತ ಶತಮಾನಗಳಿಂದಲೂ ಮೈಸೂರಿನ ಅರಸು ಮನೆತನದೊಂದಿಗೆ ಜನ ತಳೆದಿದ್ದ ನಿಲುವು ಹಾಗೂ ಅಭಿಮಾನ ಮುಖ್ಯ ಕಾರಣ.

ಹೀಗಾದುದರಿಂದಲೇ 1956ರಲ್ಲಿ ಭಾಷಾವಾರು ಪ್ರಾಂತ್ಯ ರಚನೆಯಾದಾಗ, ಕೆಲವು ರಾಜಕಾರಣಿಗಳು ಹರಿದು ಹಂಚಿಹೋಗಿದ್ದ ಕನ್ನಡನಾಡು ಮತ್ತೆ ಒಂದುಗೂಡಿದ ಸಮಯದಲ್ಲಿಯೂ ಕರ್ನಾಟಕ ಎನ್ನುವುದು ಬೇಡ, ಹೊಸ ನಾಡಿಗೆ ಮೈಸೂರು ಎಂದೇ ಇರಲಿ– ಎಂದು ವಾದಿಸಿದ್ದೂ ಉಂಟು. ಆದರೆ ಬಹುಮತದಲ್ಲಿ ಅಂಥ ವಾದ ಸರಣಿ ಬಿದ್ದು ಹೋಯಿತು ಎನ್ನುವುದು ಬೇರೆ ವಿಚಾರ.

> **ಭಾರತದಲ್ಲೆ ಪ್ರವಾಸೀ ವಿಶೇಷಗಳಿಗಾಗಿ ಮೈಸೂರು ಲೋಕಪ್ರಸಿದ್ಧವಾಗಿದೆ. ಅರಮನೆ, ಬೆಟ್ಟ, ದೇವಾಲಯಗಳು, ದಟ್ಟ ಅರಣ್ಯ-ಮೃಗಗಳ ತಾಣ. ಜೊತೆಗೆ ಸುಪ್ರಸಿದ್ಧ ದಸರಾ ಉತ್ಸವ- ಮತ್ತೆ ಮತ್ತೆ ನೋಡಿ ಅನುಭವಿಸ ಬಯಸುವ ಅದ್ಭುತಗಳು.**

ಮೈಸೂರು ಭಾರತದಲ್ಲಿಯೇ ಅತ್ಯಂತ ಸುಂದರ ಹಾಗೂ ಶಾಂತ ನಗರ ಎಂದು ಹೇಳುವವರೂ ಇದ್ದಾರೆ. ಇದು ಉತ್ಪ್ರೇಕ್ಷೆಯ ಮಾತೇನೂ ಅಲ್ಲ. ಈಗೀಗ ಆ ನಗರಕ್ಕೆ ಕೆಲವು ಕಾರ್ಖಾನೆಗಳು ಬಂದಿದ್ದರೂ ವಾಸ್ತವವಾಗಿಯೂ ಅದು ಶಾಂತ ನಗರವೇ. ಎಲ್ಲೆಲ್ಲೂ ಗಿಜಿಗುಟ್ಟುವ ಜನ, ಬೊಬ್ಬೆ, ದೊಂಬಿ– ಇಂಥವುಗಳಿಂದ ಮೈಸೂರು ಇಂದಿಗೂ ದೂರವಾಗಿಯೇ ಉಳಿದಿದೆ.

ಮೈಸೂರಿನಲ್ಲಿ ನೀವು ಇಳಿದೊಡನೆ ನಿಮ್ಮ ಕಣ್ಮನಗಳಿಗೆ ಮುದ ನೀಡುವುದು ಅರಮನೆ ಮತ್ತು ಆ ನಗರದ ಬೆನ್ನಿಗೇ ಅಂಟಿಕೊಂಡಂತಿರುವ ಚಾಮುಂಡಿ ಬೆಟ್ಟ ಸಾಲು. ಎರಡು ಸಹಸ್ರ ವರ್ಷಗಳಿಗೂ ಮೀರಿದ ಪುರಾತನ ದೇಗುಲದ ಚಾಮುಂಡಿ, ಬೆಟ್ಟದ ನೆತ್ತಿಯ ಮೇಲೆ ನೆಲೆಸಿದ್ದಾಳೆ. ಮಹಿಷ ಎನ್ನುವ ಅಸುರನನ್ನು ಕೊಂದುದಕ್ಕಾಗಿ ಪಾರ್ವತಿಗೆ ಚಾಮುಂಡಿ ಎನ್ನುವ ಹೆಸರು ಬಂದಿತಂತೆ. ಮಹಿಷನ ಊರು ಮೈಸೂರು. ಪುರಾಣ ಕಥೆಗಳು ಹೀಗೆ ಹೇಳುತ್ತವೆ. ಬೆಟ್ಟದ ಅರ್ಧ ಭಾಗ ಕ್ರಮಿಸಿದರೆ ಒಂದೇ ಕಲ್ಲಿನಲ್ಲಿ ಕಡೆದ 4.8 ಮೀಟರಿನ ದೊಡ್ಡ ನಂದಿ. ಬೆಟ್ಟ ಹತ್ತಲು ಸಹಸ್ರ ಪಾವಟಿಗೆಗಳು. ಹದಿನೇಳನೆಯ ಶತಮಾನದಲ್ಲಿ ದೊಡ್ಡ ದೇವರಾಜ ಈ ಪಾವಟಿಗೆಗಳನ್ನು ಕೆತ್ತಿಸಿದ. ಹಿಂದಿನ ಕಾಲದಲ್ಲಿ ಈ ಪಾವಟಿಗೆಗಳನ್ನು ಹತ್ತಿಯೇ ಭಕ್ತರು ಬೆಟ್ಟದ ತುದಿಗೆ ದೇವಿಯ ದರುಶನಕ್ಕೆ ಹೋಗುತ್ತಾ ಇದ್ದರು. ಈಗ ಗುಡಿಯ ಬಾಗಿಲ ವರೆಗೂ ಬಸ್ ಸೌಕರ್ಯ ಇದೆ. ಬೆಟ್ಟದ

ತಿರುಗಣೆಯ ಹಾದಿಯಲ್ಲಿ ಬಸ್ಸಿನಲ್ಲಿ ಕುಳಿತು ಸಾಗುವಾಗ ಸುಂದರವಾದ ಮೈಸೂರು ನಗರ ಹರಡಿದ ಹೂಗಳ ಹಾಗೆ ಕಾಣುವ ದೃಶ್ಯ ಚೇತೋಹಾರಿ. ಚಾಮುಂಡಿ ದೇಗುಲದಿಂದ ಇನ್ನೂ ಈ ಕಡೆ, ಮೈಸೂರಿಗೆ ಈ ಹೆಸರು ಬರಲು ಕಾರಣವಾದ ಮಹಿಷನ ಒಂದು ಪ್ರತಿಮೆಯೂ ಇದೆ.

ಮೈಸೂರಿನ ಅರಸರ ಅರಮನೆ ಭಾರತದಲ್ಲಿರುವ ಸುಂದರವಾದ ಅರಮನೆಗಳಲ್ಲಿ ಒಂದು. ಶತ ಶತಮಾನಗಳಿಂದ ವಿವಿಧ ರೀತಿಯಲ್ಲಿ ಬದಲಾವಣೆಗೊಂಡು ಇಂದಿನ ಆಕಾರದಲ್ಲಿರುವ ಈ ಭವ್ಯ ಅರಮನೆಯ ದರ್ಬಾರ್ ಹಾಲ್, ವಿವಿಧ ವಿನ್ಯಾಸದ ಕಮಾನುಗಳು, ಸ್ಥೂಪಗಳು, ಚಿನ್ನದ ತಗಡಿನ ಲೇಪನದ ಮೇಲುಮಾಡುಗಳು, ಗೋಪುರಗಳು ಇತ್ಯಾದಿ ಪ್ರವಾಸಿಗರನ್ನು ನಿಬ್ಬೆರಗುಗೊಳಿಸುತ್ತವೆ.

ಅರಸರ ಕಾಲದಲ್ಲಿ ದಸರಾದ ವೈಭವವೇ ವೈಭವ. ಜಂಬೂಸವಾರಿ, ಬನ್ನಿ ಮಂಟಪದಲ್ಲಿ ಅರಸರ ಪೂಜೆ- ಹೀಗೆ ಅದು ಗತಕಾಲ. ಈಗ ಇದು ನಾಡ ಹಬ್ಬವಾಗಿ ಹೋಗಿದೆ. ವಿಶೇಷ ದಿನಗಳಲ್ಲಿ ಮತ್ತು ದಸರಾ ಕಾರ್ಯಕ್ರಮಗಳಲ್ಲಿ ಅರಮನೆಗೆ ಪೂರಾ ದೀಪಗಳನ್ನು ಹಾಕಿ ಬೆಳಗುವಾಗ ಬಣ್ಣಬಣ್ಣಗಳ ವಿದ್ಯುತ್ ದೀಪಗಳಿಂದ, ಮಿರಿಮಿರಿ ಮಿಂಚುವ ಅರಮನೆಯ ಸೊಬಗೇ ಸೊಬಗು. ಅರಮನೆಯ ಎದುರಿಗೇ ದಸರಾ ವಸ್ತುಪ್ರದರ್ಶನದ ಮುಂದೆಯೂ ಜನರ ಹಿಂಡು, ಬೆಳಕಿನ ಪ್ರವಾಹ.

ಮೈಸೂರಿನಿಂದ ಹತ್ತೊಂಬತ್ತು ಕಿಲೋಮೀಟರ್ ದೂರದಲ್ಲಿರುವ ಕೃಷ್ಣರಾಜ ಸಾಗರ ಲೋಕ ಪ್ರಸಿದ್ಧ. ಕನ್ನಡದ ಕಾವೇರಿ ಮೈದುಂಬಿ ಮುಗುಳು ಸೂಸುವ ಶ್ರೀಮದ್ಗಾಂಭೀರ್ಯ. ಬೃಂದಾವನ ಎನ್ನುವ ಹೆಸರು ನಿಜಕ್ಕೂ ಇದಕ್ಕೆ



ಫೋಟೋ : ಎ. ಗೋಪಾಲ್

ಸಾರ್ಥಕ. ಬಣ್ಣ ಬಣ್ಣದ ನೀರಿನ ಕಾರಂಜಿ ಇಲ್ಲಿ ಚಿಮ್ಮುತ್ತದೆ. ಕೃಷ್ಣರಾಜ ಸಾಗರದ ಬೆಡಗನ್ನು ಸವಿಯುತ್ತ ಅಡ್ಡಾಡುತ್ತಿದ್ದಂತೆ ವಿಶ್ವೇಶ್ವರಯ್ಯನವರನ್ನು ನೆನಪಿಸಿಕೊಳ್ಳದಿದ್ದರೆ ನಿಜಕ್ಕೂ ಅಂಥವನು ಕೃತಘ್ನನಾಗುತ್ತಾನೆ.

ಮೈಸೂರಿಗೆ ಹೋಗುವವರು ಅರಮನೆ-ಚಾಮುಂಡಿ ಬೆಟ್ಟ-ಬೃಂದಾವನ ನೋಡದೆ ಹಿಂದಿರುಗುವುದು ಸಾಧ್ಯವೇ ಇಲ್ಲ!

ಹಾಗೆಯೇ ಪುಟಾಣಿಗಳಿಗೆ-ಪುಟಾಣಿಗಳೇನು ದೊಡ್ಡವರೂ ಸಹ– ಪ್ರಿಯವಾದ ಮೃಗಶಾಲೆ ಮೈಸೂರಿನಲ್ಲಿ ಇದೆ. ಭಾರತದಲ್ಲಿರುವ ವಿಶಿಷ್ಟ ಹಾಗೂ ಹೆಚ್ಚು ಪ್ರಾಣಿಗಳನ್ನು ಹೊಂದಿರುವ ಮೃಗಶಾಲೆಗಳಲ್ಲಿ ಇದೂ ಒಂದು.

ಮೈಸೂರಿನಲ್ಲಿ ನೋಡತಕ್ಕ ಸ್ಥಳಗಳು ತುಂಬಾ ಇವೆ. ಅವುಗಳಲ್ಲಿ ಮುಖ್ಯವಾದುವು ಲಲಿತಮಹಲ್, ಜಯಚಾಮರಾಜೇಂದ್ರ ಆರ್ಟ್ ಗ್ಯಾಲರಿ, ಸೇಂಟ್ ಫಿಲೋಮಿನಾ ಚರ್ಚ್– ಹೀಗೆ. ಸಾಹಿತ್ಯದಲ್ಲಿ ಆಸಕ್ತಿ ಇದ್ದಿದ್ದರೆ ಕುಕ್ಕರಹಳ್ಳಿ ಕೆರೆ ಮಾರ್ಗವಾಗಿ ನಿಧಾನವಾಗಿ ಹೆಜ್ಜೆ ಹಾಕುತ್ತಾ ಮಾನಸ ಗಂಗೋತ್ರಿಯನ್ನು ಪ್ರದಕ್ಷಿಣೆ ಹಾಕಿ ಬರಬಹುದು.

ಮೈಸೂರು ಎಂದೊಡನೆ ಮೇಲೂ ಕೆಲವು ಸಂಗತಿಗಳು ಅರಳುತ್ತವೆ. ಮೈಸೂರು ಚಿಗುರು ವೀಳ್ಯದೆಲೆ, ಮೈಸೂರಿನ ಎಳೆಬದನೇಕಾಯಿ, ಮೈಸೂರು ಮಲ್ಲಿಗೆ, ಮೈಸೂರು ರುಮಾಲು, ಮೈಸೂರು ಟಾಂಗಾ– ಹೀಗೆ.

ಇವುಗಳಲ್ಲಿ ಮೈಸೂರು ಟಾಂಗಾ ಹಳೆಯ ಕಥೆ ಆಯಿತು. ಈಗ ಅವುಗಳ ಸ್ಥಾನವನ್ನು ಆಟೋಗಳು ಆಕ್ರಮಿಸಿಕೊಂಡಿವೆ. ಮೈಸೂರು ರುಮಾಲು ಸಹ ಗತಕಾಲದ ಚಿಹ್ನೆ ಆಗುತ್ತ ಇದೆ. ಈಗ ತಲೆಯ ಮೇಲೆ ಪೇಟ ಇಡುವವರು ಯಾರು? ರಾಜಕೀಯದ ಜನ ಮಾತ್ರ ಹೊರ ನಾಡುಗಳಿಂದ ಬಂದವರಿಗೆ ಎಳನೀರು ಕುಡಿಸಿ ಈ ರುಮಾಲು ಇಟ್ಟು ಅವರೊಂದಿಗೆ ತಾವೂ ನಿಂತು ಬಲವಂತವಾಗಿ ನಗೆ ತಂದುಕೊಂಡು ಫೋಟೋ ತೆಗೆಸಿಕೊಳ್ಳುತ್ತ ಇದ್ದಾರೆ. ವಿಸೀಯವರ ರುಮಾಲಿನ ಸೊಗಸಾದ ಪ್ರಬಂಧದೊಂದಿಗೆ ಇದೂ ಹಳೆಯ ಕಥೆಯೇ.

ಆದರೆ ಚಿಗುರು ವೀಳ್ಯದೆಲೆ, ಎಳೆ ಬದನೇಕಾಯಿ, ಘಮಘಮ ಮೈಸೂರು ಮಲ್ಲಿಗೆ– ಇವು ಯಾವ

ಬೃಂದಾವನ

ವರ್ಣಚಿತ್ರ: ಪ್ರಗತಿ ಗೋಪಾಲಕೃಷ್ಣ



ಕಾಲದಲ್ಲಿಯೂ ಇರುತ್ತವೆ.

ಅದು ಸರಿ. ಸೊಗಸಾದ ಸಿಹಿತಿಂಡಿ ಮೈಸೂರುಪಾಕ್ಕಿಗೆ ಹೇಗೆ ಈ ಹೆಸರು ಬಂತು? ಉಡುಪಿ ಭಟ್ಟರಿಗೆ ಸವಾಲು ಎಂದು ಈ ಊರಿನ ಯಾವನಾದರೊಬ್ಬ ಬಾಣಸಿಗ– ಹಳೇ ಮೈಸೂರು ಸಂಸ್ಥಾನದ ಬ್ರಾಹ್ಮಣ– ಇದನ್ನು ಕಂಡು ಹಿಡಿದನೋ? ಸಂಶೋಧಕರಿಗೆ ಬಿಟ್ಟ ವಿಚಾರ.

ನಂಜನಗೂಡಿನ ಶ್ರೀಕಂಠೇಶ್ವರನ ದೇವಸ್ಥಾನ ಪ್ರಸಿದ್ಧವಾದದ್ದು. ಮೈಸೂರಿಗೆ ಕೇವಲ ಇಪ್ಪತ್ತನಾಲ್ಕು ಕಿಲೋಮೀಟರ್‌ಗಳ ದೂರದಲ್ಲಿ ಇದೆ. ಇದು ಕಪಿಲಾ ನದಿಯ ದಡದಲ್ಲಿರುವ ಈ ಜಿಲ್ಲೆಯ ಒಂದು ತಾಲ್ಲೂಕು ಕೇಂದ್ರ. ಕಾವೇರಿಯ ಉಪನದಿಗಳಲ್ಲಿ ಕಪಿಲೆಯೇ ದೊಡ್ಡದು. ಮುಂದೆ ಈ ನದಿ ಇದೇ ಜಿಲ್ಲೆಯ ತಿರುಮಕೂಡ್ಲು ನರಸೀಪುರದ ಬಳಿ ಕಾವೇರಿಯೊಂದಿಗೆ ಸಂಗಮವಾಗುತ್ತದೆ. ಇದಕ್ಕೆ ಒಂದು ಅಣೆಕಟ್ಟು. ಕಬಿನಿ ಜಲಾಶಯ ಎಂದು ಅದಕ್ಕೆ ಹೆಸರು. ಸೊಗಸಾದ ಕಪಿಲಾ ಎನ್ನುವುದನ್ನು ಬಿಟ್ಟು ಕಬಿನಿ ಯಾಕಾಯಿತೋ? ತಮಿಳರು ಮತ್ತು ಇಂಗ್ಲಿಷರು ಹೆಸರುಗಳನ್ನು ಅಪಭ್ರಂಶಗೊಳಿಸುವ ಜಾಡು, ವ್ಯಾಧಿ, ನಮ್ಮವರಿಗೂ ಬಡಿಯಿತೋ ಏನೋ?

ನಂಜನಗೂಡಿನ ರಸಬಾಳೇ ಹಣ್ಣು ಪ್ರಸಿದ್ಧ. ಪುಟ್ಟ ಆಕಾರದ ಇಷ್ಟೇ ಇಷ್ಟು ಉದ್ದದ ಈ ಹಣ್ಣು ಬಹುರುಚಿ. ಆದರೆ ಬೆಲೆ ಮಾತ್ರ ದುಪ್ಪಟ್ಟು.

ಹಳೇಬೀಡು, ಬೇಲೂರುಗಳನ್ನು ನೆನಪಿಗೆ ತರುವ ಹೊಯ್ಸಳ ಶೈಲಿಯ ಪ್ರಸಿದ್ಧ ದೇವಸ್ಥಾನ, ಟಿ.ನರಸೀಪುರದ ಬಳಿಯ ಸೋಮನಾಥಪುರದಲ್ಲಿ ಇದೆ. ಹದಿಮೂರನೆಯ ಶತಮಾನದ ಈ ಶಿಲ್ಪ ವೈಭವ ಇಂದಿಗೂ ಪ್ರವಾಸಿಗರ ಕಣ್ಮನಗಳನ್ನು ಸೂರೆಗೊಳ್ಳುತ್ತದೆ. ಇಲ್ಲಿನ ಶಿಲ್ಪಕಲೆಯ ಸೊಬಗನ್ನು ಸವಿಯ ಬಯಸಿ ಬರುವ ಪ್ರವಾಸಿಗರಿಗೆ ಏನೇನೂ ಸೌಲಭ್ಯ ಇಲ್ಲ. ಎಲ್ಲ ಕಡೆ ಇರುವಂತೆ ಇಲ್ಲಿಯೂ ದಿವ್ಯ ನಿರ್ಲಕ್ಷ್ಯ.

ಕಾವೇರಿಯ ತಟದಲ್ಲಿರುವ ತಲಕಾಡು ಗಂಗರ ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ನಗರ; ರಾಜಧಾನಿ. ನಾಲ್ಕನೆಯ ಶತಮಾನದಲ್ಲಿಯೇ ಇದು ತನ್ನ ವೈಭವವನ್ನು ಮೆರೆದಿತ್ತು. ಈಗ ಇದು ಮರಳು ತುಂಬಿಕೊಂಡಿರುವ ಒಂದು



ಮುಟಕ ತೊರೆ

ವರ್ಣಚಿತ್ರ: ಕೊ. ಸು. ನರಸಿಂಹಮೂರ್ತಿ

ಪುಟ್ಟ ಊರು. ಹಲವು ಲಿಂಗಗಳ ದೇಗುಲಗಳನ್ನು ಇಲ್ಲಿ ಕಾಣಬಹುದು.

ಕಾವೇರಿಯ ತೀರದಲ್ಲಿರುವ ಮತ್ತೊಂದು ಶೈವಕ್ಷೇತ್ರ ಮುಡುಕುತೊರೆ. ಮಲ್ಲಿಕಾರ್ಜುನ ಇಲ್ಲಿನ ದೇವರು.

ತಲಕಾಡಿನಿಂದ ಇನ್ನೂ ಪೂರ್ವಕ್ಕೆ ಪ್ರಸಿದ್ಧ ಶಿವನಸಮುದ್ರ. ಮೈಸೂರಿಗೆ ಎಂಬತ್ತೈದು ಕಿಲೋಮೀಟರ್‌ಗಳ ದೂರದಲ್ಲಿ ಕಾವೇರಿ ಗಗನಚುಕ್ಕಿ, ಭಲೆ ಚುಕ್ಕಿಯಾಗಿ ಎಪ್ಪತ್ತೈದು ಮೀಟರ್‌ಗಳ ಅಂತರದಿಂದ ಧುಮುಕುತ್ತಾಳೆ. ಕರ್ನಾಟಕದಲ್ಲಿ ಜೋಗ್ ಬಿಟ್ಟರೆ ಇದೇ ಎರಡನೆಯ ಮಹತ್ವದ ಜಲಪಾತ. ಇಲ್ಲಿನ ಮತ್ತೊಂದು ವಿಶೇಷವೆಂದರೆ ಏಷ್ಯಾದಲ್ಲಿಯೇ ಪ್ರಪ್ರಥಮವಾಗಿ 1905ರಲ್ಲಿ ಹೈಡ್ರೋ ಎಲೆಕ್ಟ್ರಿಕ್ ಪ್ರಾಜೆಕ್ಟ್ ಪ್ರಾರಂಭವಾಯಿತು. ಒಂದು ಕಾಲದಲ್ಲಿ ಮೈಸೂರು ಸಂಸ್ಥಾನದ ಎಲ್ಲ ಭಾಗಕ್ಕೂ ಇಲ್ಲಿಂದ ಸಮರ್ಪಕವಾಗಿ ವಿದ್ಯುತ್ತು ಸರಬರಾಜು ಆಗುತ್ತ ಇತ್ತು. ಈಗ ದಿನಕ್ಕೆ ನಾಲ್ಕು ಸಲ ಕರೆಂಟ್ ಕಟ್ ಮಾಡಿದರೂ ಸುಧಾರಿಸಲು ಆಗದೆ ಅಲ್ಲಿಂದಲೂ ಇಲ್ಲಿಂದಲೂ ವಿದ್ಯುತ್ತನ್ನು ನಾವು ಭಿಕ್ಷೆ ಬೇಡುತ್ತಾ ಇದ್ದೇವೆ.

ಮೈಸೂರು ಜಿಲ್ಲೆ ಎಂದೊಡನೆ ವನಸಿರಿಯ ರಾಣಿ ಎಂದೇ ಹೇಳುವ ಹಾಗೆ, ಈ ಜಿಲ್ಲೆಯ ಅರ್ಧ ಭಾಗವೂ ದಟ್ಟ ಕಾಡು ಮತ್ತು ಬೆಟ್ಟ ಸಾಲುಗಳಿಂದ ಶೋಭಾಯಮಾನವಾಗಿದೆ. ಭಾರತದಲ್ಲಿ ಹೆಚ್ಚಿನ ದುರ್ಗಮ ಕಾಡಿನ ಭಾಗ ಇರುವುದು ದಕ್ಷಿಣದಲ್ಲಿಯೇ.

ಮೈಸೂರು ಜಿಲ್ಲೆಯ ಮೂರು ದಿಕ್ಕುಗಳಲ್ಲಿಯೂ ದಟ್ಟಾರಣ್ಯ. ಕರ್ನಾಟಕದಲ್ಲಿ ಯಾವ ಜಿಲ್ಲೆಗೂ ಈ ಭಾಗ್ಯ ಇಲ್ಲ.

ಹೌದು. ಈ ಜಿಲ್ಲೆಯ ಪೂರ್ವ, ಪಶ್ಚಿಮ ಮತ್ತು ದಕ್ಷಿಣ ದಿಕ್ಕುಗಳು ಇತರೇ ಪ್ರಾಂತ್ಯಗಳೊಂದಿಗೆ ಕಾಡಿನೊಂದಿಗೇ ಎಲ್ಲೆಯಾಗಿವೆ. ಪಶ್ಚಿಮಕ್ಕೆ ಕೇರಳ, ಪೂರ್ವ ಮತ್ತು ದಕ್ಷಿಣಕ್ಕೆ ತಮಿಳುನಾಡು. ಇಲ್ಲಿನ ಭಾರೀ ವಿಸ್ತಾರವಾದ ಕಾಡು ಈ ಮೂರು ಪ್ರಾಂತ್ಯಗಳಲ್ಲಿಯೂ ಹಂಚಿ ಹೋಗಿದೆ. ಇವುಗಳ ಹೆಸರುಗಳು ಮಾತ್ರ ಆಯಾಯಾ ಪ್ರಾಂತ್ಯಗಳಲ್ಲಿ ಬೇರೆ ಬೇರೆ ಅಷ್ಟೇ.

ಕರ್ನಾಟಕದಲ್ಲಿ ಬಂಡೀಪುರದ ಕಾಡು ಕೇರಳದಲ್ಲಿ ವೈನಾಡು, ನೀಲಗಿರಿ ಜಿಲ್ಲೆಯಲ್ಲಿ–

## ನನ್ನೂರು ಚಾಮರಾಜನಗರ

ಇಡೀ ಕರ್ನಾಟಕವೇ ಶಾಂತಿಗೆ ತವರೂರು. ಅದರಲ್ಲೂ ಮೈಸೂರು ಜಿಲ್ಲೆ ರಾಜಕೀಯ ಹಾಗೂ ಶಾಂತಿ ನೆಮ್ಮದಿಯ ತವರೂರು. ಎಲ್ಲಾ ಕ್ಷೇತ್ರದಲ್ಲೂ ಹೆಸರುವಾಸಿಯಾದ ಈ ಜಿಲ್ಲೆಯಲ್ಲಿ ನನ್ನೂರು ಚಾಮರಾಜನಗರ. ನನ್ನೂರ ಜನರು ಶಾಂತಿಪ್ರಿಯರಾದರೂ ವರ್ಷಕ್ಕೊಮ್ಮೆಯಾದರೂ ಸುದ್ದಿಯಾಗಬೇಕು. ಗಲಾಟೆಯಲ್ಲಿ ಪೊಲೀಸರಿಗೆ ಕರ್ಫ್ಯೂ ಹಾಕುವುದರಲ್ಲಿ ಖುಷಿ ಕಂಡರೆ ವ್ಯಾಪಾರಿಗಳಿಗೆ ಬೆಲೆಯನ್ನು ಗಗನಕ್ಕೆ ಏರಿಸುವುದರಲ್ಲಿ ಪೈಪೋಟಿ. ಆದರೆ ಕಷ್ಟದಿಂದ ನರಳುವುದು ಮಧ್ಯಮ ವರ್ಗದ ಜನ ಹಾಗೂ ಕೆಳವರ್ಗದ ಜನರಲ್ಲವೆ.

ನನ್ನೂರ ಜನರ ಸಹನೆ ಎಷ್ಟೆಂದರೆ ಚುನಾವಣೆಯಲ್ಲಿ ಕೂಗಾಡಿ ಆಶ್ವಾಸನೆ ನೀಡಿ ಬೆಂಗಳೂರಿಗೆ ಓಡಿಹೋದವರನ್ನು ಕ್ಯಾರೆ ಎನ್ನುವುದಿಲ್ಲ. ಪ್ರಕೃತಿ ದಿನೇ ದಿನೇ ಲೂಟಿಯಾಗುತ್ತಿದ್ದರೂ ಕಪ್ಪು ಕಲ್ಲುಗಳಿಂದ ಕಪ್ಪು ಹಣದಿಂದ ದಿನೇ ದಿನೇ ಬೇರೆ ರಾಜ್ಯದವರು ಇಲ್ಲಿಗೆ ಬಂದು ಶ್ರೀಮಂತರಾಗುತ್ತಿದ್ದರೂ ನನ್ನೂರ ಜನಕ್ಕೆ ಸಂತೋಷ. ಅದರೂ ನನ್ನೂರಿನ ಜನಕ್ಕೆ ಸಭೆ, ಸಮಾರಂಭಗಳಿಗೆ ಮುಖ್ಯಮಂತ್ರಿಗಳನ್ನು ಕರೆಸಬೇಕೆಂದು ಮಹಾದಾಸೆ. ಆದರೆ ಬರಬೇಕಲ್ಲ. ನಮ್ಮೂರು ರಾಜ್ಯದ ಗಡಿಪ್ರದೇಶ.

● ಮಧು, ಚಾಮರಾಜನಗರ

ತಮಿಳುನಾಡು ಮುದುಮಲೈ – ಹೀಗೆ.

ಮೈಸೂರು ಜಿಲ್ಲೆಯ ಗುಂಡ್ಲು ಪೇಟೆಯನ್ನು ದಾಟಿದರೆ ಉದಕಮಂಡಲದವರೆಗೂ ಕಣ್ಮನಗಳನ್ನು ಸೂರೆಗೊಳ್ಳುವ ಹಸಿರು ರಾಶಿ, ಬೆಟ್ಟ ಸಾಲು, ಪೂರ್ವ, ಪಶ್ಚಿಮಗಳಲ್ಲಿಯೂ ಹಾಗೆಯೇ. ಭಾರತದಲ್ಲಿಯೇ ಹೆಚ್ಚು ಆನೆಗಳು ಇರುವುದು ಈ ಭಾಗಗಳಲ್ಲಿಯೇ. ಆನೆಗಳನ್ನು ಬೀಳಿಸುವ ಹಿಡಿಯುವ ಖೆಡ್ಡಾ ಕಾರ್ಯಕ್ರಮಗಳು ನಡೆಯುತ್ತ ಇದ್ದುದು ಈ ಕಾಡುಗಳಲ್ಲಿಯೇ. ಮಾಸ್ತಿಯವರ ಪ್ರಸಿದ್ಧ ಕಾಕನಕೋಟೆ ನಾಟಕ ಇಲ್ಲಿನ ಕಾಡಿನ ಕಥೆಯೊಂದಿಗೇ ಪ್ರಾರಂಭವಾಗಿದೆ. ಶ್ರೀಗಂಧ ಮುಂತಾದ ಅರಣ್ಯ ಸಂಪತ್ತಿನಿಂದ ಹೇರಳ ಲಾಭವೂ ಸರಕಾರಕ್ಕೆ ಸಿಗುತ್ತದೆ.

ಮೈಸೂರು ಎಂದರೆ ಸಾಕು. ಶ್ರೀಗಂಧದ ಪರಿಮಳ, ರೇಷ್ಮೆಯ ಮಿರಿಮಿರಿ, ಪ್ರಸಿದ್ಧ ಅಲ್ಲವೇ?

ಮೈಸೂರಿನಿಂದ ಊಟಿಗೆ ಹೋಗುವ ಮಾರ್ಗದಲ್ಲಿ, ಎಂಬತ್ತು ಕಿಲೋ ಮೀಟರ್‌ಗಳ ದೂರದಲ್ಲಿ ಬಂಡೀಪುರ ಇದೆ. ಇದು ಪ್ರಸಿದ್ಧ ವನ್ಯಮೃಗ ಸಂರಕ್ಷಣಾಧಾಮ. ಚೆಲುವಿನ ತಾಣವಾದ ಇಲ್ಲಿನ ಕಾಡಿನೊಳಗೆ ಸುತ್ತಾಡಿ ಬರಲು ಫಾರೆಸ್ಟ್ ಇಲಾಖೆಯವರು ಸೌಲಭ್ಯಗಳನ್ನು ಮಾಡಿದ್ದಾರೆ. ಬಂಡೀಪುರದ ಕಾಡಿನ ಚೆಲುವನ್ನು ನೋಡದವನ ಬಾಳು ವ್ಯರ್ಥ ಎನ್ನುವ ಹಾಗೆ ಇಲ್ಲಿನ ವನಸಿರಿಯ ಬೆಡಗು; ಸಂಪತ್ತು.

ಬಂಡೀಪುರದಿಂದ ಇನ್ನೂ ಈ ಕಡೆ ಹಂಗಳ ಎನ್ನುವ ಹಳ್ಳಿಯ ಬಳಿ ಹಿಮವತ್ ಗೋಪಾಲಸ್ವಾಮಿ ಬೆಟ್ಟ ಇದೆ. ಇದೂ ಸುಂದರ ತಾಣ. ಆದರೆ ಇಲ್ಲಿಗೆ ಹೋಗಿ ಬರಲು ಸೌಲಭ್ಯಗಳೇ ಇಲ್ಲ.

ಬಿಳಿಗಿರಿ ರಂಗನ ಬೆಟ್ಟ ಮೈಸೂರಿನಿಂದ ನೂರಹತ್ತು ಕಿಲೋಮೀಟರ್‌ಗಳು. ಈ ಬೆಟ್ಟದ ನೆತ್ತಿಯ ಮೇಲೆ ಶ್ರೀರಂಗನಾಥನ ದೇಗುಲ. ಬಿಳಿಗಿರಿ ರಂಗಯ್ಯನ ಮೇಲೆ ಸುಂದರವಾದ ಕಥೆಗಳು ಹೆಣೆದುಕೊಂಡಿವೆ. ಇವುಗಳನ್ನು ಕೇಳುವುದೇ ಒಂದು ಚೆನ್ನ.

ಮೈಸೂರು ಅರಮನೆ

ಫೋಟೋ: ಬಿ. ವಿಶ್ವನಾಥ್



ಈ ಭಾಗ ಮತ್ತು ನೀಲಗಿರಿ ಜಿಲ್ಲೆಯಲ್ಲಿ ವಾಸಿಸುವ ಇಲ್ಲಿನ ಮೂಲನಿವಾಸಿಗಳಾದ ಸೋಲಿಗರಿಗೆ ಬಿಳಿಗಿರಿ ರಂಗಯ್ಯ ಭಾವಯ್ಯ ನಂತೆ. ಎಂದರೆ ಸೋಲಿಗರ ಒಂದು ಹೆಣ್ಣನ್ನು ಈ ಬಿಳಿಗಿರಿ ರಂಗ ಮದುವೆಯಾಗಿದ್ದ. ಯಾವುದೋ ಒಂದು ಸಂದರ್ಭದಲ್ಲಿ ಸೋಲಿಗರಿಗೆ ಕಷ್ಟ ಒದಗಿಬಂದಾಗ ಈ ದೇವರು ರಂಗಯ್ಯ ಆನೆಯ ರೂಪವನ್ನು ತಾಳಿ ಅವರನ್ನು ರಕ್ಷಿಸಿದ.

ಹೀಗೆ, ಇಂಥ, ಹಲವು ಕಥೆಗಳು.

ಬಿಳಿಗಿರಿ ರಂಗನ ಬೆಟ್ಟ ಸಮುದ್ರ ಮಟ್ಟದಿಂದ 5091 ಅಡಿಗಳ ಎತ್ತರದಲ್ಲಿ ಇದೆ. ಸುಂದರ ಗಿರಿಧಾಮ. ಸರಿಯಾದ ರೀತಿಯಲ್ಲಿ ವ್ಯವಸ್ಥೆ ಮಾಡಿದರೆ ಇದು ನಮ್ಮ ನಾಡಿನ ಅತ್ಯಂತ ಶ್ರೇಷ್ಠ ಪ್ರವಾಸೀ ತಾಣಗಳ ಸಾಲಿನಲ್ಲಿ ನಿಲ್ಲುತ್ತದೆ.

ರಂಗಯ್ಯನ ಬೆಟ್ಟದಿಂದ ಇನ್ನೂ ಪೂರ್ವಕ್ಕೆ ಕೊಳ್ಳೇಗಾಲ ತಾಲೂಕಿನಲ್ಲಿ ದುರ್ಗಮವಾದ ಮಲೆ ಮಹದೇಶ್ವರ ಬೆಟ್ಟ ಸಾಲು. ಶಿವರಾತ್ರಿಯಲ್ಲಿ ಇಲ್ಲಿ ನಡೆಯುವ ಜಾತ್ರೆ ಪ್ರಸಿದ್ಧ. ಮಹದೇಶ್ವರನೂ ಬಿಳಿಗಿರಿ ರಂಗನ ಹಾಗೆಯೇ ಬೆಟ್ಟದ ಮೇಲೆ ನೆಲೆಸಿರುವ ಹಲವು ಕಥೆಗಳ ಪವಾಡಗಳ ದೇವರು. ಇಲ್ಲಿನ ಕಾಡುಕಾಡಿನ ನಡುವೆ ಕಾಡಿನ ಬಂಡೆಗಲ್ಲುಗಳು ಪ್ರತಿಧ್ವನಿಸುವ ಹಾಗೆ ಭಕ್ತರು ಕಂಸಾಳೆ ಬಡಿಯುತ್ತ ಸಾಗುವುದನ್ನು ನೋಡುವುದೇ ಒಂದು ಅಪೂರ್ವ ನೋಟ.

ಹಾಂ, ಇಂಥ ಚೆಲುವಿನ ನಡುವೆ ಈಗ ಬಂದೂಕಿನ ಗುಂಡುಗಳೂ ಆಗಾಗ್ಗೆ ಸಿಡಿದು ರಕ್ತದೋಕುಳಿ ಆಗುತ್ತ ಇದೆ.

ಈ ಕಾಡುಗಳಲ್ಲಿಯೆ ಈಗ ಅಡಗಿರುವ ದಂತಚೋರ ಆನೆಗಳ ಕಟುವೈರಿ ವೀರಪ್ಪನ್ ಎಲ್ಲರ ಎದೆ ನಡುಗಿಸುತ್ತ ಇದ್ದಾನೆ. ಇಲ್ಲಿನ ಬೆಟ್ಟ ಸಾಲುಗಳೂ ದಟ್ಟ ಅರಣ್ಯವೂ ಅವನಿಗೆ ಕೋಟೆಯಾಗಿ ರಕ್ಷಣೆ ಒದಗಿಸಿವೆ. ಈ ಅರಣ್ಯ ಪ್ರದೇಶಗಳನ್ನು ಸುತ್ತಾಡಿ ಬರಲು ಮೇ ನಿಂದ ನವಂಬರ್ ಒಳ್ಳೆಯ ಕಾಲ.

ಒಟ್ಟಿನ ಮೇಲೆ ಮೈಸೂರು ಜಿಲ್ಲೆ ಪ್ರಕೃತಿಯ ರಮಣೀಯ ತೆಕ್ಕೆಯಲ್ಲಿ ಇದೆ. ಎಷ್ಟು ಸವಿದರೂ ಸವಿಯುತ್ತಲೇ ಇರಬೇಕು ಎನ್ನುವಂಥ ಅನುಭವ.

ಮೈಸೂರಿಗೆ ಭೇಟಿ ಕೊಡುವ ಹೊರನಾಡಿನವರು ಬಂಡೀಪುರ, ಮಲೆ ಮಹದೇಶ್ವರ ಮತ್ತು ಬಿಳಿಗಿರಿ ರಂಗನ ಬೆಟ್ಟಗಳಿಗೆ ಹೋಗದಿದ್ದರೆ ಅವರ ಪ್ರವಾಸ ವ್ಯರ್ಥವಾದಂತೆ; ಚೆಲುವನ್ನು ಕಳೆದುಕೊಂಡಂತೆಯೇ.

ಪ್ರಾಕೃತಿಕ ದೃಶ್ಯ ಸೌಂದರ್ಯಗಳನ್ನು ಸವಿಯುವವರಿಗೆ ಮೈಸೂರಿನ ಅರಮನೆ ಮತ್ತು ಬೃಂದಾವನಗಳನ್ನು ನೋಡಿ ಸವಿಯುವುದಕ್ಕಿಂತಲೂ ಹೆಚ್ಚು ಈ ಜಿಲ್ಲೆಯ ಅರಣ್ಯ ಪ್ರದೇಶಗಳಲ್ಲಿ ಸುತ್ತಾಡಿ ಬರುವುದು ಒಂದು ಅಪೂರ್ವ, ಅರ್ಥವತ್ತಾದ ಹಾಗೂ ಹಿತವಾದ ಅನುಭವ. ಅನೇಕ ಹೊಸ ವಿಷಯಗಳನ್ನು ತಿಳಿದುಕೊಳ್ಳುವ ಗಾಢ ಅನುಭವ ಖಂಡಿತ ಉಂಟಾಗುತ್ತದೆ. ●

ದೀಪಾಲಂಕಾರದ ಮೈಸೂರು ಅರಮನೆ ಫೋಟೋ: ಬಿ. ವಿಶ್ವನಾಥ್



# ಚಿತ್ರಕವನ ಸ್ಪರ್ಧೆ – 111



ಫೋಟೋ : ಯಜ್ಞ, ಮಂಗಳೂರು
ಕವನಗಳನ್ನು ಸ್ವೀಕರಿಸುವ ಅಂತಿಮ ದಿನಾಂಕ : **6-10-1992**

# ಮೈಸೂರು, ಸಾರ್, ಮೈಸೂರು !

● ಎ. ಎನ್. ವಿಶ್ವನಾಥ್

'ಲೇ ಕಾಗದ ಬಂದಿದೆ. ಮೈಸೂರಿಗರ ಮೇಲೆ ಒಂದು ಲೇಖನ ಬರೆದು ಕೊಡಬೇಕಂತೆ' ಎಂದು ಹೆಂಡತಿಗೆ ಕೂಗಿ ಹೇಳಿದೆ.

'ಏನ್ರೀ ಒಪ್ಪಿಕೊಂಡಿರಾ ?'

'ಹುಂ'

'ಸರಿಯಾಯಿತು. ಮೈಸೂರಿನವ್ರು ಯಾರ್‍ರಿ ದಾರೆ ಈಗ ಬರೆಯೋಕ್ಕೆ, ನಿಮಗೆ ಗೊತ್ತಾ ಗೋದೇ ಇಲ್ಲ' ಎಂದಳು.

'ಏನೇ ನೀನು ಹೇಳೋದು ? ಕನ್ನಡ ಮಾತನಾಡಿಕೊಂಡು ಇಲ್ಲೇ ತಳ ಊರಿರೋರು ಮೈಸೂರಿಗರು ಅಲ್ವಾ' ಎಂದೆ.

'ಹೌದು ಅವರೇ ಯಾರಿದಾರೇ ಹೇಳಿ. ಬ್ಯಾಂಕು, ಹೊಟೇಲಿನವರು ಮಂಗಳೂರಿ ನವರು; ವ್ಯಾಪಾರದವರೆಲ್ಲಾ ಶೆಟ್ಟರು; ಕಂಟ್ರಾಕ್ಟರ್‌ಗಳು ರೆಡ್ಡಿಗಳು; ಬಡಗಿಗಳು, ಗಾರೆ ಕೆಲಸದವರು, ಕ್ಷೌರಿಕರು, ಕಾರ್ಮಿಕ ವರ್ಗದವರು ತಮಿಳರು; ಸಾಲ ಕೊಡುವವರು ಮಾರ್ವಾಡಿಗಳು; ಬಟ್ಟೆ ಹೊಲಿದು ಕೊಡೋವ್ರು ಮರಾಠಿಗಳು, ಕಡೆಗೆ ಪುರೋಹಿತರುಗಳು ಕೂಡ ನೆರೆಭಾಷೆಯವರು. ಮೈಸೂರಿಗಳು ಯಾರ್‍ರೀ ಇದಾರೆ' ಎಂದು ಛಾಲೆಂಜ್ ಮಾಡಿದಳು. ಒಂದು ಕ್ಷಣ ಹೆದರಿಕೆಯಾಯಿತು. ಮೊನ್ನೆ ವೇದಾಂತ ಪ್ರವಚನಕ್ಕೆ ಹೋಗಿದ್ದು ನೆರವಿಗೆ ಬಂತು. ನೇತಿ ನೇತಿ ಎಂದು ಎಲ್ಲವನ್ನು ನಿರಾಕರಿಸಿದ ಮೇಲೆ ಉಳಿಯುವನೇ ಆತ್ಮನು ಎಂದು ವಿವರಿಸಿ ದ್ದರು. ಹಾಗೆ ಮೇಲಿನ ಪಟ್ಟಿಯಲ್ಲಿರುವವ ರನ್ನು ತೆಗೆದುಹಾಕಿದ ಮೇಲೆ ಉಳಿಯುವ ಕನ್ನಡಿಗರೇ ಮೈಸೂರಿಗರು. ಹೀಗೆ ಮೈಸೂರಿಗ

ಕ್ಲಾಕ್ ಟವರ್, ಮೈಸೂರು

ಫೋಟೋ: ಪ್ರಗತಿ ಗೋಪಾಲಕೃಷ್ಣ



ರನ್ನು ನಿರ್ವಚನ ಮಾಡೋದು ಸ್ವಲ್ಪ ಕಷ್ಟದ ಕೆಲಸವೇ ಸ್ವಾಮಿ; ಏಕೆಂದರೆ ಕರಾವಳಿ ಕರ್ನಾಟಕ ಮತ್ತು ಉತ್ತರ ಕರ್ನಾಟಕದವರನ್ನು ಬಿಟ್ಟರೆ ಮಿಕ್ಕಿದವರೆಲ್ಲ ಮೈಸೂರು ಪ್ರಾಂತ್ಯದವರೇ ಎಂಬ ಸಾಮಾನ್ಯ ಅಭಿಪ್ರಾಯ ಪ್ರಚಲಿತದಲ್ಲಿದೆ. ಇದರಲ್ಲಿ ಮತ್ತೆ ಮೈಸೂರಿನವರನ್ನು ಪ್ರತ್ಯೇಕಿಸುವುದು ಬಹು ಕಷ್ಟ. ಇದಕ್ಕೆ ನನ್ನದೇ ಆದ ಒಂದು ಮಾರ್ಗವಿದೆ. ಯಾವ ಜನ ಎಲ್ಲೇ ಹೋಗಲಿ ತಮ್ಮ ತಮ್ಮ ನಾಲಿಗೆ ರುಚಿಗೆ ಮಾತ್ರ ಅನ್ಯಾಯ ಮಾಡಲಾರರು. ಚಂದ್ರಲೋಕದಲ್ಲೂ ಇಡ್ಲಿ ಸಾಂಬಾರ್‌ಗೆ ಪರದಾಡುವವನು ಖಂಡಿತ ದಕ್ಷಿಣ ಭಾರತದವನೇ ಎಂದು ಗುರುತಿಸುವುದಿಲ್ಲವೇ. ಹಾಗೆಯೇ ಮೈಸೂರಿನವರು. ನಮ್ಮ ಪರಿಚಯದವರೊಬ್ಬರಿಗೆ ಉಡುಪಿಗೆ ವರ್ಗವಾಯಿತಂತೆ. ಎಂದಿನಂತೆ ದಿನಸಿ ಸಾಮಾನಿನ ಪಟ್ಟಿ ಹಾಕಿ ಕಮ್ತಿಯವರ ಅಂಗಡಿಗೆ ಕೊಟ್ಟು ಅರ್ಧ ಘಂಟೆಯ ನಂತರ ಸಾಮಾನು ತರಲಿಕ್ಕೆ ಹೋದರಂತೆ. ಅವರನ್ನು ಕಂಡ ಕೂಡಲೆ ಕಮ್ತಿಯವರು ಸಾಮಾನು ಕೊಡುತ್ತಾ ''ಅಮ್ಮಾ, ನೀವು ಮೈಸೂರು ಕಡೆಯವರಲ್ಲವಾ, ಯಾವಾಗ ಬಂದದ್ದು, ಯಜಮಾನರಿಗೆ ಕೆಲಸ ಎಲ್ಲಾಯಿತು?'' ಎಂದರಂತೆ.

''ಹೌದು, ನಿಮಗೆ ಹೇಗೆ ಗೊತ್ತಾಯಿತು?'' ಎಂದು ಕೇಳಿದ್ದಕ್ಕೆ ಕಮ್ತಿಯವರು ನಸುನಗುತ್ತಾ ''ಇಲ್ಲಿ ನೋಡಿ ಅಮ್ಮಾ ಏನುಂಟು ಅಂತ, ತೊಗರಿಬೇಳೆ 5 ಕೆ.ಜಿ., ಕಡ್ಲೆಕಾಯಿ ಎಣ್ಣೆ 3 ಲೀಟರ್, ಕೊಬ್ಬರಿ 1 ಕೆ.ಜಿ.'' ಎಂದು ಹೇಳಿದರಂತೆ. ಅಂದರೆ ಗೊತ್ತಾಯಿತಲ್ವೇ ಮೈಸೂರಿಗರು ಯಾರು ಅಂತ. ರೇಟು ಎಷ್ಟೇ ಆಗಲಿ, ಹುಳಿತೊವ್ವೆ, ಮಜ್ಜಿಗೆಹುಳಿ, ಚಟ್ನೀಪುಡಿ, ಕರಿದ ತಿಂಡಿಗಳನ್ನು ಆಸೆಪಟ್ಟು ತಿನ್ನುವವರೇ ಮೈಸೂರಿಗರು! ಅಚ್ಚ ಮೈಸೂರಿಗ ಅಶ್ವಥರ ಲಲಿತಾತಿಥ್ಯವನ್ನು ಅನುಭವಿಸಿದವರಿಗೆ ಮೈಸೂರಿನವರ ಬಾಯಿಚಪಲದ ಬಗ್ಗೆ ಸಾಕಷ್ಟು ಪರಿಚಯವಿರುವುದರಿಂದ ಅದರ ಬಗ್ಗೆ ಹೆಚ್ಚಿಗೆ ಹೇಳಿ ಬೋರ್ ಮಾಡುವುದಿಲ್ಲ.

ನಮ್ಮ ಜಿಲ್ಲೆಯವರ ವೈಶಿಷ್ಟ್ಯತೆ ಎಂದರೆ ಮಾತು. ಮೈಸೂರಿನವರು ಮಾತಿನಮಲ್ಲರು.

**ಮೈಸೂರಿನಲ್ಲಿ ಮೈಸೂರಿಗರು ಎನ್ನುವವರು ಯಾರಿದ್ದಾರೆ, ಅವರದ್ದು ಎನ್ನುವುದು ಏನು ಉಳಿದಿದೆ? ಎನ್ನುವವರಿಗೆ 'ಮೈಸೂರುತನ'ದ ಬಗ್ಗೆ ಒಂದು ಕಿರು(ಡಿ)ನೋಟ.**

ಹರಟೆಪ್ರಿಯರು. ಊಟವಿಲ್ಲದೆ ಇದ್ದಾರು ಮಾತಿಲ್ಲದೆ ಇರರು. ಅವರದು ರಾಜಗಾಂಭೀರ್ಯದ ಭಾಷೆಯೂ ಅಲ್ಲ ಗಡಸಿನ ಗಂಡುಭಾಷೆಯೂ ಅಲ್ಲ. ಅದು ನಯವಾದ ಇಂಗ್ಲಿಷ್ ಮಿಕ್ಸ್ ಆದ ಪ್ಯೂರ್ ಕನ್ನಡ. ಬಯಲು ನಿನ್ನೊಳಗೋ ನೀನು ಬಯಲೊಳಗೋ ಎಂಬ ದಾಸರಪದದಂತೆ ಕನ್ನಡ ಮಿಶ್ರವಾದ ಇಂಗ್ಲಿಷೋ ಅಥವಾ ಇಂಗ್ಲಿಷ್ ಮಿಶ್ರವಾದ ಕನ್ನಡವೋ ಎಂಬ ಕನ್‌ಫ್ಯೂಸ್ ಮಾಡುವ ಶೈಲಿ. ತಾವು ಹೋದಕಡೆ ಬೇಕಾದ ವಿಷಯ ಬೇಡವಾದ ವಿಷಯ ಎಲ್ಲವನ್ನು ಸೇರಿಸಿಕೊಂಡು ಸಮೃದ್ಧವಾಗಿ ಮಾತನಾಡುವರು. ಮಿತಭಾಷಿಗಳು ಸ್ವಲ್ಪ ಅಪರೂಪವೇ– ''ಮೊನ್ನೆ ಕಮಲಮ್ಮನವರ ಮನೆಗೆ ಹೋಗಿದ್ದೆ ಕಣ್ರೀ, ಅವಳ ಸೊಸೆನೂ ಮಾತನಾಡಿಸಿದೆ. ಅದೇನು ಬಿಂಕ ಬಿಗುಮಾನ ಜಂಭ ಅಂತೀರಾ, ಮಾತಾಡಿದರೆ ಮುತ್ತು ಸುರಿಯುತ್ತೇನೋ ಅನ್ನೋ ಹಾಗೆ ಆಡ್ತಾಳ್ರೀ. ಇಲ್ಲ, ಹೌದು ಎರಡೇ ಮಾತು. ಮಾತಾಡಕ್ಕೇನು ದುಡ್ಡು ಕೊಡಬೇಕಾ. ನಂಗಂತೂ ಸರಿಬರಲಿಲ್ಲ, ಬಂದ್ಬಿಟ್ಟೆ ಕಂಡ್ರೀ'' ಎನ್ನುವ ಲಲನಾಮಣಿಯರು ಹೇರಳವಾಗಿ ದೊರೆಯುತ್ತಾರೆ. ಮೊನ್ನೆ ತುಷಾರ ಓದುತ್ತಿದ್ದಾಗ ನನ್ನ ಹೆಂಡತಿ ಹೇಳಿದಳು– 'ರ್ರೀ, ಸ್ಟೌವ್ ಮೇಲೆ ಹಾಲಿಟ್ಟಿದ್ದೀನಿ. ಹೆಪ್ಪಿಗೆ ಹಾಲು ಇಸ್ಕೊಂಡು ಒಂದೇ ನಿಮಿಷದಲ್ಲಿ ಬರ್ತೀನಿ'

ಎನ್ನುತ್ತಾ ಪಕ್ಕದ ಮನೆ ಸಾವಿತ್ರಮ್ಮನ ಮನೆಗೆ ಹೋದಳು. ನಿಮಿಷಗಳು ಕಳೆದವು. ಸ್ವಲ್ಪ ಹೊತ್ತಿನ ನಂತರ ಸೀದ ವಾಸನೆ ಹೊಡೆಯಿತು. ನೋಡುತ್ತೇನೆ ಹಾಲು ಇಂಗಿಹೋಗಿ ಪಾತ್ರೆ ತಳಕಟ್ಟಿದೆ. ಅಲ್ಲಿಂದಲೇ ಕೂಗಿದೆ. ನಿಧಾನ ವಾಗಿ ನಡೆದುಬಂದಳು. 'ಏನ್ರೀ ನಿಮ್ಮದು ರಾಮಾಯಣ, ಒಂದ್ನಿಮಿಷ ಕೂಡ ಮಾತಾ ಡಕ್ಕೆ ಬಿಡಲ್ಲ'. 'ನೋಡು ಏನಾಗಿದೆ ಅನ್ಯಾಯ ವಾಗಿ ಹಾಲು ವೇಸ್ಟಾಯಿತು' ಎಂದೆ.

'ಅಷ್ಟೇನಾ ಬಿಡ್ರೀ, ಸಾವಿತ್ರಮ್ಮನ ಭಾವನ ನಾದಿನಿ ತಂಗಿ ಪದ್ಮಾ ಬಂದಿದ್ದಾಳೆ. ಕಷ್ಟ ಸುಖ ಹೇಳಿಕೊಳ್ಳುತ್ತಿದ್ದಳು. ಹಾಲು ಮತ್ತೆ ಅಂಗಡಿ ಯಿಂದ ತರಬಹುದು. ಮತ್ತೆ ಅವಳು ಸಿಕ್ತಾಳೇನ್ರೀ?' ಎಂದು ಸಮರ್ಥಿಸಿ ಕೊಂಡಳು. ಹೀಗೆ ಮಾತಿನವರಸೆ. ಈ ಮಾತಿನ ಅನುಭವದಿಂದಲೇ ಇರಬೇಕು – ಹರಟೆ / ಲಘುಬರಹಗಳು / ಸಾಂಸಾರಿಕ ಕಾದಂಬರಿ ಗಳು ಸಂಖ್ಯಾದೃಷ್ಟಿಯಿಂದ ಮೈಸೂರು ಪ್ರಾಂತ್ಯದವರದೇ ಹೆಚ್ಚಿರಬೇಕೆಂದು ನನ್ನ ಬಲವಾದ ಊಹೆ.

ಮೈಸೂರು ಅನೇಕ ಪದಗಳ ಜೊತೆ ಹಾಸುಹೊಕ್ಕಾಗಿಬಿಟ್ಟಿದೆ. ಮೈಸೂರುಪಾಕು, ಮೈಸೂರುಪೇಟ, ಮೈಸೂರುಟಾಂಗಾ, ಮೈಸೂರುಮಲ್ಲಿಗೆ ಇತ್ಯಾದಿ... ಈಗ ಮೈಸೂರುಪೇಟವನ್ನು ಮದುವೆ ಸಮಾರಂಭ ದಲ್ಲಿ ಬಿಟ್ಟು ಉಳಿದ ಕಡೆ ನೋಡುವುದು ಅಪರೂಪವೇ ಆಗಿಬಿಟ್ಟಿದೆ. ಪೇಟಕಟ್ಟುವುದು ಒಂದು ಕಲೆ. ತಲೆನೋಡಿ ಕಟ್ಟಬೇಕು. ಕಳೆದ ವರುಷ ಒಂದು ಮದುವೆಗೆ ಹೋಗಿದ್ದೆ. ಮುಂಚೆಯೇ ವರನಿಗೆಂದು ತಜ್ಞರ ಹತ್ತಿರ ಪೇಟ ಕಟ್ಟಿಸಿ ಸಿದ್ಧವಾಗಿಟ್ಟುಕೊಂಡಿದ್ದರು. ಮಕ್ಕಳ ಚೇಷ್ಟೆ ಗಲಾಟೆಯಲ್ಲಿ ಪೇಟ ಬಿಚ್ಚಿಹೋಯಿತು. ಪೇಟ ಕಟ್ಟುವವರೇ ಇರಲಿಲ್ಲ. ಇದ್ದವರು ಹೇಗೋ ಏನೋ ಮಾಡಿ ವರನ ತಲೆಯ ಮೇಲಿಟ್ಟರು. ಆದರೆ ಅದು ಪೇಟವಾಗಿರಲಿಲ್ಲ ರುಮಾಲಾಗಿತ್ತು ಅಷ್ಟೇ. ಅಭ್ಯಾಸವಾದವರಿಗೆ ತಲೆಯ ಮೇಲೆ ಪೇಟವಿಲ್ಲದಿದ್ದರೆ ತಲೆಯೆಲ್ಲ ಖಾಲಿಯಾದ ಅನುಭವವಾಗುತ್ತದಂತೆ. ಮೈಸೂರು ಪೇಟಕ್ಕೆ ಅಂತರರಾಷ್ಟ್ರೀಯ ಮಾನ್ಯತೆ ದೊರಕಿಸಿ ಕೊಟ್ಟ ಸಿ. ವಿ. ರಾಮನ್, ಎಸ್. ರಾಧಾಕೃಷ್ಣನ್ ಅವರು ಅಪ್ಪಟ ಮೈಸೂರಿಗರಲ್ಲವೆನ್ನುವುದು ಬೇರೆ ಮಾತು. ಪೇಟವಿಲ್ಲದೆ ಅವರನ್ನು ನೀವು ಗುರ್ತಿಸಿದರೆ ನನ್ನಾಣೆ!

ಮೈಸೂರುಮಲ್ಲಿಗೆ ಬಹುಕಾಲದಿಂದಲೂ ನಲ್ಲನಲ್ಲೆಯರನ್ನು ಬಂಧಿಸುವ ಕಂಪಿನ ಮಾಲೆ ಯಾಗಿ ಇನ್ನೂ ಉಳಿದಿದೆ. ಗಂಡ ಹೆಂಡಿರ ಜಗಳ ಉಂಡು ಮಲಗುವ ತನಕ ಎನ್ನೋದು ಹಳೇ ಗಾದೆ. ಬೆಳಿಗ್ಗೆ ಎದ್ದ ನಂತರ ಪ್ರಾರಂಭವಾಗುವ ಜಗಳಕ್ಕೆ ಮದ್ದೇನು ಗೊತ್ತೆ? ಸಾಯಂಕಾಲ ಆಫೀಸಿನಿಂದ ಮನೆಗೆ ಹೋಗುವಾಗ ಒಂದು ಮಾರು ಮಲ್ಲಿಗೆ ಒಯ್ಯಿರಿ. (ಈ ಉಪಾಯವನ್ನು ನಾನು ಬಳಸಿ ಯಶಸ್ವಿಯಾಗಿದ್ದೇನೆಂದು ತಿಳಿಸಲು ಹರ್ಷಿಸುತ್ತೇನೆ.) ಅದು ಮುಡಿ ಯೊಂದಿಗೆ ಮನಸ್ಸನ್ನು ಎಷ್ಟು ಆಹ್ಲಾದ ಗೊಳಿಸುತ್ತೆಂಬುದನ್ನು ನೀವೆ ತಿಳಿಯುವಿರಿ. ಆದರೆ ಎಚ್ಚರ – ಅದು ಅಪ್ಪಟ ಮಲ್ಲಿಗೆಯೇ ಆಗಿರಬೇಕು. ಕಳೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಕೆ. ಎಸ್. ನರಸಿಂಹಸ್ವಾಮಿ ಯವರನ್ನು ಕರೆದೊಯ್ದ ಜೀಪನ್ನು ಅಲಂಕರಿಸಿದ್ದು ಬಹುಪಾಲು ಮೈಸೂರು ಮಲ್ಲಿಗೆಯಲ್ಲವೆನ್ನುವುದು ಕೆಲವರಿಗೇ ತಿಳಿದ ವಿಷಯ.

ಚಿಗುರು ವೀಳ್ಯದೆಲೆ ಮೈಸೂರಿನ ರಸಿಕರಿಗೆ ಪ್ರಿಯವಾದ ಇನ್ನೊಂದು ಐಟಂ. 'ಸ್ವಾದ್' ತಿಂದು ಊಟವನ್ನು ಜೀರ್ಣಿಸಿಕೊಳ್ಳುವವರಿಗೆ ಇದರ ಸವಿ ದುರ್ಲಭವೇ. ಹಿಂದೆ ಮದುವೆಯ ಸಮಾರಂಭಗಳಲ್ಲಿ ಊಟವಾದ ನಂತರ.ಯಾರು ಹೆಚ್ಚು ವೀಳ್ಯದೆಲೆ ತಿನ್ನುವರೆಂಬ ವಿಷಯದಲ್ಲಿ ಸ್ಪರ್ಧೆಯಾಗುತ್ತಿದ್ದು ಸೊಪ್ಪು ತಿನ್ನುವ ಆಡನ್ನು ಮೀರಿಸುತ್ತಿದ್ದರಂತೆ. 'ಗಂಧದ ನಾಡಿದು ಮೈಸೂರು... ' ಎಂದು ಕವಿಗಳು ಹಿಂದೆಯೇ ಹಾಡಿ(ಬಿಟ್ಟಿ)ದ್ದಾರೆ. ಈ ಗಂಧದ ನಾಡು ಈಗ ಗಂಧದ ಚೋರರ ನಾಡಾಗಿದೆ. ಈ ನಾಡಿಗೆ ಸೇರಿದವರು ಎಂದು ನೆನಪಿಸಿಕೊಳ್ಳಲು ನಮ್ಮ ಮನೆಯಲ್ಲೂ ಗಂಧ ತೇಯುವ ಒಂದು ಚಕ್ಕೆ ಇದೆ.

ಮೈಸೂರು ಟಾಂಗಾ ನೋಡಬೇಕೆ? ಆಟೋ ಮುಷ್ಕರದ ದಿವಸ ಮೈಸೂರಿಗೆ ಬನ್ನಿ. ಟಕಟಕ ಶಬ್ದ ಮಾಡುವ ವಾಯುಮಾಲಿನ್ಯ ಮಾಡದ ಟಾಂಗಾಗಳು ಅಪರೂಪದ ಆಕರ್ಷಣೆಯಾಗಿ ಬೀದಿಗಿಳಿಯುತ್ತವೆ. ಬುಡೇನ್‌ಸಾಬಿ 'ಏನು ಮಾಡಕ್ಕಾಯ್ತದೇ ಸಾಬ್ ಮನ್ಸಾನೇ ಹುಲ್ಲು ಹುರುಳಿ ತಿನ್ನೋ ಕಾಲ ಬಂಧ್ಬಿಡ್ತು, ಕುದುರೆಗೇನ್ಮಾಡೋದು' ಎನ್ನುತ್ತಾ ಹತ್ತಿಸಿಕೊಳ್ಳುತ್ತಾನೆ. ಇದು ಶ್ರೀಸಾಮಾನ್ಯನ ಒಂದು ಕುದುರೆಯ ಸಾರೋಟು.

ಇನ್ನು ಮೈಸೂರಿಗರ ಹೆಸರುಗಳೋ. ಹೆಸರು ಕೇಳಿದರೆ ಹೆಸರನ್ನೇ ಹೇಳುವರು. ಊರಿನ ಹೆಸರು, ಕುಲಕಸಬುಗಳನ್ನೆಲ್ಲಾ ಇನಿಷಿಯಲ್ಸ್‌ಗಳಲ್ಲಿ ಅಡಗಿಸುವರು. ತಗಡೂರು ಬೆಲ್ಲದ ರಾಮಪ್ಪ ಟಿ. ಬಿ. ರಾಮಪ್ಪನೇ ಆಗುವನು. ಇದು ಟಿ. ಆರ್. ಬೆಲ್ಲದ ಎಂದಾಗಲಿ, ಬಿ. ಆರ್. ತಗಡೂರ್‌ಕರ್ ಎಂದೇನೂ ಆಗುವುದಿಲ್ಲ. ಹಳ್ಳಿಗಳ ಕಡೆ ಮಾತ್ರ ಸ್ವಲ್ಪ ಗಲಿಬಿಲಿಯೇ ಆಗುವುದು. ತಾತನ ಹೆಸರು ಹನುಮಂತಪ್ಪ, ಮಗನೂ ಹನುಮಂತಪ್ಪ, ಮೊಮ್ಮಗನೂ ಹನುಮಂತಪ್ಪ. ನಿಮಗೆ ಬೇಕಾದ ಹನುಮಂತಪ್ಪನನ್ನು ಹುಡುಕಬೇಕಾದರೆ ಹುಷಾರಾಗಿರಿ ಎಂದೇ ನನ್ನ ಸಲಹೆ. ಮೈಸೂರು ಹಳ್ಳಿಗಳಿಗೆ ಹಾಕುವ ಪೋಸ್ಟ್‌ಮನ್‌ಗಳನ್ನು ಪರಮಾತ್ಮನೇ ಪಾರು ಮಾಡಬೇಕು.

'ಪಿಂಚಣಿದಾರರ ಸ್ವರ್ಗ' ಮೈಸೂರು ತನ್ನ ಶಾಂತತೆಯನ್ನು ಕಾಪಾಡಿಕೊಂಡಿದೆ. ಪಟ್ಟಣಗಳ ಗಜಿಬಿಜಿ ಅಷ್ಟಾಗಿ ಇಲ್ಲ. ರಾತ್ರಿ ಒಂಭತ್ತು ಘಂಟೆಗೆಲ್ಲ ನಿರ್ಜನವಾಗುವ ಸಯ್ಯಾಜಿರಾವ್ ರಸ್ತೆ ಪಟ್ಟಣಗಳ ಥ್ರಿಲ್ ಕೊಡುವುದಿಲ್ಲ. ಹಗಲು ಹೊತ್ತು ಕೆಂಪುಬಸ್ಸು ನಿಧಾನವಾಗೇ ಸಾಗುತ್ತದೆ. ಸಾವಧಾನದಿಂದ ಹತ್ತಿಳಿಯುವ ಪ್ರಯಾಣಿಕರು, ಮಂದಗತಿಯ ಕಂಡಕ್ಟರುಗಳನ್ನು ಕಂಡರೆ ನನ್ನ ಸ್ನೇಹಿತ 'ಇವ್ರನ್ನೆಲ್ಲ ಬೆಂಗಳೂರಿಗೆ ಆರು ತಿಂಗಳು ಟ್ರೈನಿಂಗ್‌ಗೆ ಕಳುಹಿಸಿ ಚುರುಕು ಮಾಡಬೇಕು' ಎಂದು ರೇಗಾಡುತ್ತಾನೆ.

ಮೈಸೂರಿನವರಿಗೆ ಕರ್ನಾಟಕ ಸಂಗೀತದ ಮೇಲೆ ಒಲವು. ಕರ್ನಾಟಕದ ಉಳಿದಭಾಗದಲ್ಲಿರುವ ಹಿಂದೂಸ್ಥಾನಿ ಸಂಗೀತಕ್ಕೆ ಈ ಜಿಲ್ಲೆಯಲ್ಲಿ ರಸಿಕರು ಕಡಿಮೆ. ದಸರಾ ಸಂಗೀತೋತ್ಸವದ ನಂತರ ಪರಿಸ್ಥಿತಿ ಸುಧಾರಿಸುತ್ತಿದೆ. ಕಲಾಪ್ರೇಮಿಗಳಾದ ಮೈಸೂರಿಗರು ವಿಶಾಲಮನೋಭಾವನೆಯಿಂದಾಗಿ ಜನಪ್ರಿಯರಾಗಿದ್ದಾರೆ. ಅಪಾಯವೆನ್ನಲೂಬಹುದಾದ ಅನ್ಯಭಾಷಾ ಸಹಿಷ್ಣುಗಳು. ಇದೇನು ದಸರಾ ಪ್ರಸ್ತಾಪವೇ ಇಲ್ಲವಲ್ಲ ಎಂದು ಹುಬ್ಬೇರಿಸಬೇಡಿ. ಉದ್ದೇಶಪೂರ್ವಕವಾಗಿ ಬಿಟ್ಟಿದ್ದೇನೆ. ಮೈಸೂರರಸರ ಹಿಂದಿನ ವೈಭವದ ಆಕರ್ಷಣೆ ಇಲ್ಲದಿದ್ದರೂ ವರ್ಣರಂಜಿತ ದೀಪಾಲಂಕಾರಗಳಿಂದ ಮನಸ್ಸನ್ನು ರಂಜಿಸುತ್ತದೆ. ದುರ್ದಶನದ ಮೂಲಕವೇ ದರ್ಶನಭಾಗ್ಯ ಪಡೆಯದೆ ನೀವೇ ಒಮ್ಮೆ ಪ್ರತ್ಯಕ್ಷವಾಗಿ ಬಂದು ನೋಡಿ ಅನುಭವಿಸಿ ಆನಂದಿಸಿರಿ. ಖಂಡಿತ ಬರುವಿರಲ್ಲವೇ? ●

## ಬಗೆಯ ಬೇಗೆ

**ಯಾರು ಲಗ್ಗೆ ಇಟ್ಟರು**
**ನನ್ನ ಅರಮನೆಗೆ**
**ಯಾರು ಕಿಚ್ಚನಿಟ್ಟರು**
**ನನ್ನ ಬಗೆಯೊಳಗೆ?**
**– ಪುಟದೇಳುವ ಈ ತುಡಿತ**
**ಹುಚ್ಚಲೆಗಳ ಹೊಡೆತ**
**ಸುಳಿಗಾಳಿಯ ಸೆಳೆತ**
**ನರನಾಡಿಗಳ ಅತಿ ಮಿಡಿತ**
**ಎದೆಯಾಳದ ನರಳಾಟ**
**ನಿದ್ದೆಗೆಟ್ಟ ಹೊರಳಾಟ**
**ಸಂಕಲೆ ಕಳಚುವ ಪರದಾಟ**
**ಮೈ ಮನ ಬಿಸಿ ಏರುವ**
**ಈ ಪರಿಪಾಠ**
**ಕಾಮದೇವನ ಚೆಲ್ಲಾಟ!**

**● ಪಾರ್ವತಿ ಸಂಜೀವನ**

ಅನಂತಯ್ಯನವರಿಗೆ ಸಂಭ್ರಮವೋ ಸಂಭ್ರಮ. ಗಿರಿಜೇಂದ್ರನಿಗೊಂದು ಅನುರೂಪಳಾದ ಹೆಣ್ಣನ್ನು ಹುಡುಕಿಕೊಟ್ಟರೆ, ತಾನು ಇಷ್ಟು ವರ್ಷಗಳಿಂದ ಮದುವೆ ದಳ್ಳಾಳಿ ಕೆಲಸ



ಮಾಡಿದ್ದಕ್ಕೂ ಸಾರ್ಥಕ. ಯಾವುದೋ ಬಾದರಾಯಣ ಸಂಬಂಧಿಯಾದ ಸಾಂಬಶಿವನ ಮಗ ಅಪರೂಪಕ್ಕೆ ತನ್ನನ್ನು ಜ್ಞಾಪಿಸಿಕೊಂಡು ಪತ್ರ ಬರೆದಿದ್ದಾನೆಂದರೆ ಅದೊಂದು ಸಾಮಾನ್ಯ ವಿಷಯವೇ? ಗಿರಿಜೇಂದ್ರ, ಅಹಮದಾಬಾದಿನ ಪ್ರತಿಷ್ಠಿತ ಕಂಪೆನಿಯೊಂದರಲ್ಲಿ ಇಂಜಿನಿಯರಾಗಿದ್ದಾನೆ. ಅವನ ತಂದೆ ಸಾಂಬಶಿವನೇನೂ ಕಡಿಮೆಯಿಲ್ಲ. ಅವನೂ ಡೆಲ್ಲಿಯಲ್ಲಿ ಚೀಫ್ ಇಂಜಿನಿಯರು. ಇಂತಹ ಹುಡುಗ ತನ್ನ ಮೇಲೆ ಗೌರವ, ನಂಬಿಕೆ ಇಟ್ಟು ಹೆಣ್ಣು ಹುಡುಕಿ ಕೊಡಲು ಬರೆದಿದ್ದಾನೆಂದರೆ? ಆದರೂ ಅದೇನು ವಿನಯ! ವಿಧೇಯತೆ! ಪತ್ರದ ಮೂಲಕವೇ ಗಿರಿ ಅನಂತಯ್ಯನವರನ್ನು ಆಕರ್ಷಿಸಿಬಿಟ್ಟಿದ್ದ. ಹುಚ್ಚು ಹುಡುಗ! ಅವನಿಗೆ ಡೆಲ್ಲಿ, ಬಾಂಬೆಯಂತಹ ದೊಡ್ಡ ನಗರಗಳಲ್ಲಿರುವ ಕನ್ಯೆಯರು ಬೇಡವಂತೆ. ಅಷ್ಟಟ

'ಶ್ರೀ ಅನಂತಯ್ಯನವರಿಗೆ, ನಾನು ಮದುವೆಯಾದರೆ ಮೈಸೂರು ಹುಡುಗಿಯನ್ನೆ. ಹುಡುಗಿ ನೋಡಲು ರೂಪವಂತೆ, ಸುಶಿಕ್ಷಿತೆ, ಸುಸಂಸ್ಕೃತೆ ಜೊತೆಗೆ ಮೈಸೂರು ಮಲ್ಲಿಗೆಯಂತಿರಬೇಕು
– ಎಂದು ನಿಮ್ಮ ಗಿರಿಜೇಂದ್ರ'

ಮೈಸೂರು ಮಲ್ಲಿಗೆಯಂತಹ ಹುಡುಗಿಯೇ ಬೇಕಂತೆ. ತನ್ನ ಸರ್ವಿಸ್ಸಿನಲ್ಲಿ ಎಷ್ಟು ಜನರಿಗೆ ಗಂಡು, ಹೆಣ್ಣು ಹುಡುಕಿಕೊಟ್ಟಿದ್ದೇನೆಯೋ! ಆದರೆ ಇದಕ್ಕೊಂದು ವಿಶೇಷ. ಗಿರಿಜೇಂದ್ರ ಶ್ರೀಮಂತ ಹುಡುಗ! ಮೇಲಾಗಿ ತನ್ನ ಸಂಬಂಧಿ. ಅವನ ರೂಪ, ವಿದ್ಯೆ, ಶ್ರೀಮಂತಿಕೆಗೆ ತಕ್ಕ ಹುಡುಗಿಯನ್ನು ಕುದುರಿಸಿದರೆ ತನಗಾಗುವ ಲಾಭವೇನೂ ಕಡಿಮೆಯಲ್ಲ. ಮನದಲ್ಲೇ ಮಂಡಿಗೆ ತಿಂದರು ಅನಂತಯ್ಯ.

ಫೋಟೋದಲ್ಲಂತೂ ಮನ್ಮಥನ ಹಾಗಿದ್ದಾನೆ. ಇವನಿಗೆ ಯಾವ ಹುಡುಗಿ ಸರಿ ಹೊಂದಬಹುದು? ಯೋಚಿಸುತ್ತಾ ತಮ್ಮ ಕಡತವನ್ನು ತೆರೆದರು. ಹುಡುಗಿಯರಿಗೇನು ಬರ? ಅಶ್ವತ್ಥ ಕಟ್ಟೆಗೆ ಹಾಕೋಷ್ಟು ಇವೆ. ಡಾಕ್ಟರು, ಲಾಯರು, ಪ್ರೊಫೆಸರರು... ಎಂದು ದೊಡ್ಡ ದೊಡ್ಡ ಕಡೆಯ ಕನ್ಯಾಪಿತೃಗಳ ವಿಳಾಸವನ್ನು ಲಿಸ್ಟ್ ಮಾಡಿಟ್ಟರು.

ಮತ್ತೆ ನಾಲ್ಕೈದು ದಿನಗಳಲ್ಲೇ ಗಿರಿಜೇಂದ್ರ ಮೈಸೂರಿಗೆ ಬಂದಿಳಿದ. ಗಿರಿಜೇಂದ್ರ ಬಂದದ್ದು ಒಳ್ಳೆ ನವರಾತ್ರಿಯ ಸಮಯದಲ್ಲೇ. ಎಲ್ಲೆಲ್ಲಿ ನೋಡಿದರೂ ಜನಜಂಗುಳಿ, ನೂಕುನುಗ್ಗಲು, ನವರಾತ್ರಿಯ ನವೋಲ್ಲಾಸ, ಸಂಭ್ರಮ. ಹೋಟೇಲುಗಳು, ಲಾಡ್ಜಿಂಗ್‌ಗಳೂ ಥಿಯೇಟರುಗಳು ಎಲ್ಲಾ ಭರ್ತಿಯೋ ಭರ್ತಿ. ಗಿರಿ



# ಮದುವೆ ಮೈಸೂರು ಮಲ್ಲಿಗೆಯೊಡನೆಯೋ...

● ಕೆ. ಎಸ್. ವತ್ಸಲಾ ವಿಶ್ವನಾಥ್

'ದಾಸಪ್ರಕಾಶ'ದಲ್ಲಿ ಇಳಿದುಕೊಂಡಿದ್ದ.

ಅನಂತಯ್ಯನವರು ತೋರಿಸಿದ ಪಟ್ಟಿ ನೋಡಿ ನಗೆಯುಕ್ಕಿ ಬಂತು ಗಿರಿಗೆ. ಕುಮಾರಿ ಲಲಿತಾ, M.Sc. ಲಾಯರ್ ಶೇಷಗಿರಿಯವರ ಮಗಳು, ನೆಕ್ಸ್ಟ್, ಅಪರ್ಣಾ B.E. ಅಸಿಸ್ಟೆಂಟ್ ಇಂಜಿನಿಯರ ಕುಲಪುತ್ರಿ, ಗಾಯತ್ರಿ B.Sc. (ಹೋಂಸೈನ್ಸ್) ತಂದೆ- ಸೈಕಾಲಜಿ ಪ್ರೊಫೆಸರ್, ಗಂಗೋತ್ರಿಯಲ್ಲಿ... ಉದ್ದಕ್ಕೂ ಬೆಳೆದಿತ್ತು ಪಟ್ಟಿ. ಜೊತೆ ಜೊತೆಯಲ್ಲಿ ಮನೆಗಳ ವಿಳಾಸ. ಜಯಲಕ್ಷ್ಮಿಪುರಂ, ಸರಸ್ವತೀಪುರಂ, ಕುವೆಂಪು ನಗರ, ಗೋಕುಲಂ, ಬೃಂದಾವನ ಬಡಾವಣೆ... ಓಹೋ! ಕನ್ಯಾನ್ವೇಷಣೆಯ ನೆಪದಲ್ಲಿ ಇಡೀ ಮೈಸೂರನ್ನೇ ಸುತ್ತಿಹಾಕಬೇಕಾಗುತ್ತೆ ಅಂತ ಕಾಣತ್ತೆ ಎಂದುಕೊಂಡ.

''ಏನಯ್ಯಾ! ಗಿರಿಜೇಂದ್ರಾ, ಬರೀ ಪಟ್ಟಿಯನ್ನು ನೋಡಿಯೇ ಸುಸ್ತಾಗಿಬಿಟ್ಟೆಯಲ್ಲಾ! ಈ ಮೂರು ದಿನಗಳಲ್ಲಿ ನಿನ್ನ ಕೆಲಸ ಮುಗೀಬೇಕೂಂದ್ರೆ ನೀನು ಒಂದು ದಿನಕ್ಕೆ ಕನಿಷ್ಠ 5 ವಧುಪರೀಕ್ಷೆಯನ್ನಾದರೂ ಮಾಡಬೇಕಾಗುತ್ತದೆ. ಏನಂತೀಯಾ?''

''ಆಯಿತು. ಅನಂತಯ್ಯನವರೇ, ನನ್ನ ಮದುವೆಗಾಗಿ ಪಾಪ ನೀವೇ ಇಷ್ಟು ಶ್ರಮಿಸ್ತಿರೋವಾಗ ಕೇವಲ ನೋಡಿಕೊಂಡು ಬರೋದು ಯಾವ ಕಷ್ಟ? ಇಂದಿನಿಂದಲೇ ಪ್ರಾರಂಭಿಸಿಬಿಡಿ. ಶುಭಸ್ಯ ಶೀಘ್ರಂ'' ಉತ್ಸಾಹದಿಂದಲೇ ನುಡಿದ ಗಿರಿ.

ಅಲ್ಲಿಂದ ಪ್ರಾರಂಭವಾಯಿತು ಅವರ ಯಾತ್ರೆ. ಸರಿ, ಪ್ರತಿಯೊಬ್ಬರ ಮನೆಯಲ್ಲೂ ಕಾಫಿ, ತಿಂಡಿ ಸ್ವಲ್ಪ ಲಘುವಾಗಿ ಮಾತುಕಥೆ, ಹರಟೆ. ಒಂದು ಮನೆಯಿಂದ ಮತ್ತೊಂದು ಮನೆಗೆ ಹೊರಟರೆ ಮತ್ತೆ ಅದೇ ಪುನರಾವರ್ತನೆ. ಮೊದಲೇ ಮೈಸೂರಿಗರದು ಲಲಿತಾತಿಥ್ಯ. ಇನ್ನು ಭಾವೀ ಅಳಿಯನಾಗುವವರು ಎಂದಮೇಲೆ ಕೇಳಬೇಕೆ? ಅದ್ದೂರಿ ಉಪಚಾರ, ಉಪಹಾರ ಎರಡೂ ಕಾದಿರುತ್ತಿದ್ದವು. ಎಷ್ಟಾದರೂ ಇಂಜಿನಿಯರ್ ವರ. ಅವರ ಘನತೆಗೆ ತಕ್ಕಂತಿರಬೇಡವೇ? ಒಂದು ಮನೆಯಲ್ಲಿ ಮಾಮೂಲಿನಂತೆ ಕೇಸರಿಭಾತ್, ಬೋಂಡಾಗಳಾದರೆ ಮತ್ತೊಂದು ಮನೆಯಲ್ಲಿ ಜಾಮೂನು, ರವೆಭಾತ್, ಇನ್ನೊಂದರಲ್ಲಿ ಕೊಬ್ಬರಿಮಿಠಾಯಿ, ಕೋಡುಬಳೆ. ಬೆಳಗ್ಗೆಯೇ ಬೇಗ ಹೊರಟರೂ 2 ಮನೆಗಳನ್ನು ಪೂರೈಸಿ ಮೂರನೆಯ ಮನೆ ಪ್ರವೇಶಿಸುವಷ್ಟರಲ್ಲಿ ಮಧ್ಯಾಹ್ನವೇ ಆಗಿ ಹೋಗುತ್ತಿತ್ತು.

''ಛೇ! ನಾವು ಸರಿಯಾಗಿ ಊಟದ ವೇಳೆಗೆ ಬಂದಿದ್ದೇವೆ. ತಮಗೆ ತೊಂದ್ರೆಯಾಯ್ತೇನೋ! ಆದರೇನು ಮಾಡೋದು? ನನ್ಗೆ ಹೆಚ್ಚಿನ ಕಾಲಾವಕಾಶವಿಲ್ಲ. ಇವತ್ತು-ನಾಳೇಲಿ ಇಂಟರ್‌ವ್ಯೂಗಳನ್ನು ಮುಗಿಸಿ ನಾನು ಅಹಮದಾಬಾದಿಗೆ ಹೋಗಲೇಬೇಕು. ಹೀಗಾಗಿ...''

''ಛೇ! ಛೇ! ಖಂಡಿತಾ ಹಾಗೆಲ್ಲಾ ಅಂದುಕೊಳ್ಳಲೇಬೇಡಿ, ಮಿ. ಗಿರಿಜೇಂದ್ರ ಮುಂದೆ ಸಂಬಂಧ ಬೆಳೆಸಬೇಕಾಗಿರುವ ನೀವು ಈ ರೀತಿಯ ಫಾರ್ಮಾಲಿಟೀಸ್ ಎಲ್ಲಾ ಅಬ್ಸರ್ವ್ ಮಾಡ್ಲೆಬಾರದು. ಈಗಿನ ಕಾಲವೇ ಹೀಗಿದೆಯಲ್ಲಾ. ವೆರಿ ಫಾಸ್ಟ್, ವೆರಿ ಫಾಸ್ಟ್, ಬೆಳಗ್ಗೆ ವಧುಪರೀಕ್ಷೆ, ಸಂಜೆ ಲಗ್ನಪತ್ರಿಕೆ, ಮಾರನೆಯ ಬೆಳಗ್ಗೆ ಧಾರೆ ಮುಗಿಸಿಕೊಂಡು ಸಂಜೆ ಫ್ಲೈಟಿಗೆ ಅಮೆರಿಕಾಕ್ಕೋ, ಕೆನಡಾಕ್ಕೋ ಹಾರಿಬಿಡ್ತಾರೆ. ಅಂತಹುದರಲ್ಲಿ...''

ಊಟ ಬೇಡವೆಂದ ಭಾವೀ ಅಳಿಯಂದಿರಿಗೆ ಬಿಸಿಬೇಳೆ ಭಾತ್, ಚಿಪ್ಸ್, ಮೊಸರನ್ನದ ಆತಿಥ್ಯ. ಬೇಡವೆನ್ನುವ ಹಾಗೇ ಇಲ್ಲವಲ್ಲಾ. ಮೂರು ದಿನಗಳೂ ಅಚ್ಚುಕಟ್ಟಾದ ತಿಂಡಿ, ಊಟವನ್ನು ಸವಿದು ಸಂತೃಪ್ತನಾದ ಗಿರಿ. ಎಂತಹ ವಿಶಾಲ ಮನೋಭಾವನೆಯವರು ಮೈಸೂರಿಗರು! ಕೇವಲ ಬಿಸ್ಕತ್ತು, ಟೀಗಳಲ್ಲೇ ಬಂದವರನ್ನು ಸಾಗಹಾಕಿಬಿಡುವ ಇಂತಹ ನಾಜೋಕಿನ ದಿನಗಳಲ್ಲೂ ಇಂತಹ ಆತಿಥ್ಯ ನೀಡುವ ಔದಾರ್ಯತೆ! ಮೂರು ದಿನಗಳೂ ಮೈಸೂರಿಗರ ಊಟೋಪಚಾರಗಳಿಂದಲೂ ಮನಕ್ಕೆ ಹಿತವಾದ ಮಾತುಕತೆಗಳಿಂದಲೂ ತಣಿದುಹೋಯಿತು ಅವನ ಮನಸ್ಸು.

ಮಧ್ಯಾಹ್ನ 2 ಗಂಟೆಯಿಂದ ಸಂಜೆ ಆರರವರೆಗೆ ಮಾತ್ರ ಈ ವಧುವೀಕ್ಷಣೆಗೆ ಬಿಡುವು ಕೊಟ್ಟಿದ್ದ ಗಿರಿ. ದಸರೆಯ ವೈಭವವನ್ನು ನೋಡ

ಲೆಂದು ಜನ ಊರಿಂದೂರಿಗೆ ಬರುವಾಗ ತಾನು ಮಾತ್ರ ಮೈಸೂರಿಗೆ ಬಂದೂ ಏನೂ ನೋಡದಿದ್ದರೆ ಹೇಗೆ? ನವರಾತ್ರಿಯ ಗೊಂಬೆಗಳಂತೆ ಅಲಂಕರಿಸಿಕೊಂಡ ಕನ್ನೆಯರನ್ನು ನೋಡುವುದರ ಜೊತೆ ಜೊತೆಗೇ ಸಿಕ್ಕಷ್ಟು ವೇಳೆಯಲ್ಲೇ ವಸ್ತುಪ್ರದರ್ಶನ, ಚಾಮುಂಡಿಬೆಟ್ಟ, ಅರಮನೆ ಎಂದೆಲ್ಲಾ ತಿರುಗಾಡಿದ ಗಿರಿಜೇಂದ್ರ.

ಅರವತ್ತು ದಾಟಿದ ಅನಂತಯ್ಯನವರೂ ಅತ್ಯುತ್ಸಾಹದಿಂದ ಅವನೊಡನೆ ಕನ್ಯಾಪಿತೃಗಳ ಮನೆಗೆ ಅಲೆದಲೆದು ಸಾಕಾದರು. ಅವರಿಗೊಂದೇ ಅಚ್ಚರಿ! ಗಿರಿಜೇಂದ್ರ ಈಗಾಗ್ಲೇ 10-12 ಹುಡುಗಿಯರನ್ನು ನೋಡಿದರೂ ಏನೂ ಬಾಯಿಬಿಡದೆ ಸುಮ್ಮನಿರುವನಲ್ಲಾ! ತನ್ನೊಂದಿಗಾದರೂ ಹೇಳಬಾರದೆ? ಇಷ್ಟು ಹುಡುಗಿಯರಲ್ಲಿ ಒಂದೂ ಮನಸ್ಸಿಗೆ ಹಿಡಿಸಿರಲಾರದೆ?

ತಡೆಯದೆ ಬಾಯಿಬಿಟ್ಟು ಕೇಳಿಯೇ ಬಿಟ್ಟರು. ''ಏನಯ್ಯಾ ಗಿರಿ! ಈಗಾಗಲೇ ಇಷ್ಟು ಹುಡುಗಿಯರನ್ನು ನೋಡಿಯಾಯ್ತು. ಇನ್ನು ನಿನ್ನ ಅಭಿಪ್ರಾಯವೇನು ಹೇಳಲೇ ಇಲ್ಲವಲ್ಲಯ್ಯಾ!''

ತಾಳ್ಮೆಯಿಂದ ಉತ್ತರಿಸಿದ ಗಿರಿ. ''ಆಗಲಿ ಅನಂತಯ್ಯನೋರೆ ಇನ್ನು 2-3 ಕಡೆ ನೋಡೋದಿದೆಯಲ್ಲಾ. ಎಲ್ಲಾ ಆದಮೇಲೆ ನಿಧಾನವಾಗಿ ಯೋಚಿಸಿ ಒಂದು ನಿರ್ಧಾರಕ್ಕೆ ಬರ್ತೀನಿ.''

ಅನಂತಯ್ಯನವರ ಮನಸ್ಸು ಏನೋ ಯೋಚಿಸುತ್ತಿತ್ತು. ಬಹುಶಃ ಗಿರಿ ಆ ಭೀಮರಾಯರ ಮಗಳು ಪಾರಿಜಾತಳನ್ನೇ ಒಪ್ಪಬಹುದು. ಅದಕ್ಕೆ ಕಾರಣವೂ ಇಲ್ಲದಿಲ್ಲ. ಹುಡುಗಿ ಬಲುಜಾಣೆ. ಬಿ.ಇ.ನಲ್ಲಿ ಡಿಸ್ಟಿಂಕ್ಷನ್‌ನಲ್ಲಿ ಪಾಸಾಗಿದ್ದಾಳೆ. ನೋಡಲೂ ಒಳ್ಳೆ ಮಲ್ಲಿಗೆ ಹೂವಿನಂತೆಯೇ ಚೆಲುವೆ. ಗಿರಿ ಕೂಡಾ ಅವಳೊಡನೆ ತುಂಬಾ ಹೊತ್ತು ಹರಟಿ, ನಕ್ಕು ನಲಿದಿದ್ದರಲ್ಲಾ. ಅವರು ಮಾಧ್ವರು ಆದರೇನು? ಗಿರಿಜೇಂದ್ರನೇ ಹೇಳಿರಲಿಲ್ವೇ?

''ಅನಂತಯ್ಯನೋರೆ! ನನ್ನದು ಬ್ರಾಡ್ ಕ್ಲಾಸಿಫಿಕೇಷನ್ನು. ಬ್ರಾಹ್ಮಣರಲ್ಲಿ ಯಾವ ಪಂಗಡವಾದರೂ ಸರಿಯೇ. ಮಾಧ್ವರು, ಅಯ್ಯರ್ಸ್, ಬಡಗನಾಡು, ಹೊಯ್ಸಳ ಕರ್ನಾಟಕರು. ಯಾವುದೂ ಪರ್ವಾಗಿಲ್ಲ. ಈ ಬಗ್ಗೆ ಅಪ್ಪ ಅಮ್ಮನವರೂ ತಕರಾರಿಲ್ಲ ಎಂದು. ಇರಲಿ, ನೋಡೋಣ...''

ಮಾರನೆಯ ದಿನ ವಿಜಯದಶಮಿ. ಇನ್ನೂ 2-3 ಕಡೆ ನೋಡಬೇಕಾಗಿದ್ದ ವಧುಗಳನ್ನು



ಕೊಂಚ ತರಾತುರಿಯಿಂದಲೇ ಮುಗಿಸಿದ ಗಿರಿ. ಏಕೆಂದರೆ ಮಧ್ಯಾಹ್ನದ ನಂತರ ದಸರಾ ಮೆರವಣಿಗೆಯನ್ನು ನೋಡುವುದಿತ್ತಲ್ಲಾ. ಉತ್ಸವದ ಉತ್ಸಾಹದಲ್ಲಿ ಪಾಲ್ಗೊಂಡು ಸಂಜೆಯ ಹೊತ್ತಿಗೆ ಮೈಸೂರಿಗೆ ಗುಡ್‌ಬೈ ಹೇಳಿಬಿಡುವ ಆಲೋಚನೆ ಅವನದು. ಇದು ವರೆಗೂ ಅವನ ಯೋಜನೆಯಂತೆಯೇ ನಡೆದುದು ಅವನಿಗೆ ಅತ್ಯಂತ ಸಮಾಧಾನವಾಗಿತ್ತು.

ವಧು ಪರೀಕ್ಷೆಯ ಕೊನೆಯ ಕಂತು ಹಿರಿಯಣ್ಣಯ್ಯನವರ ಮಗಳು ಮೀನಾಕ್ಷಿಯದು. ಮೀನಾಕ್ಷಿ ಮ್ಯೂಸಿಕ್ ಎಂ.ಎ. ಮಾಡಿ ಕಾಲೇಜಿನಲ್ಲಿ ಮ್ಯೂಸಿಕ್ ಟೀಚರಾಗಿದ್ದಳು.

ರೂಪವೇನೋ ಅಷ್ಟಕ್ಕಷ್ಟೇ ಯೆನಿಸಿದರೂ ಅವಳ ಕಂಠಸಿರಿ ಮಾತ್ರ ಅದ್ಭುತವಾಗಿತ್ತು. ಸೊಗಸಾದ ಕಂಠದೊಡನೆ ಸ್ಪರ್ಧಿಸುವಂತಿದ್ದ ಪುಳಿಯೋಗರೆ, ಆಂಬೊಡೆಗಳ ರುಚಿ ಇನ್ನೂ ಸೊಗಸೆನಿಸಿತು. ಪುಳಿಯೋಗರೆಯ ರುಚಿಯನ್ನು ಗಿರಿ ಬಾಯ್ತುಂಬಾ ಹೊಗಳಿಯೇಬಿಟ್ಟಾಗ ಹಿರಿಯಣ್ಣನವರು ಹಿಗ್ಗಿ ಹೀರೇಕಾಯಾದರು. ಆಗಲೇ ಗಿರಿ ತಮ್ಮ ಅಳಿಯನಾದನೆಂದೇ ಭ್ರಮಿಸಿ ಬೀಗಿದರು.

ಎಲ್ಲಾ ಕಡೆಯೂ ನಡೆದಂತೆ ಮಾಮೂಲೀ ಡೈಲಾಗನ್ನು ಕೊನೆಯ ಸಲ ಹೇಳಿ ಮುಗಿಸಿದ ಗಿರಿಜೇಂದ್ರ.

"ಯಾವುದಕ್ಕೂ ನಾನು ಯೋಚಿಸಿ ಅನಂತಯ್ಯ

## ಬಂಡೀಪುರ ಅಭಯಾರಣ್ಯ

ಬಂಡೀಪುರ ಅಭಯಾರಣ್ಯ ಕರ್ನಾಟಕದ ಪ್ರಮುಖ ವನ್ಯಜೀವಿ ತಾಣ. ಕೇರಳದ ವೈನಾಡ್ ಮತ್ತು ತಮಿಳುನಾಡಿನ ಮಧುಮಲೈ ಅಭಯಾರಣ್ಯಗಳಿಂದ ಸುತ್ತುವರೆದಿರುವ ಬಂಡೀಪುರ ಹುಲಿ ಸಂರಕ್ಷಣಾ ಯೋಜನೆಗೆ ಸೇರಿದ ಪ್ರದೇಶವೂ ಹೌದು. 870 ಚ.ಕಿ.ಮೀ. ಅರಣ್ಯ ಪ್ರದೇಶವನ್ನು ಹೊಂದಿರುವ ಇಲ್ಲಿ ಹುಲಿ, ಆನೆ, ಕಾಡುಕೋಣ, ಕಾಡುಹಂದಿ, ಜಿಂಕೆ, ಕಡವೆ, ನವಿಲು, ಚಿರತೆ, ಕರಡಿ, ಮುಳ್ಳುಹಂದಿ, ಕಾಡುನಾಯಿ, ಕಾಡುಬೆಕ್ಕು ಮುಂತಾದ ವನ್ಯಪ್ರಾಣಿಗಳೂ ಅನೇಕ ರೀತಿಯ ಪಕ್ಷಿಗಳೂ ಕಾಣ ಸಿಗುತ್ತವೆ.

ಮೈಸೂರಿನಿಂದ ಸುಮಾರು 80 ಕಿ.ಮೀ. ದೂರದಲ್ಲಿ ಬೆಂಗಳೂರು–ಊಟಿ ರಾಜ್ಯ ಹೆದ್ದಾರಿಯಲ್ಲಿರುವ ಬಂಡೀಪುರ ಯೋಗ್ಯ ಪ್ರವಾಸೀ ಕೇಂದ್ರ. ಪ್ರವಾಸಿಗರು ತಂಗಲು ಅನುಕೂಲವಾಗುವಂತೆ ಅನೇಕ ವಸತಿಗೃಹಗಳನ್ನು, ಕುಟೀರಗಳನ್ನು ಕಲ್ಪಿಸಲಾಗಿದೆ. ಪ್ರವಾಸಿಗರಿಗೆ ಮಾಹಿತಿ ಕೇಂದ್ರ, ಸಂಜೆಯ ವೇಳೆಯಲ್ಲಿ ವನ್ಯಜೀವಿಗಳ ಛಾಯಾಚಿತ್ರ ಪ್ರದರ್ಶನ, ವನ್ಯಜೀವಿಗಳ ಬಗ್ಗೆ ಮಾಹಿತಿ ನೀಡುವ ಗ್ರಂಥಾಲಯ ಮುಂತಾದ ವ್ಯವಸ್ಥೆಗಳನ್ನು ರೂಪಿಸಲಾಗಿದೆ.

ಬೆಳಗ್ಗೆ 6-30ರಿಂದ 9-30 ಮತ್ತು ಸಂಜೆ 4-30ರಿಂದ 6-30ರ ವರೆಗೆ ಅರಣ್ಯ ಇಲಾಖೆಯ ವಾಹನಗಳಲ್ಲಿ ವನ್ಯಧಾಮದಲ್ಲಿ ಪ್ರಾಣಿ ವೀಕ್ಷಣೆಗಾಗಿ ಸಂಚರಿಸಬಹುದು. ಬಂಡೀಪುರ ರಾಷ್ಟ್ರೀಯ ಉದ್ಯಾನವನವನ್ನು ವರ್ಷಪೂರ್ತಿ ಸಂದರ್ಶಿಸಬಹುದಾದರೂ ಮೇ-ಅಕ್ಟೋಬರ್ ತಿಂಗಳ ನಡುವಿನ ಕಾಲ ಕಾಡು ಹಚ್ಚ ಹಸಿರಿನಿಂದ ಕೂಡಿರುವುದರಿಂದ ಈ ಸಮಯ ಸಂದರ್ಶನ ಯೋಗ್ಯ.



● ಗುಂಡ್ಲುಪೇಟೆ ರವಿ. ವಿ.

ನವರಿಗೇ ತಿಳಿಸುತ್ತೇನೆ. ಅನಂತರ ಮುಂದಿನ ಏರ್ಪಾಡು ಮಾಡಬಹುದು,'' ಎಂದಾಗ ''ಅದೆಲ್ಲಾ ನನ್ಗೆ ಬಿಟ್ಬಿಡಯ್ಯಾ! ಮೊದಲು ನೀನು ಗ್ರೀನ್ ಸಿಗ್ನಲ್ ತೋರಿಸು, ಮುಂದಿನದೆಲ್ಲಾ ಚಿಟಿಕಿ ಹೊಡೆಯುವುದರಲ್ಲಿ ಮುಗಿಸುತ್ತೇನೆ'' ಎಂದರು ಬೆನ್ನು ತಟ್ಟುತ್ತಾ.

ಅನಂತಯ್ಯನವರಿಗೆ ವಿದಾಯ ಹೇಳಿ ಬೀಳ್ಕೊಂಡಾಗ ಅದೇಕೋ ಗಿರಿಯ ಮನ ಭಾರ, ಭಾರವೆನಿಸಿತು. ಯಾವುದೋ ಸಂಕುಚಿತ ಭಾವ ಒಳಗೊಳಗೆ ಕಾಡಿತು. ಆದರೂ ನಗೆಯ ಮುಖವಾಡ ಧರಿಸಿ ಅನಂತರಾಮಯ್ಯನವರ ಎರಡೂ ಕೈಗಳನ್ನು ಹಿಡಿದುಕೊಂಡು ''ಬರ್ತೀನಿ ಅನಂತರಾಮಯ್ಯನವರೇ, ಇದುವರೆಗೂ ನೀವು ನೀಡಿದ ಸ್ನೇಹ, ಸಹಕಾರಗಳಿಗೆ ನಾನು ಸದಾ ಋಣಿ'' ಎಂದ ಹೃದಯ ತುಂಬಿ.

''ಅಯ್ಯೋ! ಬಿಡಯ್ಯಾ! ಇದೆಲ್ಲಾ ಏನ್ಮಹಾ? ಈ ರೀತಿಯ ಸಹಾಯವನ್ನು ನಾನು ಊರಿನೋರಿಗೆಲ್ಲಾ ಮಾಡ್ತಾನೇ ಇರ್ತೀನಿ. ನಮ್ಮ ಹುಡುಗ ನೀನು. ಇಷ್ಟೂ ಮಾಡದಿದ್ರೆ ಹೇಗೆ? ಊರಿಗೆ ಹೋಗಿ ಯಾವುದಕ್ಕೂ ಪತ್ರ ಬರಿ. ನಿಮ್ಮ ಅಪ್ಪ-ಅಮ್ಮನಿಗೆ ನಾನು ಕೇಳಿದೆನೆಂದು ಹೇಳು'' ಎಂದೂ ಸೇರಿಸಿದರು.

ಕೊನೆಗೂ ಬಂತು. ಅನಂತಯ್ಯನವರು 15 ದಿನಗಳಿಂದಲೂ ನಿರೀಕ್ಷಿಸುತ್ತಿದ್ದ ಗಿರಿಜೇಂದ್ರನ ಕಾಗದ. ಮುಖವರಳಿತು. ತಾನು ತೋರಿಸಿದ ಹುಡುಗಿಯರಲ್ಲಿ ಗಿರಿಯ ಕೈಹಿಡಿಯುವ ಅದೃಷ್ಟವಂತೆ ಯಾರಾಗಿರಬಹುದು? ಪಾರಿಜಾತಾ, ಮೀನಾಕ್ಷಿ, ಲಲಿತಾ...? ಕುತೂಹಲ ಕಾಡಿತು. ಆದರೆ ಪತ್ರವನ್ನು ತೆರೆದು ಕಣ್ಣಾಡಿಸುತ್ತಿರುವಂತೆಯೇ ಕಲ್ಲಿನಂತಾದರು ಅನಂತಯ್ಯ.

ತೀ|| ರೂ|| ಸಮಾನರಾದ ಪೂಜ್ಯ ಶ್ರೀ ಅನಂತಯ್ಯನವರಿಗೆ ಚಿ|| ಗಿರಿಜೇಂದ್ರನ ಸಾಷ್ಟಾಂಗ ನಮಸ್ಕಾರಗಳು. ಪತ್ರದ ಮೊದಲಿಗೇ ನಿಮ್ಮ ಕ್ಷಮೆ ಕೋರುತ್ತೇನೆ. ನೀವು ನನ್ನನ್ನು ಕ್ಷಮಿಸುವಿರೋ ಇಲ್ಲವೋ ಎಂಬುದು ನಿಮಗೆ ಸೇರಿರುವ ವಿಷಯವಾದರೂ ಕ್ಷಮೆ ಕೇಳುವುದು ಮಾತ್ರ ನನ್ನ ಮೊದಲ ಕರ್ತವ್ಯವೇ ಆಗಿದೆ. ಕ್ಷಮೆಗೆ ಕಾರಣವನ್ನೂ ಹೇಳಿಬಿಡುತ್ತೇನೆ. ನಾನು ಮೈಸೂರಿಗೆ ಈ ಸಲ ಬಂದಿದ್ದು ನಿಮಗೆ ತಿಳಿಸಿದಂತೆ ಖಂಡಿತಾ ಕನ್ಯಾನ್ವೇಷಣೆಗಾಗಿ ಅಲ್ಲ. ಸದ್ಯಕ್ಕೆ ನನಗೆ ಮದುವೆಯಾಗುವ ಆಲೋಚನೆಯೇ ಇಲ್ಲವೆಂದ ಮೇಲೆ ಕನ್ಯಾನ್ವೇಷಣೆಯೇಕೆ? ಕಂಪೆನಿಯು ನನ್ನನ್ನು ವಿಶೇಷ ತರಬೇತಿಗೆಂದು ಜರ್ಮನಿಗೆ ಮೂರು ವರ್ಷದ ಅವಧಿಗೆಂದು ಕಳಿಸಿಕೊಡುತ್ತಿದೆ. ಜರ್ಮನಿಗೆ ಹೋಗುವುದಕ್ಕೆ ಮುನ್ನ ಪೂರ್ವ ಸಿದ್ಧತೆಗೆಂದು 15 ದಿನಗಳ ರಜೆಯನ್ನು ಕೊಟ್ಟಾಗ ರಜೆಯ ಸದುಪಯೋಗ ಪಡೆಯಬೇಕೆಂದು ಆಲೋಚನೆ ಬಂತು. ಡೆಲ್ಲಿ ಹಾಗೂ ಅಹಮದಾಬಾದಿನ ಸ್ಥಳಗಳನ್ನು ಸಾಕಷ್ಟು ಸಲ ನೋಡಿ ಹಳಸಲಾಗಿರುವುದರಿಂದ ಮೈಸೂರಿಗೇಕೆ ಒಮ್ಮೆ ಹೋಗಿ ಬರಬಾರದೆಂದೆನಿಸಿತು. ಹೇಗೂ ದಸರೆಯ ದಿನಗಳು ವೀಕ್ಷಣೆಗೆ ಪ್ರಶಸ್ತವಾದ ಕಾಲ. ಹೇಗೂ ಮೈಸೂರಿನ ದಸರೆ ವೈಭವವನ್ನು ನೋಡಿ ತುಂಬಾ ವರ್ಷಗಳೇ ಕಳೆದಿವೆ. ಇನ್ನೊಮ್ಮೆ ಕಣ್ತುಂಬಾ ಮನತುಂಬಾ ಆ ಸೊಬಗನ್ನು ತುಂಬಿಕೊಳ್ಳಬೇಕೆನಿಸಿತು. ಆದರೆ ಹಿಂದೆಯೇ ಬಂದಿತು- ಹಿಂದೊಮ್ಮೆ ಈ ದಸರೆಯ ದಿನಗಳಲ್ಲೇ ಮೈಸೂರಿಗೆ ಹೋಗಿ ಪಡೆದುಕೊಂಡು ಬಂದ ಕಹಿ ಅನುಭವಗಳ ನೆನಪು ನುಗ್ಗಿ ಬಂತು. ಹಿಂದೊಮ್ಮೆ ತುಂಬ ಉತ್ಸಾಹದಿಂದ ಬಂದಿದ್ದ ನನಗೆ ಸರಿಯಾಗಿ ಇಳಿದುಕೊಳ್ಳಲು ಹೊಟೇಲ್ ಸಿಗದೆ, ತುಂಬಿ ಕಿಕ್ಕಿರಿದಿದ್ದ ಜನಸಂದಣಿಯಿಂದ ಬಿರಿದು ಹೋಗುತ್ತಿದ್ದ ಹೊಟೇಲಿನ ಊಟ, ತಿಂಡಿ ಮೈಗೆ ಹಿಡಿಯದೆ ಅಲರ್ಜಿಯಾಗಿ ಅಲ್ಲಿ ಇದ್ದ ಮೂರು ದಿನಗಳೂ ಹೊಟೇಲಿನ ಮೂಲೆಯ ರೂಮಿನಲ್ಲೇ ಬಿದ್ದಿರಬೇಕಾದ ಪರಿಸ್ಥಿತಿ ಒದಗಿತ್ತು.

ಏನು ಮಾಡುವುದೆಂದು ಯೋಚಿಸುತ್ತಿದ್ದ ನನಗೆ, ಅದೃಷ್ಟವಶಾತ್ ನಿಮ್ಮ ನೆನಪು ಬಂತು. ನನ್ನ ಯೋಜನೆಗೆ ನಿಮ್ಮಿಂದ ನಾನೇ ನಿರೀಕ್ಷಿಸದ ರೀತಿಯಲ್ಲಿ ಸಹಾಯಹಸ್ತ ಒದಗಿತು. ವಧು ಪರೀಕ್ಷೆಯ ನೆಪದಿಂದ ಸ್ವಲ್ಪವೂ ಶ್ರಮವಿಲ್ಲದೆ ಸವಿಯಾದ ಊಟೋಪಚಾರಗಳಲ್ಲದೆ ಮೈಸೂರು

ಮಂದಿಯ ಸ್ನೇಹ, ಸೌಹಾರ್ದತೆಗಳೂ, ಆತ್ಮೀಯ ಭಾವಬೆಸುಗೆಯ ರಸದೌತಣವೂ ದೊರಕಿತು. ನಿಮ್ಮೂರಿನಲ್ಲಿ ಕಳೆದ ಆ ಮೂರು ದಿನಗಳೂ ನನಗೆ ಸ್ವರ್ಗ ಸುಖಕ್ಕೆ ಸಮಾನವೆನಿಸಿತು. ಇದಕ್ಕೆ ಕಾರಣರಾದ ನಿಮಗೂ ಹಾಗೂ ಪರೋಕ್ಷವಾಗಿಯಾದರೂ ಕಾರಣರಾದ ಕನ್ಯಾಪಿತೃಗಳಿಗೂ ನನ್ನ ಹೃತ್ಪೂರ್ವಕ ವಂದನೆಗಳು. ಅವರೆಲ್ಲರಿಗೂ ಸಮಾಧಾನಕರವಾದ ಉತ್ತರ ಹೇಳುವ ಭಾರವನ್ನೂ ನಿಮಗೇ ಹೊರಿಸುತ್ತಿರುವುದಕ್ಕೆ ಬೇಸರಪಡಬೇಡಿ. ಇಷ್ಟೆಲ್ಲಾ ನಲಿವುಗಳ ಮಧ್ಯೆಯೂ ಮನ ನೋಯಿಸಿದ ವಿಷಯವೆಂದರೆ ಹಿರಿಯರಾದ ನಿಮಗೆ ನನ್ನಿಂದುಂಟಾದ ವೃಥಾಶ್ರಮ ಹಾಗೂ ಅನಗತ್ಯ ಅಲೆದಾಟ. ಇದಕ್ಕೆ ನನಗೆ ಪ್ರಾಮಾಣಿಕವಾಗಿಯೂ ಪಶ್ಚಾತ್ತಾಪವುಂಟಾಗಿದೆ. ಬೇರಿನ್ನಾವ ದುರುದ್ದೇಶವನ್ನೂ ಇಟ್ಟುಕೊಳ್ಳದೆ ಆಡಿದ ಈ ಹುಡುಗನ ಹುಡುಗಾಟಿಕೆಗೆ ಕೋಪಿಸಿಕೊಳ್ಳದೆ, ಬೇಸರಿಸಿಕೊಳ್ಳದೆ ಕ್ಷಮಿಸಿ ಹಿಂದಿನ ವಿಶ್ವಾಸವನ್ನೇ ಇರಿಸಿಕೊಳ್ಳುತ್ತೀರೆಂದು ನಿರೀಕ್ಷಿಸಲೇ?

ಆದರೆ ಇನ್ನೊಂದು ವಿಷಯ ನೆನಪಿರಲಿ. ಮೂರು ವರ್ಷಗಳ ನಂತರ ಜರ್ಮನಿಯಿಂದ ಬಂದಮೇಲೆ ನನ್ನ ಮದುವೆ ಖಂಡಿತಾ ನಿಮ್ಮ ಮೈಸೂರ ಮಲ್ಲಿಗೆಯೊಡನೆಯೇ!

ಇತೀ ತಮ್ಮ ವಿಧೇಯ
ಚಿ। ಗಿರಿಜೇಂದ್ರ

ಮರೆತ ಮಾತು:

ಈ ಹುಡುಗನ ಹುಡುಗಾಟದ ಸಂಗತಿಯನ್ನು ಮಾತ್ರಾ ಅಪ್ಪಿತಪ್ಪಿಯೂ ಅಮ್ಮ-ಅಪ್ಪನ ಕಿವಿಗೆ ಹಾಕಬೇಡಿ. ಆಮೇಲೆ ಡೆಲ್ಲಿಯ ಹುಡುಗಿಯನ್ನೇ ಗಂಟುಹಾಕಿಬಿಡುತ್ತಾರೆ.

# ಮೈಸೂರಿನ ನೆನಪುಗಳು

● ಡಾ । ಜ್ಯೋತ್ಸ್ನಾ ಕಾಮತ್
ನಿಲಯ ನಿರ್ದೇಶಕರು,
ಆಕಾಶವಾಣಿ ಕೇಂದ್ರ,
ಬೆಂಗಳೂರು – 560 001.

'ಸರಕಾರದ ಸೇವೆಯೇ ಸಮಾಜದ ಸೇವೆ' ಎಂದು ನಂಬಿಸಿದ ಆಕಾಶವಾಣಿ ಸೇರಿಕೊಂಡು ಧಾರವಾಡ, ಜಯಪುರ, ಕಲಕತ್ತಾಗಳಲ್ಲಿ ನೌಕರಿ ಮಾಡಿದ ನಂತರ ಪತಿ– ಪುತ್ರರು ವಾಸವಾಗಿದ್ದ ಬೆಂಗಳೂರಿಗೆ ಸಮೀಪವಿದ್ದ ಮೈಸೂರಿಗೆ ವರ್ಗ ಮಾಡಿದ್ದರಿಂದ ಹೊಸ ಚೈತನ್ಯ ಮೂಡಿತು. ''ಮೈಸೂರು ಕೇಂದ್ರದ ಸ್ಥಾನಮಾನಕ್ಕೆ ಬಡ್ತಿ ಕೊಟ್ಟಿದ್ದಾರೀ!'' ಎಂದು ಉತ್ಸಾಹದಿಂದ ಉದ್ಗರಿಸಿದಾಗ ನಮ್ಮ ರಾಯರು ಗೊಳ್ಳೆಂದು ನಕ್ಕರು. ''ಇಷ್ಟು ವರ್ಷ ಸಹಾಯಕ ಕೇಂದ್ರ ಸಹಾಯಕ ನಿರ್ದೇಶಕಿ ಎಂದು ಇದ್ದವಳಿಗೆ ಬಡ್ತಿ ಕೊಟ್ಟು ಕೇಂದ್ರ ನಿರ್ದೇಶಕಿ ಎಂದು ಮೈಸೂರಿಗೆ ವರ್ಗಮಾಡಿದರೆ, ಅಲ್ಲಿಯ ಆಕಾಶವಾಣಿ ಕೇಳುಗರಿಗೆ ಏನು ಲಾಭವಾದಂತಾಯಿತು? ನಿಮ್ಮ ಖಾತೆಯ ಅಧಿಕಾರಿಗಳ ಬುದ್ಧಿಯೇ ಇಷ್ಟು!'' ಎಂದು ಮರುಗಿದರು. ಇಪ್ಪತ್ತು ನಿಮಿಷಕ್ಕೊಮ್ಮೆ ನಾನ್‌ಸ್ಟಾಪ್ ಬಸ್ ಇದ್ದುದರಿಂದ 'ಬೆಂಗಳೂರಿನಲ್ಲಿದ್ದು ಪ್ರತಿದಿನ ಹೋಗಿ ಬರುವದನ್ನು ಮಾಡುತ್ತೇನೆ' ಎಂದು ಹೇಳಿದಾಗ ತಲೆ ಘಟ್ಟಿಸಿಕೊಂಡು, 'ಮಹಾರಾಯ್ತಿ, ಹಾಜರಾಗಲು ಒಮ್ಮೆ ಹೋಗಿಬಂದರೇ ಎಲುವು ನುಗ್ಗಾಗುವಾಗ, ಮೂರು ವರ್ಷಗಳ ಕಾಲ, ಪ್ರತಿದಿನ ಹೋಗಿ ಬರುವ ಸಾಹಸ ತೋರಿದರೆ- ಪರಮವೀರ ಚಕ್ರ ಕೊಡಿಸಲು ಸಕಲ ಪ್ರಯತ್ನ ಮಾಡುವೆ' ಎಂದು ನನ್ನ ಉತ್ಸಾಹಕ್ಕೆ ನೀರೆರೆಚಿದರು. ಕೇಂದ್ರದ ಮುಖ್ಯಸ್ಥೆಯಾಗಿ ಹಾಗೆ ಮಾಡುವದೂ ಸಾಧ್ಯವಿರಲಿಲ್ಲವಾಗಿ ಮೈಸೂರಿನಲ್ಲಿ ಒಂಟಿ ಸಂಸಾರದ ಏರ್ಪಾಡು ಮಾಡಲೇ ಬೇಕಾಯಿತು.

ಬಸ್ ನಿಲ್ದಾಣದಲ್ಲಿ ಹೊರಗೆ ಸಾಲಾಗಿ ನಿಂತ ಆಟೋರಿಕ್ಷಾ ಒಂದರಲ್ಲಿ ಆರೂಢಳಾಗಿ ರೇಡಿಯೋ ಸ್ಟೇಶನ್ನಿಗೆ ಒಯ್ಯಲು ಹೇಳಿದೆ. ಆತ-'ರೈಲ್ವೆ ಸ್ಟೇಶನ್ನೊ? ಪೊಲೀಸ್ ಸ್ಟೇಶನ್ನೊ?' ಎಂದು ಮರುಸವಾಲು ಹಾಕಿದ. ಈ ಮಂಕು, ಇನ್ನೆಲ್ಲಾದರೂ ಒಯ್ದಾನು! ಎಂದು ಇನ್ನೊಂದು ಆಟೊ ಹತ್ತಿದೆ. ಅವನೂ ಗೊಂದಲದಲ್ಲಿ ಬಿದ್ದು ರೇಡಿಯೋ ಎಂದು



ಏನೋ ನೆನಪಿಸಿಕೊಂಡು 'ಆಕಾಶವಾಣೀನಾ!' ಎಂದಾಗ ಹೌದೆಂದೆ. 'ಇಪ್ಪತ್ತು ರೂಪಾಯಿ ಆಗುತ್ತೆ!' ಎಂದ. ಅಷ್ಟು ದೂರವಿಲ್ಲವೆಂದು ಗೊತ್ತಿದ್ದ ನಾನು 'ಮೀಟರ್ ಇದೆಯೇ?' ಎಂದು ಕಣ್ಣಾಡಿಸಿದೆ. ಅದು ಬುರಖಾ ಹಾಕಿಕೊಂಡಿತ್ತು! "ನೀವು ಊರಿಗೆ ಹೊಸಬರೆಂದು ಕಾಣುತ್ತೆ" ಎಂದು ಅರ್ಥಪೂರ್ಣವಾಗಿ ನಕ್ಕ. ನಾನು ಇಳಿದು ನಗರಬಸ್ ಸಾರಿಗೆಯ ಕಂಟ್ರೋಲ್ ಆಫೀಸಿನಲ್ಲಿ ಆಕಾಶವಾಣಿಗೆ ಹೋಗುವ ಬಸ್ ವಿಚಾರಿಸಿದೆ. "ಕಂಡಕ್ಟರ್‌ನನ್ನು ವಿಚಾರಿಸಿ" ಎಂದು ನಿರ್ಲಕ್ಷ್ಯದ ಉತ್ತರ ಸಿಕ್ಕಿತು. ಯಾರೋ ಪ್ರಯಾಣಿಕರು ಕರುಣೆಯಿಂದ "ನಗರ ಕೇಂದ್ರನಿಲ್ದಾಣ" ಎಂಬ ಹಣೆಪಟ್ಟಿಯ ಬಸ್ ತೋರಿಸಿದಾಗ ಕಕ್ಕಾವಿಕ್ಕಿಯಾದರೂ ಹತ್ತಿದೆ. ಪ್ರಯಾಣಿಕರಿಂದ ತುಂಬಿ ತುಳುಕುವ ಬಸ್ಸಿನಲ್ಲಿ ಆಕಾಶವಾಣಿಗೆ ಸ್ಟಾಪ್ ಇದೆ ಎಂದು ಖಾತ್ರಿ ಮಾಡಿಕೊಂಡೆ. ಕೊನೆ ನಿಮಿಷದವರೆಗೂ ಬಸ್ ಕಂಡಕ್ಟರ್ ಬರದೇ, "ಇದೇ ಆಕಾಶವಾಣಿ ಸ್ಟಾಪ್" ಎಂದು ಕೂಗಿದಾಗ ಒಂದು ರೂಪಾಯಿ ಪಡೆದು, ಟಿಕೆಟ್–ಚಿಲ್ಲರೆ ಎರಡೂ ಕೊಡದೇ 'ರಾಯಿಟ್' ಎಂದಾಗ ಕರ್ನಾಟಕದ ರಾಜಧಾನಿ ಮತ್ತು ಸಾಂಸ್ಕೃತಿಕ ರಾಜಧಾನಿಗಳ ಸಾರಿಗೆ ವ್ಯವಸ್ಥೆ ಒಂದೇ ರೀತಿಯಾಗಿದೆ ಎಂದು ಅರಿಯುವಂತೆ ಆಯಿತು.

ವೀಳ್ಯ ಜಗಿಯುತ್ತ, ಅಸ್ತವ್ಯಸ್ತ ಸಮವಸ್ತ್ರ ತೊಟ್ಟ, ಡೊಳ್ಳು ಹೊಟ್ಟೆಯ, ಕೆಂಪು ಕಣ್ಣಿನ ಆಕಾಶವಾಣಿ ಕಾವಲುಗಾರ, ಸಶಸ್ತ್ರ ಕಾವಲುಗಾರರಿಬ್ಬರೂ ನಿರ್ಲಕ್ಷ್ಯದಿಂದ ನಿಂತಿದ್ದರೂ ತಾಳ್ಮೆಯಿಂದ "ಒಳಗೆ ಹೋಗಬಹುದೇ?" ಎಂದು ವಿಚಾರಿಸಿದೆ. "ಸಿಕ್ಕ ಸಿಕ್ಕವರನ್ನು ಒಳಗೆ ಬಿಡಲು ಇದೇನು ಜಾತ್ರೆನಾ?" ಎಂದು ಕಾವಲುಗಾರ ಗುಡುಗಿದ. "ನಿರ್ದೇಶಕರನ್ನು ಕಾಣಬೇಕು" ಎಂದಾಗ– "ಇಲ್ಲಿ ಅವರಾರೂ ಇಲ್ಲದೇ ಯುಗಗಳೇ ಕಳೆದಿವೆ. ಇನ್ನಾರು ಬೇಕು ನನಗೇ ಹೇಳಿ!" ಎಂದಾಗ ನಗು ತಡೆದುಕೊಂಡು, ನೆನಪಾದ ಒಂದು ಹೆಸರು ಹೇಳಿ, 'ಅವರನ್ನು ಕಾಣಬೇಕು', ಎಂದಾಗ, ಮೆತ್ತಗಾಗಿ ಒಳಗೆ ಬಿಟ್ಟ.

**ಮೈಸೂರು ಆಕಾಶವಾಣಿ ನಿಲಯದ ಮುಖ್ಯಸ್ಥರಾಗಿ ಮೂರು ವರ್ಷ ದುಡಿದ ಸವಿನೆನಪನ್ನು ಡಾ। ಜ್ಯೋತ್ಸ್ನಾ ಕಾಮತ್ ಅವರು ಇಲ್ಲಿ ಮೆಲುಕು ಹಾಕಿದ್ದಾರೆ.**

ಸುಂದರವಾದ ಗುಲಾಬಿ ಬಣ್ಣದ ಕಟ್ಟಡವನ್ನು ಇಡಿಯಾಗಿ ಸುತ್ತ ಹಾಕಿದೆ. ಯಾರೂ, ಏನು ಬೇಕು? ಎಂದು ಕೇಳಲೇ ಇಲ್ಲ. ಯಾಕೆ ಬಂದಿದ್ದೀರಿ? ಎಂದು ವಿಚಾರಿಸುವ ತಾಪತ್ರಯವನ್ನೂ ತೆಗೆದುಕೊಳ್ಳಲಿಲ್ಲ. ಕಟಾಕಟ್ ಕಟ್, ಬೆರಳಚ್ಚಿನ ಸದ್ದು ಕೇಳುವಲ್ಲಿ ಹೋಗಿ ಇದು ಆಫೀಸಿನ ಕೋಣೆಯೇ ಎಂದು ಖಚಿತಪಡಿಸಿಕೊಂಡು ಒಳ ಹೊಕ್ಕು ಗುಮಾಸ್ತನಂತೆ ತೋರುತ್ತಿದ್ದ ವ್ಯಕ್ತಿಯ ಕೈಯಲ್ಲಿ ವರ್ಗಾವರ್ಗಿಯ ಆರ್ಡರ್ ಪ್ರತಿ ಕೊಟ್ಟಾಗ ಗಾಬರಿಯಿಂದ ತೊದಲಿದ. ಮುಖ್ಯ ಗುಮಾಸ್ತರಿಗೆ "ಸಾರ್, ಸಾರ್" ಎಂದಾಗ "ಅದೇನೋ!" ಎಂದು ದರ್ಪದಿಂದಲೇ ಬಂದವರಿಗೆ ಆ ಪತ್ರವನ್ನು ಮಾತಿಲ್ಲದೇ ಹಸ್ತಾಂತರಿಸಿದ. "ಹೊಸ ನಿರ್ದೇಶಕರು!" ಎಂದೊಡನೆ ಕಚೇರಿಯಲ್ಲಿ ವಿದ್ಯುತ್ ಸಂಚಾರವಾಯಿತು. ಏನು ಮಾಡಬೇಕೆಂದು ತಿಳಿಯದೇ ಕಂಗಾಲಾಗಿದ್ದರೂ ಮರುಕ್ಷಣ ಚೇತರಿಸಿಕೊಂಡು ಕುರ್ಚಿಯ ಧೂಳು ಜಾಡಿಸಿ ಕೂಡ್ರಲು ವಿನಂತಿ ಬಂದಿತು. ಇನ್ನೊಬ್ಬ ಓಡಿ ಹೋಗಿ ಮುಖ್ಯಸ್ಥರ ಕೋಣೆಯ ಬಾಗಿಲು ತೆಗೆದು ಸ್ವಚ್ಛತೆಯತ್ತ ಗಮನ ಹರಿಸಿದ. ಆಳೊಬ್ಬ ಕಾಫಿ ತರಲು ಕ್ಯಾಂಟೀನಿಗೆ ಧಾವಿಸಿದ. "ಮೇಡಂ, ಫೋನ್ ಮಾಡಿದರೆ ಗಾಡಿ ಕಳಿಸಬಹುದಿತ್ತು!" ಇನ್ನೊಬ್ಬಾತ ರಾಗ ಎಳೆದ. "ಅವೆಲ್ಲ ಔಪಚಾರಿಕತೆ ಬೇಡ ಕಣ್ರಿ. ಇದ್ದ

ಸೌಲತ್ತುಗಳಲ್ಲೇ ಎಲ್ಲರೂ ದುಡಿದು ಮೈಸೂರು ಕೇಂದ್ರಕ್ಕೆ ಒಳ್ಳೆ ಹೆಸರು ತರೋಣ,'' ಎಂದೆ. ಅಷ್ಟರಲ್ಲಿ, ಅಲ್ಲಿ ಕೆಲಸ ಮಾಡಿ ನಿವೃತ್ತರಾದ ಅಧಿಕಾರಿಣಿ ಕಾಣಸಿಕೊಂಡರು.

ಮೊದಲೇ ಪರಿಚಿತರಿದ್ದ ಅವರು ಮಾತಿಗಾರಂಭಿಸಿದರು, ''ಮೈಸೂರು, ಬೆಂಗಳೂರಿಗಿಂತ ಚಿಕ್ಕ ಊರು. ಅಂತೆಯೇ ಅಲ್ಲಿಯಂತೆ ನಮ್ಮ ಮನಸ್ಸಿಗೆ ಬಂದಂತೆ ಇರುವಂತಿಲ್ಲ. ಇಲ್ಲಿ ಸ್ಥಾನ-ಮಾನ, ಅಂತಸ್ತು ಕಾಯ್ದುಕೊಂಡು ಹೋಗಬೇಕು. ಇಲ್ಲಿ ಕ್ಲಾರ್ಕುಗಳು ಕೂಡ ರೇಶಿಮೆ ಸೀರೆ ಉಡುವದರಿಂದ ಕೇಂದ್ರ ನಿರ್ದೇಶಕಿಯಾದವರು ಉತ್ತಮ ಬಟ್ಟೆ, ಬರೆ ಒಡವೆಗಳತ್ತ ವಿಶೇಷ ಲಕ್ಷ್ಯ ಹರಿಸಬೇಕು. ಇದರಿಂದ ಆಕಾಶವಾಣಿಗೇ ಶ್ರೇಯಸ್ಸು... ಸದ್ಯಕ್ಕೆ ಧೀಮಂತರೆಲ್ಲ ನಮ್ಮ ಸಂಸ್ಥೆಗೆ ಬಹಿಷ್ಕಾರ ಹಾಕಿದ್ದಾರೆ. (ಆಗ ದಿಢೀರ್ ದೂರದರ್ಶನ ಪ್ರಸಾರ ಪ್ರಾರಂಭಿಸಿ ಕನ್ನಡೇತರ ಕಾರ್ಯಕ್ರಮಗಳನ್ನು ಕೊಡುತ್ತಿದ್ದುದರಿಂದ ಮೈಸೂರಿನ ಪ್ರಮುಖ ಬರಹಗಾರರೆಲ್ಲ ದೂರದರ್ಶನ-ಆಕಾಶವಾಣಿಗಳಿಗೆ ಬಹಿಷ್ಕಾರ ಹಾಕಿದ್ದರು) ಅವರನ್ನ ಉಪಾಯವಾಗಿ ಮಾತನಾಡಿಸಿ ಈ ಕೇಂದ್ರ ಅನೇಕ ಸಮಸ್ಯೆಗಳಿಂದ ನರಳುತ್ತಿದೆ'' ಎಂದು ಹತ್ತಾರಸ್ನು ವಿವರಿಸಿದರು... ಹಿಂದೊಬ್ಬ ಉಚ್ಚ ಅಧಿಕಾರಿಯನ್ನು ನೇಮಿಸಿದಾಗ ಅವರು ಪ್ರಥಮ ದಿನವೇ ಪತ್ರಿಕಾಗೋಷ್ಠಿಯನ್ನು ಕರೆದಿದ್ದರು. ಹಲವಾರು ಕೊರತೆಗಳನ್ನು ಪತ್ರಿಕಾಕರ್ತರು ತೋರಿಸಿಕೊಟ್ಟಾಗ, ''ಆರು ತಿಂಗಳ ಅವಕಾಶ ಕೊಡಿ, ಎಲ್ಲವನ್ನೂ ಸರಿಪಡಿಸುತ್ತೇನೆ,'' ಎಂದು ಆಶ್ವಾಸನೆ ಕೊಟ್ಟು ಮರುದಿನವೇ ಆರು ತಿಂಗಳ ರಜೆಗಾಗಿ ಅರ್ಜಿ ಸಲ್ಲಿಸಿ ಪರಾರಿಯಾಗಿದ್ದರು. ಆ ಅವಧಿಯನ್ನು ತಮಗೆ ಬೇಕಾದ ಊರಿಗೆ ವರ್ಗ ಮಾಡಿಸಿಕೊಳ್ಳಲು ಬಳಸಿದರು ಎಂದು ಸಹೋದ್ಯೋಗಿಯೊಬ್ಬರನ್ನು ನೆನಪಿಸಿಕೊಂಡರು.

ವಾಸದ ಮನೆಯ ಪ್ರಸ್ತಾಪ ಬಂದಾಗ, ''ಇದು ಅರಮನೆಗಳ ಊರು. ಆದರೆ ಬಡವರೂ ಇರಬಹುದಾದ ತಾಣ. ಸೂರೊಂದು ಇರುವ ಪುಟ್ಟ ಕೋಣೆಯಾದರೂ ನಡೆಯುತ್ತದೆ'' ಎಂದಾಗ, ''ಮೇಡಂ ನಿಮಗೆ ಮೈಸೂರಿನ ಬವಣೆ ಗೊತ್ತಿಲ್ಲ. ಲಂಡನ್-ನ್ಯೂಯಾರ್ಕ್‌ಗಳಲ್ಲಿ ವಾಸ ಮಾಡಬಹುದು. ಈ ನಗರದಲ್ಲಿ ಬಾಡಿಗೆ ಮನೆ ಬಲು ಕಷ್ಟ! ಆದರೆ ಒಬ್ಬರೆ ಇರುವುದಾದರೆ ಯತ್ನಿಸಬಹುದು'' ಎಂದು ರಾಗ ಎಳೆದರು. ''ಇಲ್ಲಿಯೇ ಸಮೀಪದಲ್ಲಿ ವೀಣೆ ಜಯಮ್ಮನವರು ವಾಸವಾಗಿದ್ದಾರೆ. ಅವರ ಮನೆಯಲ್ಲಿ ಕೋಣೆಯೊಂದನ್ನು ಬಾಡಿಗೆ ಕೊಡುತ್ತಾರೆಂದು ಕೇಳಿದ್ದೇನೆ'' ಎಂದರು. ಕುತೂಹಲ, ಸಂತೋಷಗಳಿಂದ, ''ಖ್ಯಾತ ಚರಿತ್ರಕಾರ, ಸಂಶೋಧಕ ಡಾ। ಎಂ. ಎಚ್. ಕೃಷ್ಣರವರ ಮನೆಯವರಲ್ಲವೇ? ಏರ್ಪಾಡು ಆದಂತೆಯೇ!'' ಎಂದೆ.

ಜಯಮ್ಮನವರು ವೃದ್ಧಾಪ್ಯದಲ್ಲಿ ತಮಗೊಬ್ಬರಿಗೆಂದೇ ನಿರ್ಮಿಸಿಕೊಂಡ ಮಿನಿ ಮನೆ ವೈಶಿಷ್ಟ್ಯಪೂರ್ಣವಾಗಿತ್ತು. ಪ್ರಾಚೀನಕಾಲದ ಈಜಿಪ್ತ ದೊರೆಗಳು ಮರಣೋತ್ತರ ಜೀವನಕ್ಕಾಗಿ ನಿರ್ಮಿಸಿಕೊಳ್ಳುತ್ತಿದ್ದ ಭವ್ಯ ಪಿರಾಮಿಡ್ ಅಡಿಯ ಸೆಲ್‌ನಂತಹ, ಅಚ್ಚುಕಟ್ಟಾದ ಕಾಂಕ್ರಿಟ್ ಗುಹೆಯಾಗಿತ್ತು. ಸ್ವಯಂಪೂರ್ಣ ಒಬ್ಬರಿಗೆಂದೇ ನಿರ್ಮಿತ ಕಿರಿ ಕೋಣೆ, ಅತಿ ಕಿರಿದಾದ ಕಿಚನ್, ಅತ್ಯಂತ ಕಿರಿದಾದ ಟಾಯಲೆಟ್ ಇದ್ದ ಬಾತ್‌ರೂಂ. ಲತಾಂಗಿಯಾದ ಹೆಣ್ಣೊಬ್ಬಳೇ ಸಲೀಸಾಗಿ ಇರಬಹುದಾಗಿತ್ತು ಆದರೆ ನಾನು? ಅಡಿಗೆ ಮನೆ, ಬಚ್ಚಲಲ್ಲಿ ಕಾಲಿಟ್ಟರೆ, ಹಿಂಗಾಲಿನಲ್ಲಿಯೇ ಹೊರಬರಬೇಕಾಗಿತ್ತು. ಸ್ನಾನಕ್ಕೆ ಹನಿಹನಿಯಾಗಿ ಬಿಸಿ ನೀರು ಬಿಡುತ್ತಿದ್ದ ಪುಟಾಣಿ ಗೀಸರ್ ಕೂಡ ಅಲ್ಲಿತ್ತು. ಶತಕಗಳಿಂದ ಹಸಿದುಕೊಂಡಂತಿದ್ದ ಇರುವೆಗಳು ಏನಿದ್ದರೂ ಮುತ್ತಿ ತಿಂದು ಹಾಕುತ್ತಿದ್ದವು. ಸೊಳ್ಳೆಗಳು ಇರುವೆಗಳೊಂದಿಗೆ ಸೇರಿ ಮನುಷ್ಯರನ್ನು ಕಚ್ಚಿಡುತ್ತಿದ್ದವು. ಯಾರೇ ಬಂದರೂ ಹಾಸಿಗೆ ಸುರುಳಿ ಮಾಡಿ, ಕುರ್ಚಿ ಮಡಚಿಟ್ಟು ಬಾಗಿಲು ತೆರೆದು ಬರಮಾಡಿಕೊಳ್ಳಬೇಕಾಗಿತ್ತು – ವಿಶ್ರಾಂತಿ ಸಮಯದಲ್ಲಿ ವಕ್ಕರಿಸಿದರೆ. ಆರಿಸಿದ ದೀಪಗಳು ಇದ್ದಕ್ಕಿದ್ದ ಹಾಗೆ ಮಧ್ಯರಾತ್ರಿ ಉರಿಯು

ಲಾರಂಭಿಸುತ್ತಿದ್ದವು. ಆದ್ದರಿಂದ ಬಲ್ಬ್ ತೆಗೆದಿಡಬೇಕಾಯಿತು. ಆಫೀಸಿಗೆ ಹತ್ತಿರ ವಿದ್ದದ್ದು ಹೆಚ್ಚಿನ ಅನುಕೂಲವಾಯಿತು.

ಒಂದು ದಿನ ಹೆಲ್ಮೆಟ್ ಹಾಕಿಕೊಂಡು ಕಾಂಪೌಂಡಿನಲ್ಲಿ ಓಡಾಡುತ್ತಿದ್ದುದನ್ನು ನೋಡಿ ಖಿಲಾಡಿ ಸಹೋದ್ಯೋಗಿಯೊಬ್ಬ ಕೇಳಿಯೇ ಬಿಟ್ಟರು ''ಸ್ಕೂಟರಿಲ್ಲದ ನೀವು ಮನೆಯಲ್ಲಿ ಹೆಲ್ಮೆಟ್ ಹಾಕುತ್ತೀರಾ?'' ನಾನು ''ನೋಡಿ, ಕಾಂಪೌಂಡಿನಲ್ಲಿ ಸುತ್ತಲಿರುವ ತೆಂಗಿನ ಮರ ಗಳಲ್ಲಿ ಒಣಗಿದ ಕಾಯಿಗಳು ಒಂದೊಂದಾಗಿ ಬೀಳುತ್ತಲೇ ಇರುತ್ತವೆ. ಮೈಸೂರಿನಲ್ಲಿ ಮೂರು ತಿಂಗಳಿಗೊಮ್ಮೆ ಕಾಯಿ ಕೀಳಿಸುವ ಪರಿಪಾಠ ಇಲ್ಲವೆಂದು ತೋರುತ್ತದೆ! ನನ್ನ ತಲೆ, ಮೈಸೂರಿಗೆ ಬಂದ ತಪ್ಪಿಗೆ ಒಡೆದು ಹೋಳಾಗ ಬಾರದೆಂದು ಮುಂಜಾಗ್ರತೆ'' ಎಂದಾಗ ಎಲ್ಲರೂ ನಕ್ಕರು.

ಆಕಾಶವಾಣಿಗೆ ಬಹಿಷ್ಕಾರ ಹಾಕಿದ ಧೀಮಂತರ ಮನ ಒಲಿಸುವುದು ಹೇಗೆ? ಎಂದು ತುಂಬ ಯೋಚಿಸಿದೆ. ಕೊನೆಗೆ ಅವರೇ ಎಲ್ಲರೂ ಸೇರಿ ಹೊಸ ನಿರ್ದೇಶಕರನ್ನು ಭೇಟಿ ಮಾಡಲು ಬರುತ್ತಿರುವ ವಿಚಾರ ತಿಳಿದು ನೆಮ್ಮದಿ ಯಾಯಿತು. ''ಬನ್ನಿ, ಬನ್ನಿ, ಸಂತೋಷ'' ಎಂದು ಸ್ವಾಗತಿಸಿದಾಗ, ''ಓಹೋ ನಿಮಗೆ ಕನ್ನಡ ಬರುತ್ತದೆಯಲ್ಲ!'' ಎಂದು ಸೋಜಿಗಪಟ್ಟರು ಮೊದಲನೆಯವರು. ''ಕಾಮತ್ ಎಂದರೆ ಕರಾವಳಿ ಜಿಲ್ಲೆಯವರೇ? ಕಾಮತ್ ಹೊಟೇಲ್ ಸಂಬಂಧಿಕರೇ?'' ವಿಚಾರಿಸಿಕೊಂಡರು ಚಿಕಿತ್ಸಕ ಬುದ್ಧಿಯವರು. ನನ್ನ ಅಲ್ಪ ಪರಿಚಯ ಹೇಳಿ ನಾನು ಡಾ। ಕೃಷ್ಣಾನಂದ ಕಾಮತರ ಪತ್ನಿ, ಎಂದು ಸಾಹಿತ್ಯಿಕ ನಂಟನ್ನು ಹೇಳಿಕೊಂಡಾಗ ಎಲ್ಲರ ಹುಬ್ಬು ಏರಿದವು. ಆ ನಂತರವೂ ಬರುತ್ತಲೇ ಇದ್ದ ಸಾಹಿತಿಗಳಿಗೆ ''ಇವರು ನಮ್ಮ ಕೃಷ್ಣಾನಂದ ಕಾಮತರ ಮನೆಯವರು'' ಎಂದು ಹಿರಿಯ ಸಾಹಿತಿಗಳು ಪರಿಚಯಿಸಿದಾಗ ತಮಾಷೆ ಯೆನಿಸಿತ್ತು. ಯಾರೂ ನೋಡದ ಕಾಮತರು ಬರವಣಿಗೆಯಿಂದಲೇ ಅವರಿಗೆಲ್ಲ ಚಿರಪರಿಚಿತ ರಾಗಿದ್ದರು.

## ಕನಸಿನ ಚಿತ್ತಾರಗಳು

ನಿನ್ನ
ಹಾಲ ಕೆನ್ನೆ
ಜೇನ ತುಟಿ
ಬಿಲ್ಲ ಹುಬ್ಬು
ನೀಳ ನಾಸಿಕ
ಮೀನ ಕಣ್ಣ
ನಿಂಬೆ ಬಣ್ಣ –
ಗಳು
ನನ್ನೆದೆಯ
ಕನಸಿನ
ಚಿತ್ತಾರಗಳು.



● ಎ. ಆಂಜನೇಯ

ಕಾರ್ಯಕ್ರಮಗಳ ಕುರಿತು ನಾನು ಮಾತನಾಡುತ್ತಿದ್ದಂತೆ ಬಹಿಷ್ಕಾರದ ನಿರ್ಧಾರ ಕರಗಿ ಹೋಗಿತ್ತು. ನಂತರದ ದಿನಗಳಲ್ಲಿ ನನಗೆ ಅಲ್ಲಿ ದೊರೆತ ಸಾಹಿತಿ–ಕಲಾವಿದರ ಅಂತಃಕರಣದ ಸಹಕಾರ–ಮಮತೆ, ವಿಶ್ವಾಸ ಗಳನ್ನು ನೆನೆದಾಗ ಮನಸ್ಸು ತುಂಬಿಬರುತ್ತದೆ. ಆ ನಂತರ ಕುವೆಂಪುರವರಿಗೆ ವಂದಿಸಿ ಬರಲು ಹೋದೆ. ಅವರು ಆಕಾಶವಾಣಿಗೆ ಬರದೇ ದಶಕ ಗಳೇ ಸಂದಿದ್ದವು. ವಿಶ್ವಾಸದಿಂದ ಆಗಮಿಸಿ ಆಶೀರ್ವದಿಸಿದ್ದೇ ಅಲ್ಲದೇ ಮುಂದೆ ನಮಗಾಗಿ ಹಲವಾರು ಕಾರ್ಯಕ್ರಮಗಳನ್ನು ಮಾಡಿ ಕೊಟ್ಟರು. 'ವಿಶ್ವಮಾನವ ಸಂದೇಶ'ವನ್ನು ಸಮೂಹಗೀತದಲ್ಲಿ ಕೇಳಿ ಆನಂದಿಸಿದರು. ಮೈಸೂರು ಆಕಾಶವಾಣಿಯ ಚಿನ್ನದ ಹಬ್ಬದ ಸಂದರ್ಭದಲ್ಲಿ ಅವರು ವೇದಿಕೆಯ ಮೇಲೆ ಬಂದದ್ದು ಮಹತ್ವದ ಸನ್ನಿವೇಶ. ಏಕೆಂದರೆ ಐವತ್ತು ವರ್ಷಗಳ ಹಿಂದೆ ಮೊಟ್ಟಮೊದಲ ಬಾರಿ ಮೈಸೂರು ಬಾನುಲಿ ಪ್ರಸಾರ, ಯುವಕವಿ ಕುವೆಂಪು ಅವರ ಕವಿತಾ ವಾಚನದಿಂದಲೇ ಪ್ರಾರಂಭವಾಗಿತ್ತು!

ಒಂದು ದಿನ ವಿ. ಎಸ್. ನಯಪಾಲರ ಭಾರತ ದರ್ಶನದ ಪುಸ್ತಕ ಓದುತ್ತ ಮೈಮರೆತಿದ್ದೆ. ಒಮ್ಮಿಂದೊಮ್ಮೆ ಬೂಟಿನ ಖಟ್, ಖಟ್ ಸಪ್ಪಳ ಮಾಡುತ್ತಾ ಪೊಲೀಸ್ ಪಡೆಯೊಂದು ನನ್ನ ಮಿನಿ ಮನೆಯೆದುರು ಪ್ರತ್ಯಕ್ಷವಾಯಿತು. ಬೆಚ್ಚಿಬಿದ್ದು ಹಾಗೇ ನೋಡುತ್ತ ನಿಂತೆ. ''ಯಾರನ್ನು ಬಂಧಿಸಲು ಬಂದಿದ್ದೀರಿ? ಇಲ್ಲಿ ಯಾರೂ ಕಳ್ಳರು ವಾಸವಾಗಿಲ್ಲ'' ಎಂದು ಧೈರ್ಯ ತಂದುಕೊಂಡು ಕಿರುಚಿದೆ. ಪಡೆಯ ಮುಖ್ಯಸ್ಥ ಬಂದು ಸಲಾಂ ಹೊಡೆದು, ''ಮೇಡಂ, ನಮ್ಮ ಡಿ.ಐ.ಜಿ. ಮತ್ತು ಎಸ್.ಪಿ. ಸಾಹೇಬರು ನಿಮಗೆ ಒಂದು ವಿನಂತಿ ಕಳಿಸಿದ್ದಾರೆ. ಕರ್ನಾಟಕ ಪೊಲೀಸರ ಶತ ವಾರ್ಷಿಕೋತ್ಸವಕ್ಕೆ ತಾವು ವಿಶೇಷ ಆಹ್ವಾನಿತರಾಗಿ ಬಂದು ನಾಲ್ಕು ಮಾತು ಹೇಳಬೇಕಂತೆ'' ಎಂದು ನಮ್ರವಾಗಿ ಹೇಳಿದಾಗ ಜಗತ್ತು ಹೀಗೂ ಇದೆಯೇ? ಎಂದು ಆಶ್ಚರ್ಯವಾಯಿತು. ಇನ್ಸ್‌ಪೆಕ್ಟರರು ತನ್ನನ್ನು



ಪರಿಚಯಿಸಿಕೊಂಡು ''ತಾವು ಕೃಷ್ಣಾನಂದ ಕಾಮತರ ಪತ್ನಿ ಎಂದು ತಿಳಿದಾಗ ಆದ ಆನಂದ ಅಷ್ಟಿಷ್ಟಲ್ಲ. ವಿದ್ಯಾರ್ಥಿಯಾಗಿದ್ದಾಗಿನಿಂದಲೂ ಅವರ ಪುಸ್ತಕಗಳನ್ನು ಓದುತ್ತಲೇ ಬೆಳೆದಿದ್ದೇನೆ. ಅವರನ್ನು ಭೇಟಿ ಮಾಡುವ ಭಾಗ್ಯ ಈವರೆಗೆ ಬಂದಿಲ್ಲ... ಈ ಸಮಾರಂಭಕ್ಕೆ ತಾವು ಆಗಮಿಸುವಂತಾದರೆ ಅವರು ಬಂದಷ್ಟೇ ಸಂತೋಷವಾಗುತ್ತದೆ!'' ಎಂದು ಹೇಳಿದ ಮಾತನ್ನು ಒಪ್ಪದೇ ಇರಲು ಆಗಲೇ ಇಲ್ಲ. ತನ್ನ ಕೋರಿಕೆ ಮಾನ್ಯ ಮಾಡಿದ್ದಕ್ಕಾಗಿ ಇನ್ನೊಂದು ಸಲಾಂ ಹಾಕಿ ಹಿಂದಿರುಗಿದರು.

ದಿನಗಳೆದಂತೆ ಮೈಸೂರಿನ ಸಾಹಿತಿಗಳು, ಕಲಾವಿದರು, ಇತರ ಧೀಮಂತರು ಹೆಚ್ಚೆಚ್ಚು ಆತ್ಮೀಯರಾದರು. ಆರ್. ಕೆ. ನಾರಾಯಣರು ಆಗೀಗ ಬಂದು ಮಾತನಾಡಿಸಿ, ತಾವೇ ನೆಟ್ಟ ಅಶ್ವತ್ಥ ಗಿಡದ (ಈಗದು ದೊಡ್ಡ ಮರ ವಾಗಿದೆ.) ಯೋಗಕ್ಷೇಮ ವಿಚಾರಿಸಿಕೊಂಡು ಹೋಗುತ್ತಿದ್ದರು. ನನ್ನ ವಿನಂತಿಯ ಮೇರೆಗೆ ತಮ್ಮ ಸೋದರ ಪ್ರಸಿದ್ಧ ವ್ಯಂಗ್ಯ ಚಿತ್ರಕಾರ ಆರ್. ಕೆ. ಲಕ್ಷ್ಮಣ್ ಅವರನ್ನು ಆಕಾಶವಾಣಿಗೆ ಕರೆದುಕೊಂಡು ಬಂದು ಕನ್ನಡದಲ್ಲಿ ಭಾಷಣ ರಿಕಾರ್ಡ್ ಮಾಡಲು ಸಹಾಯ ಮಾಡಿದರು. ಹೋದ ಹೊಸದರಲ್ಲಿ ತ.ರಾ.ಸು. ಅವರನ್ನು ಕಂಡಾಗ ತಮ್ಮ ಸಾಹಿತ್ಯ ಜೀವನದ ಹಲವಾರು ನೆನಪುಗಳನ್ನು ಹೇಳಿದ್ದರು. ತಮ್ಮ ಒಂದು ಬಹು ದಿನದ ಕನಸಾದ 'ಶಾಂತಲಾ' ಚಿತ್ರಕ್ಕೆ ಚಿತ್ರಕಥೆ ಬರೆದಿರುವದಾಗಿಯೂ ನಿರ್ಮಾಪಕರಿಗೆ ನನ್ನನ್ನು ಭೇಟಿ ಮಾಡಿ, ಸಮಕಾಲೀನ ವೇಷಭೂಷಣ, ಪರಿಕರಗಳ ಬಗ್ಗೆ ಸಲಹೆ ಪಡೆಯಲು ಹೇಳುವ ದಾಗಿಯೂ ಉದ್ಗರಿಸಿದ್ದರು. ಅವರ ಕನಸು ಅವರೊಂದಿಗೇ ಕೊನೆಗೊಂಡಿತು. ನನ್ನ ಸಂಶೋಧನೆ–''ಮಧ್ಯಯುಗದ ಕನ್ನಡಿಗರ ಸಾಮಾಜಿಕ ಜೀವನ''ವನ್ನು ಅವರು ತುಂಬ ಮೆಚ್ಚಿಕೊಂಡಿದ್ದರು.

ಒಮ್ಮೆ ಎಸ್. ಎಲ್. ಭೈರಪ್ಪ ಮತ್ತು ಚದುರಂಗರು ಜೊತೆಯಾಗಿಯೇ ಆಕಾಶವಾಣಿಗೆ ಬಂದಾಗ ಛಾಯಾಚಿತ್ರಕ್ಕೆ ಒಪ್ಪಿಸಿದಾಗ, ಭೈರಪ್ಪ ನವರು, ''ಬರೆಹ-ಛಾಯಾಚಿತ್ರಗಳಲ್ಲಿ ಕಾಮತ



ರಂಥವರು ಅಪರೂಪ!'' ಎಂದು ಉದ್ಗರಿಸಿದರು. ಚದುರಂಗರು, ''ಯಾರನ್ನು ಕುರಿತು ಹೇಳುತ್ತೀರಿ?'' ಎಂದು ಕೇಳಿದಾಗ– ''ಕೃಷ್ಣಾನಂದ ಕಾಮತರ ಕೃತಿಗಳನ್ನು ಓದಿಲ್ಲವೆ?'' ಎಂದು ಕೇಳಿದರು. ''ಓದಿದ್ದೇನಲ್ಲ?'' ಎಂದಾಗ, ''ಅವರು ಈ ಮೇಡಂ ಯಜಮಾನರು!'' ಎಂದು ಕೇಳಿ ಚದುರಂಗರಿಗೆ ಆದ ಆಶ್ಚರ್ಯ ಅಷ್ಟಿಷ್ಟಲ್ಲ. ''ಈ ವಿಚಾರ ನನಗೆ ಹೇಳೇ ಇಲ್ವಲ್ಲಾ ತಾಯಿ?'' ಎಂದು ಆಕ್ಷೇಪಿಸಿದರು.

ಆದಾಗಲೇ ಎರಡು ವರ್ಷ ಜಾರಿಕೊಂಡರೂ ಯಜಮಾನರು ಒಮ್ಮೆಯೂ ಮೈಸೂರಿಗೆ ಬಾರದ್ದರಿಂದ ಗುಸು ಗುಸು ಮಾತಿಗೆ ಅವಕಾಶವಾಗಬಾರದೆಂದು ರಾಯರಿಗೆ ಬರಲು ಒತ್ತಾಯಿಸಿ ಮೈಸೂರಿನ ಆಕರ್ಷಣೆಗಳನ್ನು ಬಣ್ಣಿಸಲಾರಂಭಿಸಿದೆ. ಭಾರತದಲ್ಲೇ ಅಪೂರ್ವವಾದ ಅರಮನೆ ಇದೆ. ಮೈಸೂರು ಶೈಲಿಯ ಚಿತ್ರಸಂಗ್ರಹವಿದೆ. ಬೃಂದಾವನ ಇದೆ. ಕುಕ್ಕರಹಳ್ಳಿ ಕೆರೆ, ಹಲವಾರು ಪಾರ್ಕುಗಳಿವೆ. ಅಪೂರ್ವದ ಪ್ರಾಣಿಸಂಗ್ರಹಾಲಯ, ರಂಗನತಿಟ್ಟು, ಬೆಳ್ಳೂರಿನ ಕೊಕ್ಕರೆ ಧಾಮ! ಎಂದೆಲ್ಲ ಆಮಿಷ ತೋರಿಸಿದೆ. ಇವುಗಳಲ್ಲಿ ಅವರು ಯಾವುದನ್ನು ಇಷ್ಟಪಟ್ಟರೆಂದು ಹೇಳುವದು ಕಷ್ಟ. ಹತ್ತಿರದ ಸಿ.ಎಫ್.ಟಿ.ಆರ್.ಐ. ಆವಾರದಲ್ಲಿ ಆಗಾಗ ಸುತ್ತಾಡಲು ಹೋಗುತ್ತಿದ್ದೆವು. ಅಲ್ಲಿಯ ಮರವೊಂದರ ಪೊಟರೆಯಲ್ಲಿ ತಾಯಿ ಗೂಗೆ-ಆದರ ಮರಿಗಳ ಚಿತ್ರ ಹಿಡಿಯುವದರಲ್ಲಿ ಯಶಸ್ವಿಯಾದರು. ಅಲ್ಲದೇ ಓಂಗಿಲೆ ಜೋಡಿಯೊಂದು ಆ ಮರದಿಂದ ಈ ಮರಕ್ಕೆ ಹಾರುತ್ತಲೇ ಇತ್ತು. ಹಕ್ಕಿಗಳ ಹಿಂದೆ ಅಲೆಯುವದು ನನ್ನ ಜಾಯಮಾನಕ್ಕೆ ಒಗ್ಗಿದ್ದಲ್ಲವಾದ್ದರಿಂದ, ಅಂದು ರವಿವಾರವಾದ್ದರಿಂದ ಅಭ್ಯಂಜನದ ನೆನಪಾಗಿ, ರಾಯರನ್ನು ಅಲ್ಲೇ ಬಿಟ್ಟು ನನ್ನ ಕುಟೀರಕ್ಕೆ ಧಾವಿಸಿದೆ. ಅಪ್ಪಣೆ ಇಲ್ಲದೇ ಒಳಗೆ ಬಂದು ಛಾಯಾಗ್ರಹಣ ಮಾಡಿದ ಅಪರಾಧಕ್ಕಾಗಿ ಸಂರಕ್ಷಣ ಅಧಿಕಾರಿಗಳು ಆಫೀಸಿಗೆ ಕರೆದೊಯ್ದು, ರಾಯರನ್ನು ಪ್ರಶ್ನಿಸಲಾರಂಭಿಸಿದ್ದರು. ಅಷ್ಟರಲ್ಲಿ ನಾನು ಅಲ್ಲಿ ತಲುಪಿ ಎಲ್ಲವನ್ನು ವಿವರಿಸಿದಾಗ, ಅಧಿಕಾರಿ ಕ್ಷಮೆಯಾಚಿಸಿ, ಸೆರೆ ಹಿಡಿದ ಛಾಯಾಚಿತ್ರಗಳಲ್ಲಿ ಒಂದೊಂದು ಪ್ರತಿ ಕೊಡುವಂತೆ ವಿನಂತಿಸಿಕೊಂಡರು. ಆದರೆ ರಾಯರು ಮುಚ್ಚಿದ ಕ್ಯಾಮರಾ ತಿರುಗಿ ತೆಗೆಯಲಿಲ್ಲ. ಮರುಬಸ್ಸಿಗೆ ಬೆಂಗಳೂರಿಗೆ ಹೊರಟೇ ಬಿಟ್ಟರು.

ಮೂರು ವರ್ಷದ ವಾಸ್ತವ್ಯದಲ್ಲಿ ಮೈಸೂರಿನೊಂದಿಗೆ ಗಾಢವಾದ ಮೈತ್ರಿ ಬೆಳೆದುಬಿಟ್ಟಿತ್ತು. ಅಲ್ಲಿಂದ ನನಗೆ ಮುಂಬೈಗೆ ವರ್ಗವಾಯಿತು. ಹೆಚ್ಚಿನ ಪರಿಚಿತರು ನೊಂದುಕೊಂಡರೂ ದೊಡ್ಡ ಕೇಂದ್ರಕ್ಕೆ ಹೊರಟಿದ್ದೇನೆಂದು ನೆಮ್ಮದಿ ತಂದುಕೊಳ್ಳಲು ಯತ್ನಿಸಿದರು. ಮೊದಲ ದಿನ ಒರಟಾಗಿ ನಡೆದುಕೊಂಡ ಕಾವಲುಗಾರ, ನಮಸ್ಕರಿಸಿ. ''ಅಮ್ಮ, ನೀವು ದೊಡ್ಡವರು. ಬೇರೆಯವರಾಗಿದ್ದರೆ ನೌಕರಿಯೇ ಹೋಗುತ್ತಿತ್ತೋ ಏನೋ! ನೀವು ನನ್ನನ್ನು ಕ್ಷಮಿಸಿದ್ದಲ್ಲದೆ ಬಡ್ತಿ ಬೇರೆ ಕೊಟ್ಟಿದ್ದೀರಿ!'' ಎಂದಾಗ ಅವನ ಕಣ್ಣು ತೇವಗೊಂಡಿದ್ದವು. ●

# ವ್ಯಭಿಚಾರ

**● ಆಶ್ವತ್ಥ**

ಪಿಲಾನಿಯು ಜಯಪುರದ ಬನಿಯ. ಸಣಕಲ ಶರೀರ. ಮೂರುದಿನ ಉಪವಾಸದ ಮೊಗ. ಅವನು ಸಣ್ಣ ಹಾಸಿಗೆಯನ್ನು ಕಂಕುಳಿನಲ್ಲಿ ಇರಿಸಿಕೊಂಡು, ಒಂದು ಲೋಟ ಹಿಡಿದು ಕೊಂಡು ತನ್ನ ಊರಿನಿಂದ ಮುಂಬಯಿಗೆ ಬಂದು ಆಗಲೇ ಬಹಳ ವರ್ಷಗಳಾದುವು. ಈಗ ಅವನ ಮಳಿಗೆ ನಮ್ಮ ಮನೆ ಎದುರಿಗೆ ಎತ್ತರ ವಾದ ಜಗಲಿಯ ಮೇಲಿದೆ. ಹೆಸರಿಗೆ ಮಾತ್ರ ಕಿರಾಣಿ ಅಂಗಡಿ. ಆದರೆ ಅವನಲ್ಲಿ ಸಿಕ್ಕದ ಸಾಮಾನು ಅಪೂರ್ವ ಅನ್ನಿ. ಯುದ್ಧ ಮೊದ ಲಾದ ಮೇಲಂತೂ ಅವನ ವ್ಯಾಪಾರ ಬಹಳ ಭರಾಟೆಯಿಂದ ಸಾಗಿತು. ಬೆಲೆಯು ಹತೋಟಿ ಜಾರಿಗೆ ಬಂದಮೇಲಂತೂ ಅವನ ಲಾಭವೂ ಹತೋಟಿಯನ್ನೆ ಮೀರಿತು. ಮಿತಿಯಾದ ಬೆಲೆಗೆ ಪದಾರ್ಥವನ್ನು ಮಾರಿದರೆ ಅವರ ಕುಲಕ್ಕೇ ಅತಿಯಾದ ಹಾನಿ ಎಂದು ಅವನ ನೀತಿ.

ಉದಾಹರಣೆಗೆ ಸಕ್ಕರೆಯನ್ನೇ ತೆಗೆದುಕೊಳ್ಳಿ. ಇದರ ಮೇಲೆ ಸರಕಾರದ ಕಟ್ಟು ಮೊದಲಾ ದಂದಿನಿಂದ ಇವನ ಬಳಿಯಲ್ಲಿ ಸಕ್ಕರೆಯ ಸರಕು ಬೆಳೆಯುವುದೂ ಮೊದಲಾಯಿತು. ಸರಕಾರಿ ಸಕ್ಕರೆ ಸಾಲದೆಇದ್ದ - ಯಾರಿಗೆ ತಾನೆ ಸಾಕು? - ಸುತ್ತುಮುತ್ತಿನವರಿಗೆಲ್ಲ ಪಿಲಾನಿ ಹತ್ತಿರ ಸಕ್ಕರೆಗೆ ಬರವಿಲ್ಲ ಅನ್ನುವುದು ಗೊತ್ತು. ನೀವು ಹೋಗಿ



ಮೊದಲು ಕೇಳಿದಾಗ ಅವನು 'ಇಲ್ಲ' ಅಂತಲೇ ಹೇಳುವುದು. ಹುಂ. ಸಕ್ಕರೆ ಸರಕಾರದ ಅಂಗಡಿಯಲ್ಲಿಲ್ಲದೆ ಬೇರೆ ಎಲ್ಲಿ ಸಿಕ್ಕಬೇಕು? ಆದರೆ ನೀವು ಕೊಂಚ ನಿಂತು 'ನೋಡಿ, ನನಗೆ ಬಹಳ ಅಗತ್ಯವಿದೆ; ಬೆಲೆಯ ಮುಖ ನೋಡುವುದಿಲ್ಲ. ಏನಾದರೂ ಅಷ್ಟು ಇಷ್ಟು ಉಳಿದಿದ್ದರೆ ಕೊಂಚ ನೋಡಿ' ಎಂದು ಹೇಳಿದರೆ, ಪಿಲಾನಿ ಮಾರ್ವಾಡಿಗೆ ನೀವು ತಂಟೆಕೋರರಲ್ಲ, ಸಾಧುವಾದ ಬಲಿ ಎಂದು ಕಂಡುಬಂದರೆ 'ಹಾಗೇ? ನೋಡುತ್ತೇನೆ. ಏನಾದರೂ ಇದ್ದರೆ ನಿಮಗೆ ಕೊಟ್ಟು ಬಿಡುತ್ತೇನೆ. ಆದರೆ ಬೆಲೆ ಮಾತ್ರ ಪೌಂಡಿಗೆ ಹತ್ತಾಣೆ ಆಗುತ್ತದೆ' ಅನ್ನುವನು. ನೀವು ಬೆಚ್ಚಿ 'ಏನು, ಆರಾಣೆಯಿಂದ...' ಎನ್ನುವಾಗಲೇ ಅವನು ಮಧ್ಯ ಬಾಯಿಹಾಕಿ 'ಆ ಹತೋಟಿ ಮಾತು ಬಿಡಿ. ಈಗ ಸರಕನ್ನು ಜಮಾಯಿಸಬೇಕಾದರೆ ಹತ್ತಾಣೆ ನಾನೇ ಕೊಡಬೇಕು, ಭಾಯಿ. ಇದನ್ನು ಮಾರಿ ನನಗೆ ಒಂದು ಬಿಡಿ ಕಾಸೂ ಲಾಭವಿಲ್ಲ' ಅನ್ನುವನು. ನೀವು ಕೊಂಚ ಮಿಸಿ ಮಿಸಿ ಮಾಡುವಾಗ ಅವನು ಶಾಂತವಾಗಿ ಕುಳಿತಿದ್ದು, ಕಡೆಗೆ ನಿಮಗೇ ಸಾಕಾಗಿ ಸೋತು ನಿಟ್ಟುಸಿರನ್ನು ಬಿಟ್ಟು, 'ಹುಂ ಹೋಗಲಿ, ಕೊಡಿ ಒಂದು ಪೌಂಡು. ನಾಳೆ ಹಬ್ಬ. ಮಿಠಾಯಿ ಮಾಡದೇ ಇದ್ದರೆ ಆಗುತ್ತದೆಯೆ?' ಅಂದರೆ, ಅವನು ನಿಮ್ಮ ಮಾತಿನ ಉತ್ತರಾರ್ಧಕ್ಕೆ ಗಮನಕೊಡದೆ ಒಳಗೆ ಹೋಗಿ, ಒಂದು ಪೊಟ್ಣ ತಂದು, 'ಇಗೋ, ನನ್ನಲ್ಲಿ ಇದ್ದದ್ದೇ ಇಷ್ಟು; ಬಳಿದು ಕೊಟ್ಟಿದ್ದೇನೆ' ಅಂದು, ಕೊಟ್ಟ ನಿಮ್ಮ ರೂಪಾಯಿ ನೋಟನ್ನು ತೆಗೆದುಕೊಂಡು, ನೀವೇನಾದರೂ ಅಲ್ಪ ಸ್ವಲ್ಪ ರಿಯಾಯಿತಿಗೆ ಆಸೆಪಡುತ್ತಿದ್ದರೆ ನಿರಾಶೆ ಮಾಡಿ, ಸರಿಯಾಗಿ ಆರಾಣೆ ಚಿಲ್ಲರೆಯನ್ನು ಎಣಿಸಿ ಕಟುಕ ಹೃದಯದಿಂದ ಕೊಟ್ಟುಬಿಡುವನು.

ಒಂದುದಿನ ಇದಕ್ಕೆ ಇದ್ದಹಾಗೆಯೆ-ನಮ್ಮ ದೃಷ್ಟಿಯಿಂದ-ಕೊಬ್ಬರಿ ಎಣ್ಣೆಯ ಬೆಲೆಯ ಹತೋಟಿ ಬಂದಿತು. ಸರಿ, ಆ ದಿನದಿಂದ ಯಾವ ಅಂಗಡಿಯಲ್ಲೂ ಎಣ್ಣೆಯೇ ಇಲ್ಲ-ನಮಗಾಗಿ. ವಾರದ ಮೇಲೆ ವಾರ ಕಳೆಯಿತು.

**ಪಿಲಾನಿಯ ಕಪ್ಪು ಹಣವನ್ನು ಬಿಳಿದಾಗಿಸಲು ವಕೀಲರು ಸೂಳೆಯೊಬ್ಬಳನ್ನು ನೇಮಿಸಿಕೊಂಡಾಗ 'ವ್ಯಾಪಾರೀ ವ್ಯಭಿಚಾರ' ಪ್ರಾರಂಭವಾಗಿತ್ತು.**

ಮನೆಯಲ್ಲಿ ಇದ್ದ ಎಣ್ಣೆಯೂ ತೀರಿತು. 'ಟಾಂಕೋ' ಮೊದಲಾದ ಎಣ್ಣೆಗಳೂ ಮಾಯ. ಅವು ಇದ್ದರೆ ತಾನೆ ಅವನ್ನು ಕೊಂಡು ಪೂರಯಿಸಬಹುದೊ ನಾವು? ಅಂತು ತಲೆಗೆ ಒಳ್ಳೆಣ್ಣೆಯನ್ನು ಹಚ್ಚಿಕೊಳ್ಳುವ ಗತಿ ಬರುತ್ತಿತ್ತು. ಸರಿ, ಈ ಪಾಡು ಬರುವ ಹಿಂದಿನ ದಿನ ನಾನು ಹೋಗಿ ಪಿಲಾನಿಯನ್ನು ಮರೆಹೊಕ್ಕೆ. ರೂಢಿಯ ಪ್ರಕಾರ ಮೊದಲನೆಯ ಮಾತುಕತೆಯಾದ ಮೇಲೆ ಪಿಲಾನಿಯಲ್ಲಿ ಕೊಂಚವೇ-ನನಗೆ ಬೇಕಾದಷ್ಟೇ ತಾನೆ-ಕೊಬ್ಬರಿ ಎಣ್ಣೆ ಇರುವುದಾಗಿಯೂ, ಆದರೆ ಬೆಲೆಯು ಹತೋಟಿಯ ಹಿಂದಿನ ದಿನ ಇದ್ದುದಕ್ಕೆ ಎರಡರಷ್ಟು ಎಂದು ಗೊತ್ತಾಯಿತು. ಇದನ್ನು ಕೇಳಿದೊಡನೆ ನನಗೆ ಉಂಟಾದ ಕೋಪವನ್ನು ನುಂಗಿಕೊಂಡು ಒಂದು ಪೌಂಡು ಎಣ್ಣೆಯನ್ನು ಕೊಂಡು ಎರಡು ರೂಪಾಯಿ ಕೊಟ್ಟು ಪಿಲಾನಿಯನ್ನು ಮನಸ್ಸಿನಲ್ಲಿ – ಅಂಗಡಿಯನ್ನು ಬಿಟ್ಟಮೇಲೆ ಗಟ್ಟಿಯಾಗಿ– ಶಪಿಸುತ್ತ ಮನೆಗೆ ಬಂದೆ. ಮಾರನೆಯ ದಿನ ನಮ್ಮವಳು ಅದನ್ನು ತಲೆಗೆ ಹಚ್ಚಿಕೊಳ್ಳುತ್ತಾ 'ಇದೇನು ಕೊಬ್ಬರಿ ಎಣ್ಣೆಯೋ ಒಳ್ಳೆಣ್ಣೆಯೋ ತಂದದ್ದು? ಒಳ್ಳೆಣ್ಣೆ ಮನೆಯಲ್ಲೇ ಇತ್ತು' ಅಂದಳು. ಆಗ ನನ್ನಲ್ಲಿ ಅಡಗಿದ್ದ, ಹೆಚ್ಚುತ್ತಿದ್ದ ಸಿಟ್ಟನ್ನು ಎಲ್ಲಿ ತೋರಿಸಬೇಕು? 'ಏನೋ ಎಂತಹದೋ ಸುಮ್ಮನೆ ತಲೆಗೆ ಚಟ್ಟಿಕೋ' ಅಂದು ಗದರಿಸಿದೆ.

ಈ ಮಾದರಿಯ ವ್ಯಾಪಾರದಿಂದ ಪಿಲಾನಿಯು ಅಷ್ಟುಇಷ್ಟು ದುಡ್ಡನ್ನು ಕೂಡಿ ಹಾಕಿರಬೇಕೆಂಬುದನ್ನು ಸುಲಭವಾಗಿ ಊಹಿಸಬಹುದು.

ಹಾಗೆಯೇ ಇವನು ಸುಳ್ಳು ಲೆಕ್ಕದ ಮೂಲಕ ವರಮಾನ ತೆರಿಗೆಯಿಂದ ತಪ್ಪಿಸಿಕೊಂಡಿದ್ದ ನೆಂದೂ ಹೇಳಬಹುದು. ಇದಕ್ಕೆ ಸರಿಯಾಗಿ ಇವನು ಬ್ಯಾಂಕಿನಲ್ಲಿ ಕಳ್ಳ ಹಣವನ್ನು ಇಟ್ಟಿರಲಿಲ್ಲವೆಂದೂ ತಿಳಿದೇ ತಿಳಿಯುತ್ತದೆ. ಅಲ್ಲದೇ ಇವನಿಗೆ ದಿನ ದಿನವೂ ಏರಿ ತಗ್ಗುವ ಚಿನ್ನ ಬೆಳ್ಳಿಗಳನ್ನು ಗುಡ್ಡೆ ಹಾಕಿಕೊಳ್ಳುವ ಧೈರ್ಯವಿರಲಿಲ್ಲವೆಂದರೆ ಇವನ ಗಳಿಕೆ ಎಲ್ಲವೂ ಅವನು ಹಾಗೂ ಹೀಗೂ ನಂಬಿಕೊಂಡಿದ್ದ ಸರಕಾರದ ಹಣದ ರೂಪದಲ್ಲೇ ಇವನ ಬಳಿ ಇದ್ದಿತೆಂದು ಹೇಳಬೇಕಾಗಿಲ್ಲ. ಇನ್ನು ಸ್ಪಷ್ಟವಾಗಿ ಹೇಳುವುದಾದರೆ ಅವನು ಕೂಡಿಟ್ಟು ಕೊಂಡಿದ್ದುದು ಸಾವಿರ ರೂಪಾಯಿ ಮೌಲ್ಯದ ಇಪ್ಪತ್ತಐದು ನೋಟುಗಳನ್ನು.

ಹೀಗಿದ್ದು ಜನವರಿ ಹನ್ನೆರಡನೆಯ ತಾರೀಕಿನ ದಿನದ ಬೆಳಗ್ಗೆ ಪಿಲಾನಿಯು ಮೆಲ್ಲಗೆ ಗುಜರಾತಿ ಪತ್ರಿಕೆಯನ್ನು ತೆಗೆದಾಗ **'Demonetisation'** ಶಾಸನದ ಬರಸಿಡಿಲು ಕಳ್ಳವ್ಯಾಪಾರಿ ಲಂಚ ಕೋರರೆಲ್ಲರಿಗೂ ಬಡಿದಂತೆ ಅವನಿಗೂ ಒಮ್ಮೆಲೇ ಬಡಿಯಿತು. 'ಐನೂರು ರೂಪಾಯಿ ನಿಂದ ಮೇಲಿನ ಮೌಲ್ಯದ ನೋಟುಗಳೆಲ್ಲ ರದ್ದು' ಎಂದಿದ್ದ ದೊಡ್ಡ ಅಕ್ಷರದ ತಲೆಬರಹವು ಕಣ್ಣಿಗೆ ಬಿದ್ದೊಡನೆ ಪಿಲಾನಿಗೆ ತಲೆ ತಿರುಗಿ ಕಣ್ಣು ಕತ್ತಲೆ ಇಟ್ಟಿತು. ಎದೆ ಧಸಕ್ಕೆಂದಿತು. ಉಸಿರು ಮೇಲೆ ಬಂದಿತು. ಕೈ ನಡುಗಿ ಪತ್ರಿಕೆಯು ಬಿದ್ದುಹೋಯಿತು. ಹಣೆಯ ಮೇಲೆ ಬೆವರು ಹನಿಗಟ್ಟಿತ್ತು. 'ಅಯ್ಯೋ ಕೆಟ್ಟೆ! ಕೆಟ್ಟೆ!' ಅಂದುಕೊಂಡ ಬಡ ಪಿಲಾನಿ. ತಲೆಯನ್ನು ನಡುಗುವ ಎರಡು ಕೈಗಳಿಂದಲೂ ಚಚ್ಚಿಕೊಂಡ. 'ಮರುಗಿದನು ಕಲ್ಮರಂ ಕರಗುವಂತೆ.' ಮತ್ತೆ ಪತ್ರಿಕೆಯನ್ನು ತೆಗೆದುಕೊಂಡು ಬುದ್ಧಿಯನ್ನು ಸ್ಥಿಮಿತಕ್ಕೆ ತಂದುಕೊಂಡು ಓದುವುದಕ್ಕೆ ಕೊಂಚ ಕಾಲವೇ ಹಿಡಿಯಿತು. ಆದರೆ ವಿಷಯದ ವಿವರಗಳನ್ನು ಪೂರ್ತಿಯಾಗಿ ಓದಿದಾಗ ಅವನ ಉಸಿರು ಕಟ್ಟಿದ್ದುದು ಸ್ವಲ್ಪ ಬಿಟ್ಟಿತು. ಹುಂ, ಹಣೆಯಬರಹ ತೀರ ಅಷ್ಟು ಕೆಟ್ಟುಹೋಗಿರ ಲಿಲ್ಲ. ನೋಟುಗಳನ್ನು ಬದಲಾಯಿಸಲು ಕೊಂಚ ಕಾಲ ಕೊಟ್ಟಿದ್ದರು. ಆದರೆ... ಆದರೆ ಈ ಬದಲಾವಣೆಯಾಗಬೇಕಾದರೆ ಸಂಪಾದನೆಯ ಸಕಾರಣ ಕೊಡಬೇಕು! ಓ, ಇದಕ್ಕೆ ಏನು ಗತಿ? ತಾನು ಏನನ್ನು ತಾನೇ ಹೇಳಬಲ್ಲ? ಇನ್ನು ತೆರಿಗೆ ವಿಚಾರ ಬೇರೆ-ಶಿವ! ಶಿವ! ಇವಕ್ಕೆಲ್ಲಾ ಏನು ಉಪಾಯ? ಕಡೆಗೂ ದುಡ್ಡು ಹೋದಂತೆಯೋ? ಇಲ್ಲ, ಇದನ್ನು ಉಳಿಸಿಕೊಳ್ಳಲು ಹೋಗಿ ಬಂದಿಖಾನೆಗೆ ಹೋಗುವುದೋ? ಈ ಕಷ್ಟ ದಿಂದ ಪಾರಾಗಿ ಹಣವನ್ನು ಉಳಿಸಿಕೊಳ್ಳುವುದು ಹೇಗೆ? ಹೇಗೆ ನಿಜವಾಗಿ?

ಪಿಲಾನಿಯು ತಲೆ ಸಿಡಿಯುವಷ್ಟು ಯೋಚಿ ಸಿದ. ಪ್ರಯೋಜನವಾಗಲಿಲ್ಲ. ಆ ದಿನವಂತೂ ರಿಸರ್ವ್ ಬ್ಯಾಂಕಿಗೆ ರಜವಾಗಿ ಕಾರ್ಯದ ಆತುರವಿರಲಿಲ್ಲ. ಪಿಲಾನಿಯು ಅಂಗಡಿಯನ್ನು ಮುಚ್ಚಿ ಹಾಸಿಗೆಯ ಮೇಲೆ ಮಲಗಿಕೊಂಡು ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಒದ್ದಾಡಿದ. ಊಟವು ಒಂದು ತುತ್ತೂ ಒಳ ಹೋಗಲಿಲ್ಲ. ಮಧ್ಯಾಹ್ನ ರಾತ್ರಿಯೆಲ್ಲ ಜ್ವರ ಬಂದವನಂತೆ ನರಳಿದ. ಪಿಲಾನಿಯ ಹೆಂಡತಿ ಶಾಂತಾ ಬಾಯಿ ಇನ್ನಿಲ್ಲದ ಹಾಗೆ ಕಾರಣವನ್ನು ಬೇಡಿದಳು. ಆದರೆ ಪಿಲಾನಿಯು ಮಾತ್ರ ಏನನ್ನೂ ಹೇಳ ಲಿಲ್ಲ. ನರಳುವುದನ್ನು ಬಿಟ್ಟು ಸುಮ್ಮನಾಗಲೂ ಇಲ್ಲ. ಮರುದಿನವಂತೂ ಅವನ ಪಾಡು ಹೇಳು ವಂತಿರಲಿಲ್ಲ. ಆ ದಿನ ದುಡ್ಡು ಸಿಕ್ಕುವ ಸಂಭವ ವುಂಟು. ಆದರೆ ಇವನು ಅದನ್ನು ಉಪ ಯೋಗಿಸಿಕೊಳ್ಳುವಂತಿರಲಿಲ್ಲ. ಸುಮ್ಮನೆ ದಿಕ್ಕು ತೋಚದೆ ಮಿಳಿಮಿಳಿಗುಟ್ಟಿದ. ಆ ದಿನವೂ ಉಪವಾಸ. ನಿದ್ದೆಯಿಲ್ಲದೆ ಕಣ್ಣುಗಳು ಗುಳಿ ಗಿಳಿದಿದ್ದವು. ಪಿಲಾನಿಯು ಈ ಪರಿಸ್ಥಿತಿ ಯಲ್ಲಿದ್ದುದನ್ನು ಶಾಂತಬಾಯಿಯು ಇಲ್ಲಿಯ ವರೆಗೆ ಎಂದೂ ಕಂಡಿರಲಿಲ್ಲ. ಅವಳಿಗೆ ಗಾಬರಿ ಯಾಯಿತು. ಮರುದಿನ ರಾತ್ರಿಯ ಹೊತ್ತಿಗೆ ಅವಳು ನಿರ್ಧರಿಸಿ, 'ನಿಮಗೆ ಏನೋ ದೊಡ್ಡ ಜಡ್ಡು ಹಿಡಿದಿದೆ. ವೈದ್ಯರನ್ನು ಬರಮಾಡುತ್ತೇನೆ' ಎಂದು ಗಂಡನಿಗೆ ತಿಳಿಸಿದಳು. ಅವನು 'ಬೇಡ' ಎಂದ. ಅವಳು ಪಟ್ಟನ್ನು ಬಿಡಲಿಲ್ಲ. ಅವನು ವಿಷಯವನ್ನು ಬಿಡಿಸಲಿಲ್ಲ. ಕೊನೆಗೆ ಅವಳನ್ನು ತಡೆಯುವ ದಾರಿಯನ್ನು ಕಾಣದೆ ಪಿಲಾನಿಯು 'ನನ್ನ ರೋಗಕ್ಕೆ ವೈದ್ಯರ ಹತ್ತಿರ ಮದ್ದಿಲ್ಲ'

ಎಂದು ಕ್ಷೀಣ ಸ್ವರದಿಂದ ಹೇಳಿದ. ಅವಳು ಸಿಟ್ಟುಗೊಂಡು 'ರೋಗವನ್ನು ವೈದ್ಯರಲ್ಲದೆ ಇನ್ನೇನು ಲಾಯರು ವಾಸಿಮಾಡುತ್ತಾರೆಯೇ?' ಎಂದು ಕೇಳಿದಳು. ಪಿಲಾನಿಯು 'ಆ ಏನೆಂದೆ? ಲಾಯರೆ?' ಅಂದ. ಅವನ ಮನಸ್ಸಿನ ಕಾರ್ಮುಗಿಲಿನಲ್ಲಿ ಮಿಂಚೊಂದು ಹೊಳೆಯಿತು. ಹುಂ, ತನ್ನ ವ್ಯಾಪಾರದ ಬುದ್ಧಿಯು ನಿಸ್ಸಹಾಯವಾದ ಕಡೆ ಲಾಯರು ಕೊಂಚ ನೆರವಾಗಬಹುದೇನೊ. ನಿಜ, ಇದು ಪರೀಕ್ಷಿಸ ತಕ್ಕದ್ದೆ. ಹೀಗೆ ಹೊಳೆದ ಮೇಲೆ ಪಿಲಾನಿಯು ಕೊಂಚ ಸಮಾಧಾನ ತಂದುಕೊಂಡು, ಶಾಂತಾಬಾಯಿಗೆ 'ನೀನು ಹೇಳಿದುದು ಒಳ್ಳೆಯದಾಯಿತು. ನಾಳೆ ಲಾಯರನ್ನು ನೋಡುತ್ತೇನೆ' ಅಂದ. ಶಾಂತಾಬಾಯಿ 'ನಿಮಗೇನು ಹುಚ್ಚು ಹಿಡಿದಿರಬೇಕು. ಲಾಯರು ಏನನ್ನು ಮಾಡಬಲ್ಲರು? ಅವರ ಬಳಿ ಜ್ವರದ ಗುಳಿಗೆ ಇರುತ್ತದೆಯೇ' ಅಂದಳು. ಪಿಲಾನಿಯು 'ಹುಂ ನನ್ನ ಜ್ವರಕ್ಕೆ ಮಾತ್ರೆ ಸಿಕ್ಕರೆ ಅವರಲ್ಲಿಯೆ' ಅಂದ. 'ಹಾಗಾದರೆ?' ಎಂದು ಶಾಂತಾಬಾಯಿ ಬಲವಾಗಿ ಗಂಟುಬಿದ್ದಳು. ಪಿಲಾನಿಯು ಒಂದೇ ಮಾತಿನಲ್ಲಿ 'ಲೇ, ಹುಚ್ಚಿ, ಈಗ ನಾನು ದಿವಾಳಿ ಆಗುವ ಗತಿಗೆ ಬಂದು ಬಿಟ್ಟಿದ್ದೇನೆ– ಈ ಹೊಸ ಹಣದ ಶಾಸನದಿಂದ' ಅಂದ. ಶಾಂತಾಬಾಯಿ 'ಹಾಗೇ?' ಅಂದು ಅವನ ಗುಟ್ಟನ್ನೆಲ್ಲ ಮೆಲ್ಲಗೆ ಹೊರಗೆಳೆದಳು. ಆಗ ಇಬ್ಬರೂ ಸೇರಿ ವಿಷಯವನ್ನು ಕಡೆದರು. ಹೇಗೆ ಹೇಗೆ ಎಷ್ಟು ಎಷ್ಟು ಕಡೆದರೂ ನಿರಾಶೆಯ ಹಾಲಾಹಲವೇ ಹುಟ್ಟುತ್ತಿತ್ತು. ಆ ದಿನ ಗಂಡನೊಂದಿಗೆ ಹೆಂಡತಿಗೂ

## 'ಅಶ್ವತ್ಥ' ಅವರ ಕಥೆಗಳು –

## ನವಿರಾದ ಹಾಸ್ಯಮಿಶ್ರಿತ, ಲವಲವಿಕೆಯ ಶೈಲಿ

1992ರ ಜೂನ್ 16ಕ್ಕೆ ಎಂಬತ್ತು ದಾಟಿದ 'ಅಶ್ವತ್ಥ'ರು (ಕೂದುವಳ್ಳಿ ಅಶ್ವತ್ಥನಾರಾಯಣ ರಾಯರು) ವೃತ್ತಿಯಿಂದ ಇಂಜಿನಿಯರರು. ಸಿಮ್ಲಾದಲ್ಲಿ ಮಿಲಿಟರಿ ಇಂಜಿನಿಯರಿಂಗ್ ಸರ್ವಿಸ್‌ನಲ್ಲಿದ್ದ ಸ್ಥಾನಕ್ಕೆ 'ಭಾರತ ಬಿಡಿ' ಚಳುವಳಿಯ ಸಮಯದಲ್ಲಿ ರಾಜೀನಾಮೆ ನೀಡಿದರು. ಕಾಶಿ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ರೀಡರ್ ಆಗಿದ್ದು ಮೂವತ್ತು ವರ್ಷಗಳ ಕೆಳಗೆ ಸ್ವಇಚ್ಛೆಯಿಂದ ನಿವೃತ್ತರಾಗಿ ಮೈಸೂರಿನಲ್ಲಿದ್ದಾರೆ. ಸುಮಾರು 200 ಕಥೆಗಳನ್ನು ಬರೆದಿದ್ದಾರೆ.

ಮಾಸ್ತಿಯವರ ನಂತರದ ಪೀಳಿಗೆಯ ಪ್ರಮುಖ ಕಥೆಗಾರರಲ್ಲಿ ಒಬ್ಬರಾದ 'ಅಶ್ವತ್ಥ'ರ ಪ್ರಾರಂಭದ ಕಥೆಗಳು ಮಧ್ಯಮವರ್ಗದ ಬದುಕಿನಿಂದ ವಸ್ತುಗಳನ್ನು ಪಡೆದುಕೊಂಡವು. (ಅನಂತರ ಕಥೆಗಳಲ್ಲಿ ಬಡವರ ಬದುಕಿನಿಂದಲೂ ವಸ್ತುವನ್ನು ತೆಗೆದುಕೊಂಡಿದ್ದಾರೆ.) ಆ ಪೀಳಿಗೆಯ ಬಹುಮಂದಿ ಕಥೆಗಾರರಲ್ಲಿ ಕಾಣುವ ಭಾವಾತಿರೇಕವಂತೂ ಅವರ ಕಥೆಗಳಲ್ಲಿ ಇಲ್ಲವೇ ಇಲ್ಲ, ಭಾವತೀವ್ರತೆಯೂ ವಿರಳ; ಆ ಕಥೆಗಾರರಲ್ಲಿ ಕಾಣುವ ಸಮಾಜ ಸುಧಾರಣೆಯ ಸ್ಪಷ್ಟ ಹಂಬಲ, 'ಕೆಸರಿನಲ್ಲಿ ಕಮಲ'ವನ್ನು ಹುಡುಕಿ ಅನುಕಂಪದೊಡನೆಯೇ ಒಂದು ಬಗೆಯ 'ರೊಮ್ಯಾಂಟಿಕ್' ವೈಭವೀಕರಣ ಮಾಡುವ ಪ್ರವೃತ್ತಿ ಇವೂ ಇಲ್ಲ. ಸಾಮಾನ್ಯವಾಗಿ ಅವರ ಕಥನ ರೀತಿಯಲ್ಲಿ, ದನಿಯಲ್ಲಿ ನವಿರಾದ ಹಾಸ್ಯ ಉಂಟು. ನೈತಿಕ ತೀರ್ಮಾನವನ್ನು ಕಡೆಗಣಿಸದೆ, ಆದರೆ ಮನುಷ್ಯ ಸ್ವಭಾವದ ವೈಚಿತ್ರ್ಯ ಸಂಕೀರ್ಣತೆಗಳಲ್ಲಿ ಲವಲವಿಕೆಯ ಆಸಕ್ತಿಯನ್ನುಳಿಸಿಕೊಂಡ ಕಥೆಗಳು ಅವರವು. (ನೈತಿಕತೆಯನ್ನು ಗಂಭೀರವಾಗಿ ಕಲಾತ್ಮಕವಾಗಿ ಅವರು ವಿಶ್ಲೇಷಿಸುವುದನ್ನು 'ಧರ್ಮಕೊಂಡದ ಕಥೆ'ಯಲ್ಲಿ ಕಾಣಬಹುದು.) ನಗರಜೀವನದ ಸಮಸ್ಯೆಗಳನ್ನು ಹಾಸ್ಯದ ದನಿಯಲ್ಲೆ ಬಿಡಿಸಿ ತೋರಿಸಿದ್ದಾರೆ. ಎದುರಿಗೆ ಕುಳಿತು ಮಾತನಾಡುತ್ತ ನಗುನಗುತ್ತ ಸ್ನೇಹಿತರಿಗೆ ಕಥೆ ಹೇಳುವ ರೀತಿ ಅವರಿಗೆ ಒಲಿದಿದೆ.

ನಿದ್ರಾಭಂಗವಾಯಿತು. ಒಟ್ಟಿನಲ್ಲಿ ಲಾಯರ ಬಳಿಗೆ ಹೋಗುವುದೇನೋ ನಿರ್ಧಾರವಾಗಿ ದ್ದಂತಿದ್ದಿತು. ಈ ಬಗ್ಗೆ ಪಿಲಾನಿಯ ಪೇಚಾಟ ವೆಂಥರೆ ಲಾಯರು ಬಹಳ ದುಡ್ಡನ್ನು ಎಳೆದು ಬಿಡುವರೆಂಬುದು. ಆದರೆ ಅದಕ್ಕೆ ಉಪಾಯ ವಿಲ್ಲವೆಂದು ಶಾಂತಾಬಾಯಿಯ ವಾದ. ಅಂತೂ ಕಡೆಗೆ ಪಿಲಾನಿಯು ತಮ್ಮ ಊರಿನವರೇ ಆದ ಶ್ರೀ 'ಇಚ್ಛಾಪೂರಯ' ಅವರಲ್ಲಿ ಹೋದರೆ ಆದಷ್ಟು ಕಡಿಮೆಯ ಖರ್ಚಿನಲ್ಲಿ ಕೆಲಸವು ಸಾಗಬಹು ದೆಂದು ಸಮಾಧಾನ ತಂದುಕೊಂಡು ಬೆಳಗಾಗು ವುದನ್ನೇ ಕಾಯುತ್ತಿದ್ದ.

ಪಿಲಾನಿಯು ಇಚ್ಛಾಪೂರಯರನ್ನು ಕಂಡಾಗ ಆ ದಪ್ಪ ವಕೀಲರು ತಮ್ಮ ವಿಶಾಲವಾದ ಕೋಣೆ ಯಲ್ಲಿ ಮೇಜಿನ ಮೇಲೆ ದಪ್ಪ ದಪ್ಪ ಪುಸ್ತಕ ಗಳನ್ನು ಮುಂದೆ ಬಿಚ್ಚಿಕೊಂಡು, ದಪ್ಪ ಕನ್ನಡಕವನ್ನು ಹಾಕಿಕೊಂಡು ಓದಿನಲ್ಲಿ ಮಗ್ನ ರಾಗಿದ್ದರು. ಹಿಂದೆಯೇ ಇಬ್ಬರಿಗೂ ಪರಿಚಯ ವಿದ್ದುದರಿಂದ, ವಕೀಲರು ಪಿಲಾನಿಯನ್ನು ಗಮನಕ್ಕೆ ತಂದುಕೊಂಡು ಕೂಡಲು ಹೇಳಿದರು. ಅವರ ಕುಶಲ ಪ್ರಶ್ನೆಗಳಾದ ತರುವಾಯ ಪಿಲಾನಿಯು 'ಎಲ್ಲವೂ ತಮ್ಮ ದಯ' ಎಂದು ಹೇಳಿದ ಮೇಲೆ ವಕೀಲರು ತುಟಿ ಚೊಕ್ಕಟ ಮಾಡಿ ನಗುತ್ತಾ ಪಿಲಾನಿಯು ಬಂದ ಕಾರಣವನ್ನು ಊಹಿಸಿದಂತೆ 'ಹುಂ, ಏನು ತಾವು ಇಲ್ಲಿಗೆ ಬಂದಿದ್ದು?' ಎಂದು ಕೇಳಿದರು.

'ಕೊಂಚ ಕಷ್ಟಕ್ಕೆ ಸಿಕ್ಕಿದ್ದೇವೆ.'

'ಓ, ಏನು ಈ ಹಣದ ಶಾಸನದ ಬಗ್ಗೆಯೋ ಹೇಗೆ?' ವಕೀಲರು ಸ್ಪಷ್ಟವಾಗಿಯೇ ನಕ್ಕರು.

---

ಅವರ ಪ್ರಾರಂಭದ ಕಥೆಗಳ ಸಾಧನೆಯೇ ಎಷ್ಟು ಎತ್ತರದ್ದು ಎನ್ನುವುದನ್ನು ಅವರ ಮೊದಲನೆಯ ಸಂಗ್ರಹ 'ಸಣ್ಣ ಕತೆಗಳು' (1947) ಕೃತಿಯಿಂದ ಆಯ್ದ 'ವ್ಯಭಿಚಾರ' ತೋರಿಸುತ್ತದೆ. ಅವರು ಯಾವಾಗಲೂ ನಮ್ಮ ಗಮನವನ್ನು ಹಿಡಿದು ಉಳಿಸಿಕೊಳ್ಳುವ ಕಥೆಯನ್ನು ಹೇಳುತ್ತಾರೆ. ಕಥೆ ನಾವು 'ಓದು'ವಾಗಲೂ ಹೇಳುವವರ ಹಾಸ್ಯ, ತೀಕ್ಷ್ಣವಲ್ಲದ ಆದರೆ ಗಮನ ಸೆಳೆಯುವ ವ್ಯಂಗ್ಯ ಇವು ಬೆರೆತ ದನಿಯನ್ನು 'ಕೇಳು'ತ್ತಿರುತ್ತೇವೆ. ಈ ಹಾಸ್ಯ ಕಥೆ ಎತ್ತಿಕೊಂಡ ವಸ್ತುವಿನ ಗಾಂಭೀರ್ಯವನ್ನೂ ನೈತಿಕ ಪ್ರಾಧಾನ್ಯವನ್ನೂ ಹೆಚ್ಚಿಸುತ್ತದೆ. 'ವ್ಯಭಿಚಾರ' ದಲ್ಲಿ ಕಥೆಯ ಪರಿಣಾಮ ಅನಿರೀಕ್ಷಿತ, ಆದರೆ ನಮಗೆ ಖುಷಿ ಕೊಡುವ ಪರಿಣಾಮ, ಕಥೆಯ ಶೀರ್ಷಿಕೆ ನಿರ್ದೇಶಿಸುವ ವಸ್ತುವಿನ ಸ್ವರೂಪವನ್ನು ಬಿಡಿಸಿ ತೋರಿಸುವ ಪರಿಣಾಮ, ಕಥೆಯಲ್ಲಿ ಸುಳಿಯುತ್ತಲೇ ಪಾತ್ರಗಳು ಹೇಗೆ ಜೀವಂತಿಕೆ ಪಡೆಯುತ್ತವೆ, ಪ್ರತ್ಯೇಕತೆ (ಇಂಡಿವಿಜ್ಯುಯಾಲಿಟಿ) ಸಾಧಿಸುತ್ತವೆ ಎನ್ನುವುದನ್ನು ಗಮನಿಸಬೇಕು. ಕಥೆಯ ವಸ್ತುವಿನ ಸ್ವರೂಪ ಸ್ಪಷ್ಟವಾಗಬೇಕಾದರೆ ವ್ಯಭಿಚಾರದ ಬಗೆಬಗೆಗಳು ಮಾನವರೂಪ ಪಡೆದು ಕ್ರಿಯೆಯಲ್ಲಿ ತೊಡಗಬೇಕು. ಇದರಿಂದ ಕಥೆಯಲ್ಲಿ ಒಂದೆರಡೇ ಪಾತ್ರಗಳು ಪ್ರಾಧಾನ್ಯ ಪಡೆಯುವಂತಿಲ್ಲ; ಸಣ್ಣ ಕಥೆಯಲ್ಲಿ ಹಲವು ಪಾತ್ರಗಳನ್ನು ವಿವರವಾಗಿ ಬಿಡಿಸಿ ನಿಲ್ಲಿಸಲು ಅವಕಾಶವಿಲ್ಲ. ಇಲ್ಲಿ ಪ್ರತಿ ಪಾತ್ರವೂ 'ವ್ಯಭಿಚಾರ'ದ ಒಂದು ರೂಪವನ್ನು ತಾಳಿ ನಿಂತಿದೆ; ಆದರೆ ಇಷ್ಟೇ ಅವಕಾಶದಲ್ಲಿ ಪ್ರತಿಯೊಂದು ಪಾತ್ರವೂ ಜೀವಂತವಾಗುತ್ತದೆ, 'ಕನ್‌ವಿನ್‌ಸಿಂಗ್' ಆಗಿದೆ. ಇವುಗಳ ಪರಸ್ಪರ ಪ್ರತಿಕ್ರಿಯೆಗಳಲ್ಲಿ ಒಂದನ್ನೊಂದು ಅವಲಂಬಿಸುತ್ತ ಒಂದರೊಡನೊಂದು ಸಹಕರಿಸುತ್ತ ಭ್ರಷ್ಟ ಜಗತ್ತನ್ನು ನಿರ್ಮಿಸುತ್ತ, ಕಡೆಗೆ ತಾವು ನೆಚ್ಚಿದ ಬುದ್ಧಿಶಕ್ತಿ ಅನಿರೀಕ್ಷಿತವಾಗಿ ತಮಗೆ ವಿರೋಧವಾದಾಗ ಕುಸಿಯುತ್ತವೆ. ಕ್ರಾಂತಿಗೆ ಕರೆ ನೀಡದ ಅಶ್ವಸ್ಥರ ಕಥೆ ಸಮಾಜದ ಹುಳುಕನ್ನು ಎತ್ತಿ ತೋರಿಸುತ್ತ, ದುಷ್ಟತನದ ಸೋಲನ್ನು ಸೂಚಿಸುತ್ತ ಪ್ರಗತಿಶೀಲದ ಕಡೆ ಮುಖ ಮಾಡಿದೆ.

● ಆಯ್ಕೆ–ವಿಮರ್ಶೆ : ಪ್ರೊ। ಎಲ್. ಎಸ್. ಶೇಷಗಿರಿರಾವ್

'ತಮಗೆ ಹೇಗೆ ತಿಳಿಯಿತು?'

'ಅಹಹ! ಹೇಗೆ? ಮೋಡ ಕಟ್ಟಿರುವಾಗ ಮಳೆ ಬರಬಹುದಲ್ಲವೆ?'

'ತಾವು ಸರಿಯಾಗಿ ಊಹಿಸಿದಿರಿ.'

'ಹನ್ನೆರಡನೆಯ ತಾರೀಖಿನಿಂದ ಇದು ಆರನೇ ಕೇಸು ನನಗೆ. ತಿಳಿಯಿತೆ? ಎಲ್ಲವೂ ಇದೇ ಸಂದರ್ಭದ್ದೇ. ನಾನು ಪುಸ್ತಕವನ್ನೆಲ್ಲ ತಿರುವಿಹಾಕಿ ಏನಾದರೂ ಸರಿಯಾದ ಉಪಾಯ ಕಂಡುಹಿಡಿಯಬೇಕು ಅಂತ ನೋಡುತ್ತಿದ್ದೇನೆ. ಒಬ್ಬರ ಪರವಾಗಿ ಸರಕಾರದ ಮೇಲೆ ಕೇಸನ್ನು ಹೂಡಿಸಿದ್ದೇನೆ. ಅದಕ್ಕಿಂತಲೂ ಸುಲಭವಾದ ದಾರಿ ಬೇರೆ ಒಂದು ಇದ್ದಹಾಗೆ ಕಾಣುತ್ತದೆ.'

'ತಾವು ಅಷ್ಟು ಉಪಕಾರ ಮಾಡಿದರೆ!'

'ಇದರಲ್ಲೇನು ಉಪಕಾರ ಏನು? ನಮ್ಮ ಸಲಹೆಯನ್ನೇನು ಬಿಟ್ಟೀ ತೆಗೆದುಕೊಳ್ಳುತ್ತೀರ?'

'ಹಾಗಲ್ಲ, ನಾನೇನೋ ಬಡವನೆ.'

'ಹುಂ. ಯಾರಲ್ಲ-- ಈಗ? ಈಗ ಯುದ್ಧ ಕಾಲದಲ್ಲಿ ಪದಾರ್ಥಗಳ ಬೆಲೆ ಆಕಾಶಕ್ಕೇರಿದಾಗ?'

'ನಿಜ.'

'ಸರಿ, ತಮ್ಮದೆಷ್ಟು ದುಡ್ಡು ಸಿಕ್ಕಿಹಾಕಿಕೊಂಡಿದೆ?'

'ಇಪ್ಪತ್ತೈದು ನೋಟುಗಳು.'

'ಏನು ಐನೂರರದ್ದೋ?'

'ಇಲ್ಲ. ಸಾವಿರದ್ದು.'

'ಹುಂ!'

ವಕೀಲರು ಯೋಚಿಸಿದರು. ಪಿಲಾನಿಯೂ ಒದ್ದಾಡುತ್ತಿದ್ದ. ಎರಡು ನಿಮಿಷಗಳ ತರುವಾಯ ವಕೀಲರು ಪಿಲಾನಿಯನ್ನು ನೋಡಿ,

'ನನ್ನ ಫೀ ಸೇಕಡ ಹತ್ತು' ಅಂದರು.

ಪಿಲಾನಿಯ ಎದೆ ಜಗ್ಗಿಂದಿತು. 'ಅಬ್ಬಬ್ಬ ಎರಡು ಸಾವಿರದ ಐನೂರು ರೂಪಾಯಿ! ಅಯ್ಯೋ ಈ ಪಕ್ಷಕ್ಕೆ ಹಾಳು ತೆರಿಗೆಯನ್ನೇ ಕೊಡಬಹುದಾಗಿದ್ದಿತ್ತೊ ಏನೋ. ಇವರು ತನ್ನ ಊರಿನವರು ಎಂದು ಬಂದರೆ ಇದೇನು ಹೀಗೆ ಸುಲಿಯುತ್ತಾರೆ? ಬೇರೆ ದಾರಿಯೇ ಇಲ್ಲವೆ?'

ಈ ಬಾರಿ ಪಿಲಾನಿಯು ಚಿಂತಾಸಕ್ತನಾದ, ತನ್ನ ಸರದಿಯಲ್ಲಿ. ಇದನ್ನು ಕಂಡು ವಕೀಲರು ಮತ್ತೆ ಪುಸ್ತಕಗಳ ಕಡೆಗೆ ತಿರುಗಿದ್ದರು. ಪಿಲಾನಿಯು ಮನಸ್ಸಿನಲ್ಲೇ ಕಸರತ್ತು ಮಾಡಿ ದಣಿದು, ವಕೀಲರ ಕಡೆಗೆ ದೈನ್ಯದೃಷ್ಟಿಯಿಂದ ನೋಡಿ ಫಲ ಪಡೆಯದೆ,

'ಇದು ನಾನು ಬಹು ಕಷ್ಟಪಟ್ಟು ಸಂಪಾದಿಸಿದ ಆಸ್ತಿ' ಅಂದ.

'ಯಾರು ಇಲ್ಲ ಅಂದರು? ಸರಿ.'

'ಅನ್ಯಾಯದ್ದಲ್ಲ.'

'ನನಗೆ ಗೊತ್ತಿಲ್ಲವೇ? ನೀವು ಹೇಳಬೇಕೆ?'

'ಏನೋ ಕೂಡಿಡುವ ರೀತಿಯಲ್ಲಿ ಮೋಸ ಹೊಂದಿದೆ ಅಷ್ಟೆ.'

'ಹುಂ. ಪಾಪ, ಹಾಗೂ ಆಗುತ್ತದೆ.'

'ತಾವು ಅಲ್ಪ ಸ್ವಲ್ಪ ರಿಯಾಯಿತಿ...'

'ಕ್ಷಮಿಸಬೇಕು. ಅದು ಮಾತ್ರ ಆಗುವದಿಲ್ಲ. ಕಟ್ಟಳೆಗೆ ವಿರೋಧವಾಗಿ ನಡೆಯುವುದಿಲ್ಲ. ಅದರಲ್ಲೂ ನೀವು ನಮ್ಮ ಊರಿನವರು ಅಂತ ನೇರವಾಗಿ ಕನಿಷ್ಠವಾದದ್ದನ್ನೆ ಹೇಳಿಬಿಟ್ಟೆ.'

'ಯೋಗ್ಯವಾದ ಕಡೆ ಕೊಂಚ...'

'ನಿಜವಾಗಿ ಹೇಳುತ್ತೇನೆ. ಹೆಚ್ಚು ಮಾತಾಡಿ ಫಲವಿಲ್ಲ.'

ಮತ್ತೆ ಒಂದೆರಡು ನಿಮಿಷ ನಿಶ್ಶಬ್ದ. ಪಿಲಾನಿಯು ಮತ್ತೆ ಮನಸ್ಸಿನಲ್ಲಿ ಲಾಗ ಹಾಕಿ ನೋಡಿದ. ವಕೀಲರು 'ಜುಂ. ಜಪ್ಪಯ್ಯ' ಅನ್ನುವ ಹಾಗಿರಲಿಲ್ಲ. ಇವರು ತನ್ನ ಗುಟ್ಟನ್ನು ತಿಳಿದಿರುವರೆಂದೂ, ಆದುದರಿಂದ ಕಪಿಮುಷ್ಟಿಯನ್ನು ಬಿಡುವುದಿಲ್ಲವೆಂದೂ, ಎಲ್ಲ ಹಾಳು ವಕೀಲರು ಇದೇ ಗೋತ್ರದವರೆಂದೂ ಯೋಚಿಸಿ, ಪಿಲಾನಿಯು ಕಲ್ಲೆದೆ ಮಾಡಿಕೊಂಡು ಕಣ್ಣನ್ನು ಮುಚ್ಚಿಕೊಂಡು 'ಆಗಲಿ' ಅಂದುಬಿಟ್ಟ. ವಕೀಲರು ಹಣವನ್ನು ಕೇಳಿದರು. ಪಿಲಾನಿಯು ಬೆದರಿ,

'ಏನು ಮುಂಗಡವಾಗಿ?' ಎಂದು ಕೇಳಿದ.

'ಹುಂ. ಅದೇ ನಮ್ಮ ಕಟ್ಟಳೆ.'

'ನನ್ನಲ್ಲಿ ಆ ನೋಟುಗಳಲ್ಲದೆ ಮೂರು ಕಾಸೂ ಬೇರೆ ಇಲ್ಲ.'

'ಹುಂ?'

'ಖಂಡಿತವಾಗಿ. ಹತ್ತು ಇಪ್ಪತ್ತು ರೂಪಾಯಿ

ಚಿಲ್ಲರೆ ಇದ್ದರೆ ಏನು ಆದ ಹಾಗಾಯಿತು?'

ವಕೀಲರು ಬೆರಳುಗಳಿಂದ ಪುಸ್ತಕದ ಮೇಲೆ ತಬಲ ಬಡಿಯುತ್ತಾ ಯೋಚಿಸಿದರು. ಅವರು ಇದು 'ಆರನೆಯ ಕೇಸು' ಎಂದು ಹೇಳಿದ್ದರೂ ಅವರಿಗೆ ಬಂದಿದ್ದುದು ಇದು ಮೊದಲನೆಯದು. ಕಕ್ಷಿಯಲ್ಲಿ ಭರವಸೆಯನ್ನು ಹುಟ್ಟಿಸುವುದಕ್ಕಾಗಿ ಹಾಗೆ ಅಂದಿದ್ದರು. ವಕೀಲರಲ್ಲವೇ? ಹೀಗೆ ಸಿಕ್ಕಿದ ಕಕ್ಷಿಯನ್ನು ಬಿಟ್ಟುಕೊಡುವುದಕ್ಕೆ ಅವರಿಗೆ ಮನಸ್ಸು ಬಾರದು. ಅದರಲ್ಲೂ ಪುಷ್ಟಿಯಾದ 'ಫೀ'ಗೆ ಒಪ್ಪಿಸಿದ್ದರು. ಇಷ್ಟನ್ನೂ ಈಗಲೇ ಈತನು ತೆರುವ ಸ್ಥಿತಿಯಲ್ಲಿಲ್ಲವೆಂದು ಅವರಿಗೆ ತಿಳಿದಿದ್ದಿತು. ಆದುದರಿಂದ ಅವರು,

'ಹೋಗಲಿ, ಇದರಲ್ಲಿ ಅರ್ಧವನ್ನಾದರೂ...' ಎಂದು ಮೊದಲು ಮಾಡುವಾಗಲೇ ಪಿಲಾನಿಯು ವಿಷಯವು ತನಗೆ ಅನುಕೂಲವಾಗುತ್ತಿದ್ದ ಸುಳಿವನ್ನು ತಿಳಿದು 'ನನ್ನಲ್ಲಿ ಏನೇನೂ ಇಲ್ಲ. ದೇವರಾಣೆಗೆ ಕೈಗೆ ಹಣ ಬಂದೊಡನೆ ತಮಗೆ ಕೊಟ್ಟು ಬಿಡುತ್ತೇನೆ, ಖಂಡಿತವಾಗಿ' ಅಂದ.

ವಕೀಲರು ಬಾಯಿತಪ್ಪಿ ಏಕೋ 'ಹುಂ' ಅಂದು ಬಿಟ್ಟರು. ಅಂದ ಮೇಲೆ ಅವರಿಗೇ ಆಶ್ಚರ್ಯವಾಯಿತು. ಮತ್ತೆ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳಲಾರದೆ ಮುಂದಿನ ಮಾತುಕತೆ ನಡೆಸಿದರು.

'ಹುಂ, ನಿಮಗೆ ''ಫರಾಸು ರೋಡಿ''ನಲ್ಲಿ ಯಾರದ್ದಾದರೂ ಪರಿಚಯ ಉಂಟೆ?' ವಕೀಲರು ನಗುತ್ತಾ ಕೇಳಿದರು.

ಪಿಲಾನಿಗೆ ಅತ್ಯಾಶ್ಚರ್ಯವಾಯಿತು. ಅವನಿಗೆ 'ಫರಾಸು ರೋಡು' ಮುಂಬಯಿಯಲ್ಲಿ ಸೂಳೆಯರಿಗೆ ಪ್ರಸಿದ್ಧಿ ಎನ್ನುವುದು ಗೊತ್ತಿದ್ದು, ವಕೀಲರ ಪ್ರಶ್ನೆ ಅರ್ಥವಾಯಿತು. ಆದರೆ ಅವನು ಈ ಗಡಿಬಿಡಿಗೆ ದೂರವಾಗಿ ಬಾಳಿದ ಪ್ರಾಣಿಯಾದುದರಿಂದ ಕೊಂಚ ಗಾಬರಿಯಿಂದ,

'ಏ, ಇದೇನು ವಿಚಾರ?' ಎಂದ, ಮಾರುತ್ತರ ಕೊಟ್ಟ.

'ಅಲ್ಲ; ಕೇಳಿದೆ.'

'ಅಲ್ಲಿಗೂ ನನಗೂ ಬಲು ದೂರ.'

'ಬಲ್ಲೆ, ಆದರೆ ಈಗ ಹತ್ತಿರ ಹೋಗಬೇಕಾಗಬಹುದು.'

'ಅದೇನು?'

'ಅದು ನನ್ನ ಗುಟ್ಟು – ಇನ್ನೂ ಇರಲಿ. ಇನ್ನೇನು ನಾನೇ ದಾರಿ ತೋರಿಸಬೇಕಾದ ಸಂದರ್ಭ ಅನ್ನಿ.'

'ಹುಂ.'

'ಸರಿ, ಹನ್ನೊಂದು ಗಂಟೆಯ ಹೊತ್ತಿಗೆ ಲೋಕಲ್ ನಿಲ್ದಾಣದಲ್ಲಿ ನನಗೆ ಭೇಟಿ ಆಗಬೇಕು. ಹನ್ನೊಂದು ಇಪ್ಪತ್ತಮೂರಕ್ಕೆ ಒಂದು ''ಫಾಸ್ಟು'' ಇದೆ. ನಿಮ್ಮ ನೋಟನ್ನೆಲ್ಲ ತೆಗೆದುಕೊಂಡು ಬನ್ನಿ.'

'ಆಗಲಿ.' ಪಿಲಾನಿಯು ಹೊರಡಲನುವಾದ.

'ಹಾಗೆ ಎರಡು ಸೆಕೆಂಡ್ ಕ್ಲಾಸಿನ ಟಿಕೀಟನ್ನು ತೆಗೆದುಕೊಂಡಿರಿ. ಸ್ವಲ್ಪ ದುಡ್ಡೂ ಕೈಯಲ್ಲಿರಲಿ' ಎಂದು ವಕೀಲರು ಕಡೆಯ ಗೋಲಿ ಬಾರಿಸಿದರು. ಪಿಲಾನಿಯು ಪೆಚ್ಚಾಗಿ ಹೊರಗೆ ಕಾಲಿಟ್ಟನು.

ರೈಲು ಗಾಡಿಯಲ್ಲಿ ಈ ಬಗ್ಗೆ ಮಾತುಕತೆಗಳಾಗಲಿಲ್ಲ. ಪಾಶ್ಚಾತ್ಯ ಉಡುಪಿನ ವಕೀಲರು ಸೆಕೆಂಡು ಕ್ಲಾಸಿನ ಮೆತ್ತೆಯ ಮೇಲೆ ಆರಾಮವಾಗಿ ಕುಳಿತು ಎದುರಿನ ಬೆಂಚಿನ ಮೇಲೆ ಎರಡೂ ಕಾಲನ್ನೂ ಎಸೆದು, ತಮ್ಮ 'ಪೈಪ'ನ್ನು ಹಚ್ಚಿಸಿ 'ಬುಸುಬುಸು' ಸೇದುತ್ತಿದ್ದರು. ಪಿಲಾನಿಗೆ ಹೆಚ್ಚು ವೆಚ್ಚದ ಹೊಗೆಸೊಪ್ಪಿನ ಅಭ್ಯಾಸವಿರಲಿಲ್ಲ. ಆಗಾಗ್ಗೆ ಮಾತನಾಡಲು ಮೊದಲು ಮಾಡಿ ಪ್ರತ್ಯುತ್ತರಗಳು ಸರಿಯಾಗಿ ಬರದೆ ಇದ್ದುದರಿಂದ ಆಯಾಸಹೊಂದಿ ತಾನು ತಂದಿದ್ದ ಪತ್ರಿಕೆಯ ಕಡೆ ನೋಡುವಂತೆ ನಟಿಸುತ್ತ ಕಾಲಹಾಕುತ್ತಿದ್ದ. ರೈಲು ಗಾಡಿಯನ್ನು ಬಿಟ್ಟು ಹೊರಗೆ ಬಂದೊಡನೆ ವಕೀಲರು 'ಟ್ಯಾಕ್ಸಿ'ಯನ್ನು ಗೊತ್ತುಮಾಡಬೇಕೆಂದು ಪಿಲಾನಿಗೆ ಸೂಚನೆ ಇತ್ತರು. ಕಾಸು ಕಾಸಿಗೆ ಗಂಟು ಹಾಕುತ್ತಾ 'ಟ್ರಾಂ'ಗೂ ದುಡ್ಡನ್ನು ಕೊಡದೆ ಕಾಲನ್ನು ಸವೆಸುತ್ತಿದ್ದ ಮಾರವಾಡಿಯು ತನ್ನಲ್ಲಿಯೇ ಗೊಣಗಿಕೊಳ್ಳುತ್ತ ವಕೀಲರ ಅಪ್ಪಣೆಯನ್ನು ಪಾಲಿಸಿದ. ಒಳಗೆ ಕುಳಿತಾಗ ಡ್ರೈವರನು 'ಎಲ್ಲಿಗೆ?' ಎಂದು ಕೇಳಿದ. ವಕೀಲರು ಪಿಲಾನಿಯನ್ನು ನೋಡಿ 'ಹೇಳಿ' ಅಂದರು. ಬಡ ಪಿಲಾನಿಯು '...ರೋಡಿಗೆ!' ಅಂದ.

● (ಸಶೇಷ)

ಧಾರಾವಾಹಿ

# ಧ್ಯಾನಕ

● 'ಚಿರಂಜೀವಿ'

ಆ ರಾತ್ರಿ ಮದ್ರಾಸ್‌ನಿಂದ ಮತ್ತೆ ನಾಣಿಮಾವ ಫೋನ್ ಮಾಡಿದ್ದರು. ಒಂದೆರಡು ದಿನದ ಪೂರ್ತಿಯಾದರೂ ಮದ್ರಾಸ್‌ಗೆ ಬಾ ಎಂದು ಒತ್ತಾಯಿಸಿದರು. ಈ ಸಲ ಶಾಲಿನಿಯೂ ಮಾತನಾಡಿ ಬನ್ನಿ ಎಂದಳು. ಕೂಡಲೇ ರಘುವಿಗೆ ಏನು ಉತ್ತರ ಕೊಡಲೂ ಆಗಲಿಲ್ಲ. ಆಗಲಿ ಪ್ರಯತ್ನಿಸುತ್ತೇನೆ, ರಂಗನಾಥ್‌ನೊಂದಿಗೆ ಚರ್ಚಿಸಿ ನಾಳೆ ಹೇಳುತ್ತೇನೆ ಎಂದುಬಿಟ್ಟ. 'ಅಂಥಾದ್ದೇನೊ, ಅವರು ಅಷ್ಟು ಕರೀತಿದಾರೆ, ಬರ್ತೀನಿ ಅಂತ ಹೇಳ್ಬಾರ್ದಿತ್ತಾ ?' ಎಂದರು ಸೀತಾಬಾಯಿ. 'ಖಂಡಿತ ಹೋಗ್ತೀನಮ್ಮ, ಇಲ್ಲ ಅಂದಿಲ್ಲ. ಇನ್ನೊಂದೆರಡು ದಿವಸಗಳಲ್ಲಿ ಹೋಗ್ತೀನಿ' – ಎಂದ ರಘು.

ಬೆಂಗಳೂರಿನಲ್ಲಿ ಕೆಲಸಗಳೆಲ್ಲ ಒಂದು ರೀತಿ ಸರಿಯಾದ ಹಂತಕ್ಕೆ ಬಂದಿತ್ತು. ಮುಖರ್ಜಿಯಂತೂ ರಘು ಮದುವೆ 'ಫಿಕ್ಸ್' ಆಗಿದೆ ಎಂದು ತಿಳಿದಕೂಡಲೇ ವಿಶ್ವಾಸದಿಂದ ಅವನ ಕೈಕುಲುಕಿ 'ರಘು, ಖೂಬ್, ಬಹುತ್ ಖೂಬ್, ತುಂಬಾ ಒಳ್ಳೆ ಸಮಾಚಾರ. ನನಗೂ ನಿಮ್ಮಷ್ಟೆ ಸಂತೋಷವಾಗಿದೆ' ಎಂದು ಹೇಳಿದ್ದಲ್ಲದೆ

## ಅಧ್ಯಾಯ – 6 :

## ಮಳೆಯಲ್ಲಿ ನೆಂದ ಸುಂದರ ಹೆಣ್ಣು

'ವೆಡ್ಡಿಂಗ್ ಗಿಫ್ಟ್' ಎನ್ನುತ್ತ ಹತ್ತು ಲಕ್ಷ ರೂಪಾಯಿಗಳ ಕೆಲಸವನ್ನು ರಘು ಕಾರ್ಖಾನೆಗೆ ಬಿಡುಗಡೆ ಮಾಡಲು ಸಹಿ ಹಾಕಿದ. 'ಐ ಥಿಂಕ್ ನೌ ಯೂ ಆರ್ ಮೋರ್ ಹ್ಯಾಪಿ' ಎಂದು ಹೇಳಿದ ಮುಖರ್ಜಿ, ಅವನೊಂದಿಗೆ ಹೊರಗೆ ಬಂದು ರೆನಾಲ್ಟ್‌ನಲ್ಲಿ ಕುಳಿತು ದೊಡ್ಡ ರೌಂಡ್ ಒಂದನ್ನು ಸುತ್ತಿ ಬರುವುದನ್ನು ತಪ್ಪಿಸಲಿಲ್ಲ. 'ಷಿ ಈಸ್ ಅನದರ್ ಬ್ಯೂಟಿ' – ಎಂದ.

ಕಾರ್ಖಾನೆ ಪ್ರಾರಂಭಿಸಿದಾಗಿನಿಂದ ಇಷ್ಟು ದೊಡ್ಡ ಮೊತ್ತದ ಆರ್ಡರ್ ದೊರಕಿರಲಿಲ್ಲ.



ಮುಖರ್ಜಿ ಇದನ್ನು ತನ್ನ ಸ್ನೇಹಕ್ಕಾಗಿ ಕೊಟ್ಟನೊ, ತನ್ನ ಮದುವೆ ಉಡುಗೊರೆ ಎಂದೇ ನಿಜವಾಗಲೂ ಕೊಟ್ಟನೊ ಅಥವ ರೆನಾಲ್ಟ್ ಕಾರಿನ ಮೋಡಿಗಾಗಿ ಕೊಟ್ಟನೊ ರಘುವಿಗೆ ಅರ್ಥವಾಗಲಿಲ್ಲ. ಆದರೂ ಒಂದಂತೂ ನಿಜ: ಹತ್ತು ಲಕ್ಷ ರೂಪಾಯಿಗಳ ಆರ್ಡರ್ ಅವನ ಕೈಯಲ್ಲಿತ್ತು. ಒಂದು ರೀತಿ ಅವನಿಗೆ ರೆನಾಲ್ಟ್ ಕಾರ್ ಬಗ್ಗೆ ಅಭಿಮಾನ ಬಂತು. ಈ ಕಾರು ಬಂದ ದಿವಸದಿಂದ ತನ್ನ ವೃತ್ತಿಜೀವನದಲ್ಲಿ ಗಮನಾರ್ಹ ಏರಿಕೆ ಆಗುತ್ತಲೇ ಬಂದಿದೆ.

ಈಗಂತೂ ದೊಡ್ಡ ಮೊತ್ತದ ಆರ್ಡರ್. ಈ ಆರ್ಡರನ್ನು ಪಡೆಯುವುದೇ ಒಂದು ದೊಡ್ಡಸ್ತಿಕೆ, ಇದನ್ನು ಯಶಸ್ವಿಯಾಗಿ ಮಾಡಿ ಮುಗಿಸುವುದು ಒಂದು ಸಾಧನೆ– ಇವೆರಡೂ ಆದಾಗ ತನ್ನ ಸಂಸ್ಥೆ ವಿಶ್ವಾಸಾರ್ಹ ಎನಿಸಿಕೊಂಡು ಬೆಳೆಯುವುದು ಖಂಡಿತ.

ಮುಖರ್ಜಿಯಿಂದ ಬೀಳ್ಕೊಂಡು ಹೊರ ಬಂದಾಗ, ರೆನಾಲ್ಟ್ ಕಾರಿನ ಬಾಗಿಲು ತೆಗೆದು ಕುಳಿತುಕೊಳ್ಳುವ ಮೊದಲು, ದಿಢೀರನೆ ಬಂದ ಅಭಿಮಾನದಿಂದ ಅದನ್ನು ಸವರಿದ, ಮೆಲ್ಲನೆ



ಅದನ್ನು ತಟ್ಟಿದ. ಅವನಿಗೇ ಆಶ್ಚರ್ಯವೆನ್ನುವಂತೆ ಇವನ ಪ್ರೀತಿಗೆ ಮಿಡಿಯುವ ಹಾಗೆ ರೆನಾಲ್ಟ್ ಮೃದುವಾಗಿ ಕಂಪಿಸಿತು. ಯಜಮಾನನ ಕಾಲ ಕೆಳಗೆ ಕುಂಯಿಗುಟ್ಟುವ ನಾಯಿಯ ಹಾಗೆ ಸಣ್ಣದಾಗಿ ಯಾವುದೊ ದನಿ ಕೇಳಿದಂತೆ ಅವನಿಗನ್ನಿಸಿತು.

ಈಚೀಚೆಗೆ ರಘುವಿಗೆ ರೆನಾಲ್ಟ್ ಕಾರಿನ ಬಗ್ಗೆ ಏನೇನೋ ಯೋಚನೆಗಳು ಬರುತ್ತವೆ. ರಂಗನಾಥನ ಹಾಗೆಯೊ, ತನ್ನ ತಂದೆತಾಯಿಗಳ ಹಾಗೆಯೊ ಈ ರೆನಾಲ್ಟ್ ತನ್ನ ಭಾವನೆಗಳಿಗೆ ಮಿಡಿಯುತ್ತಿದೆ ಅನ್ನಿಸಲು ಪ್ರಾರಂಭವಾಗಿದೆ. ತನ್ನ ಭಾವನೆಗಳಲ್ಲಿ ನೋವು-ನಲಿವು ಕಂಡಾಗ, ರೋಷ-ಬೇಸರಗಳು ಆದಾಗ, ರಂಗನಾಥ-ಶಾಲಿನಿ-ರಾಜಶೇಖರನಂಥವರನ್ನು ತೀವ್ರವಾಗಿ ನೆನಪು ಮಾಡಿಕೊಂಡಾಗ ರೆನಾಲ್ಟ್ ಸ್ಪಂದಿಸಿದಂತೆ ಅನ್ನಿಸುತ್ತದೆ. ಈಚೀಚೆಗೆ ತನ್ನ ಮನಸ್ಸು ಒಂದಿಷ್ಟು ಮೃದುಗೊಂಡಿರುವುದರಿಂದ, ಆಲೋಚನೆಗಳು ಟೊಳ್ಳಾಗಿರುವುದರಿಂದ, ಲಾರೆನ್ಸ್ ಜೋಸೆಫ್ ಹೇಳಿದಂತೆ, ಹೀಗೆಲ್ಲ ಆಗುತ್ತಿದೆಯೊ ಏನೊ ?

ಏನೇ ಇರಲಿ, ರೆನಾಲ್ಟ್ ತನ್ನ ಬದುಕಿನ ಅವಿಭಾಜ್ಯ ಅಂಗವಾಗಿಬಿಟ್ಟಿದೆ. ತನ್ನ ಪಾಲಿಗೆ ಆತ್ಮೀಯ ಸ್ನೇಹಿತನಂತೆಯೇ ಸರಿ. ರಘು ಡ್ರೈವ್ ಮಾಡಿಕೊಂಡು ಕಾರ್ಖಾನೆಯ ಕಡೆಗೆ ಹೊರಟ. ವ್ಯವಹಾರದ ಆಲೋಚನೆಗಳಿಂದ ಒಂದಿಷ್ಟು ಮುಕ್ತನಾದ ಕೂಡಲೇ ಮದ್ರಾಸ್ ಕರೆ ತಲೆ ತುಂಬ ತುಂಬಿಕೊಂಡಿತು. ನಾಣಮಾವ ಒಂದೇ ಸಮನೆ ಆಹ್ವಾನಿಸುತ್ತಿದ್ದಾರೆ, ಈ ಸಲ ಶಾಲಿನಿಯೂ ಆತ್ಮೀಯವಾಗಿ ಕರೆದಿದ್ದಾಳೆ. ಹೋಗಿ ಬಂದುಬಿಡುವುದು ಎಂದು ರಘು ಮನಸ್ಸಿನಲ್ಲೆ ನಿರ್ಧರಿಸಿಕೊಂಡ. ಕಾರ್ಖಾನೆಗೆ ಬಂದು ರಂಗನಾಥನಿಗೆ ಈ ವಿಷಯ ಹೇಳಿದ: 'ರಂಗು, ನಾಣಮಾವ-ಶಾಲಿನಿ ಇಬ್ರೂ ಮದ್ರಾಸ್‌ಗೆ ಬಾ ಅಂತ ತುಂಬ ಬಲವಂತ ಮಾಡ್ತಿದಾರೆ. ಐ ಥಿಂಕ್, ನನಗೂ ಅಲ್ಲಿಗೆ ಹೋಗ್ಬೇಕೂಂತ ಮನಸ್ನಲ್ಲಿದೆ ಅಂತ ಕಾಣುತ್ತೆ. ಹೋಗೋಣ ಅನ್ನಿಸ್ತಿದೆ'. ರಂಗನಾಥ ಗೆಳೆಯನ ಬೆನ್ನುತಟ್ಟುತ್ತಾ ಹೇಳಿದ: 'ಗೋ ಅಹೆಡ್-

**ರೆನಾಲ್ಟ್ ಕಾರಿನಲ್ಲಿ ಗಾಳಿಯಲ್ಲಿ ಹಾರಿದಂತೆ ಓಡಾಡುವಾಗ, ಆಗಾಗ ಅದು ಥಟ್ಟನೆ ನಿಲ್ಲುವುದು, ಅಲುಗಾಡುವುದು, ಹೆಣ್ಣು ನಕ್ಕಂತೆ ಸದ್ದು ಕೇಳಿಸುವುದು – ಮೊದಲಾದ ಅನುಭವಗಳ ಜೊತೆಗೆ – ರೆನಾಲ್ಟ್ ವೇಗವಾಗಿ ನಂದಿಬೆಟ್ಟದತ್ತ ರಭಸದಿಂದ ಸಾಗಿದ್ದು ರಘುವಿಗೆ ಚಿತ್ರವಿಚಿತ್ರ ಅನುಭವಗಳೆನಿಸಿದವು.**

ಜೀವನದಲ್ಲಿ ಇಂಥ ಅವಕಾಶಗಳು ಅಪರೂಪವಾಗಿ ಸಿಗತ್ವೆ-ತಪ್ಪಿಸ್ಕೊಂಡು ಬಿಡಬಾರ್ದು.'

ತಾನು ಮಾಡುತ್ತಿದ್ದ ಕೆಲಸಗಳ ಬಗ್ಗೆ ಎಲ್ಲ ವಿವರಗಳನ್ನೂ ಕಾಗದಗಳನ್ನೂ ರಂಗನಾಥನಿಗೆ ಒಪ್ಪಿಸಿ, ಮುಂದಿನ ಮೂರು ನಾಲ್ಕು ದಿವಸ ಯಾರ್‍ಯಾರನ್ನು 'ಕಾಂಟಾಕ್ಟ್' ಮಾಡಬೇಕೆಂದು ತಿಳಿಸಿದ. ಮುಖರ್ಜಿಯ ದೊಡ್ಡ ಆರ್ಡರ್ ಗೆಳೆಯರಿಬ್ಬರಿಗೂ ದೊಡ್ಡ ಕುಮ್ಮಕ್ಕುಕೊಟ್ಟಿತ್ತು. 'ಈ ಸಲ ಇಲ್ಲಿ ನನ್ನ-ನಿನ್ನ ಕ್ಯಾಬಿನ್‌ಗಳನ್ನು ಏರ್‌ಕಂಡೀಷನ್ ಮಾಡ್ಬಿಡೋಣ' – ಎಂದ ರಂಗನಾಥನ ಮಾತು ಕೇಳಿ ರಘು ಮುಗುಳ್ನಕ್ಕ. 'ಐ ಥಿಂಕ್ ಮೊದಲ ಬಾರಿಗೆ ನಮಗೆ ಸಂಪಾದಿಸಿದ ಹಣವನ್ನು ಹೇಗೆ ಬೇಕಾದರೂ ಹಾಗೆ ಖರ್ಚು ಮಾಡುವ ಯೋಗ್ಯತೆ ಬಂದಿದೆ' – ಎಂದ. 'ಎಸ್ ಸರ್ಟನ್ಲಿ' – ಎಂದ ರಂಗನಾಥ.

ಇವೆಲ್ಲ ಮಾತಿನಲ್ಲಿ ಸಂಜೆ ಹೊರಡುವುದು ಸ್ವಲ್ಪ ನಿಧಾನವಾಯಿತು. ಸೂರ್ಯ ಮುಳುಗಿ ನಸುಕತ್ತಲು ಆವರಿಸಿಕೊಂಡಿತು. 'ನೀನು

ಹೋಗು, ನಾನು ಇನ್ನು ಸ್ವಲ್ಪ ಹೊತ್ತು ಕೂತಿರ್ತೀನಿ' – ಎಂದು ರಂಗನಾಥ ಹೇಳಿದ. ರಘು ಹೊರಟುನಿಂತ. 'ಬೆಸ್ಟ್ ಆಫ್ ಲಕ್' – ಎಂದು ರಂಗನಾಥ ಕೈಕುಲುಕಿದ.

ಮತ್ತೆ ರೆನಾಲ್ಟ್‌ನಲ್ಲಿ ಡ್ರೈವ್ ಮಾಡುತ್ತ ರಸ್ತೆಗೆ ಬಂದ. ಬೀದಿ ದೀಪಗಳೆಲ್ಲ ಹತ್ತಿಕೊಂಡಿದ್ದವು. ರೆನಾಲ್ಟ್ ಸರಾಗವಾಗಿ ಸದ್ದಿಲ್ಲದೆ ಮುಂದುವರಿಯುತ್ತಿತ್ತು. ಕಾರ್ಖಾನೆ ಕೆಲಸದ ಯೋಜನೆಯನ್ನು ಸಂಪೂರ್ಣವಾಗಿ ಮರೆತು ಮಾನಸಿಕವಾಗಿ ಹಾಯಾಗಿದ್ದು, ಮದ್ರಾಸ್ ಕ್ಷಣಗಳನ್ನು ನಿಧಾನವಾಗಿ ಮನಸ್ಸಿನೊಳಗೆ ತುಂಬಿಕೊಳ್ಳುತ್ತಿದ್ದ. ಎಂಇಐ ಪಾಲಿಟೆಕ್ನಿಕ್, ಎಂಟ್ರೆನ್ಸ್ ದಾಟಿ ನವರಂಗ್ ರಸ್ತೆಯಲ್ಲಿ ಮುಂದುವರಿಯುತ್ತಿದ್ದಾಗ ಥಟ್ಟನೆ ದಬದಬನೆ ಮಳೆ ಬೀಳಲು ಪ್ರಾರಂಭವಾಗಿ ಮುಂದಿನ ಐದಾರು ನಿಮಿಷಗಳಲ್ಲಿ 'ಭರೋ' ಎಂದು ಹೊಡೆಯುವ ದೊಡ್ಡ ಮಳೆಯಾಗಿ ಹೋಗಿತ್ತು. ರಘು ಕಾರಿನ ವೇಗವನ್ನು ಕಡಿಮೆ ಮಾಡಿದ. ತನ್ನೆದುರಿನ ಗಾಜನ್ನು ನೀಳಕೈಬ್ರಷ್‌ಗಳು ನಿರಂತರವಾಗಿ ಒಗೆಸುತ್ತಿದ್ದರೂ ಮತ್ತೆ ಮತ್ತೆ ನೀರು ಬಿದ್ದು ಗಾಜು ಮಂಕಾಗುತ್ತಿತ್ತು. ರಸ್ತೆ ಮಸಕುಮಸಕಾಗುತ್ತಿತ್ತು. ರಘು ಕಾರಿನ ಹೈಡ್‌ಲೈಟ್ಸ್-ಆನ್ ಮಾಡಿಕೊಂಡು ನಿಧಾನವಾಗಿ ಮುಂದುವರಿದ. ನವರಂಗ್ ಮುಂದೆ ಅಸಾಧ್ಯ ವಾಹನಗಳು ನಿಂತು ತಾನೂ ಹಿಂದೆ ನಿಲ್ಲಿಸಬೇಕಾಯಿತು. ಗಾಜಿನ ಮೇಲೆ ಬೀಳುತ್ತಿದ್ದ ನೀರಿನ ರಾಶಿಯನ್ನು ಬ್ರಷ್‌ಗಳು 'ಸರಕ್-ಸರಕ್' ಎಂದು ಒರೆಸುತ್ತಿರುವುದನ್ನೆ ನೋಡುತ್ತ ಏನೋ ಯೋಚನೆ ಮಾಡುತ್ತ ಕುಳಿತ.

ಸಂಚಾರ ಸರಾಗವಾಗಲು ಒಂದು ಐದಾರು ನಿಮಿಷಗಳೇ ಆದವು. ಮುಂದಿದ್ದ ವಾಹನಗಳು ಒಂದೊಂದಾಗಿ ಮುಂದೆ ಸರಿದವು. ರಘು ರೆನಾಲ್ಟ್‌ನ್ನು ಮತ್ತೆ ಸ್ಟಾರ್ಟ್ ಮಾಡಿದ. ಪ್ರಾರಂಭದ ಇಂಜಿನ್ ದನಿ ಏನೊ ಹೊಸ ರೀತಿಯಲ್ಲಿರುವಂತೆ ಅನ್ನಿಸಿತು. ಸ್ವಲ್ಪ ಮುಂದುವರಿದು ಸರ್ಕಲ್ ಹಾದು ನೇರವಾಗಿ ಮುಂದಕ್ಕೆ ಹೋಗಿ ಸ್ವಲ್ಪ ವೇಗ ಹೆಚ್ಚಿಸಲು ಪ್ರಯತ್ನಿಸಿದಾಗ ಏನೋ ಒಂದು ರೀತಿ ವಿಚಿತ್ರವಾದ ಲಯಬದ್ಧ ಸದ್ದು ಇಂಜಿನ್‌ನಿಂದ ಏಳುತ್ತಿರುವಂತನ್ನಿಸಿತು. ತೆಳ್ಳಗೆ ಗೆಜ್ಜೆಸದ್ದು, ಮೃದುವಾದ ಬಳೆಸದ್ದು ಕೇಳಿಸಿತು. ಈ ಸಲ ಇವೆಲ್ಲವೂ ತುಂಬಾ ಸ್ಪಷ್ಟವಾಗಿ ಕೇಳಿಸಿತು. ಏನಿದು ಎಂದು ಯೋಚಿಸಿ ವೇಗವನ್ನು ನಿಧಾನ ಮಾಡಿದಾಗ ಆಕಸ್ಮಾತ್ ಕನ್ನಡಿಯತ್ತ ದೃಷ್ಟಿ ಹೋಯಿತು. ಅಲ್ಲಿ ಕಂಡದ್ದನ್ನು ನೋಡಿ ಅವನಿಗೆ ಬೆಚ್ಚಿ ಬೀಳುವ ಹಾಗಾಯಿತು: ತಲೆಗೂದಲು ಮುಖದ ಮೇಲೆಲ್ಲ ನೀರಿಳಿಯುತ್ತಿದ್ದ ಹೆಣ್ಣಿನ ಮುಖವೊಂದು ಕನ್ನಡಿಯಲ್ಲಿ ಕಾಣಿಸಿತು.

'ಸ್ಕ್ರೀಚ್...' – ಥಟ್ಟನೆ ಬ್ರೇಕ್‌ಗಳನ್ನೊತ್ತಿ ಕಾರನ್ನು ಪಕ್ಕಕ್ಕೆ ನಿಲ್ಲಿಸಿ ಥಟ್ಟನೆ ಹಿಂತಿರುಗಿ ನೋಡಿದ ರಘು. ಹೌದು, ಕನ್ನಡಿಯಲ್ಲಿ ಕಂಡದ್ದು ನಿಜ. ಅವನ ದೇಹವೆಲ್ಲ ಮೆಲ್ಲನೆ ಕಂಪಿಸಿತು. ಮಳೆಯ ನೀರಿನಿಂದ ಸಂಪೂರ್ಣ ತೊಯ್ದು ಸುಂದರ ಹೆಣ್ಣೊಂದು ಹಿಂದಿನ ಸೀಟಿನಲ್ಲಿ ಕುಳಿತಿದ್ದಳು. ಅವಳ ತಲೆಯಿಂದ ನೀರು ಮುಖಕ್ಕಿಳಿದು ಕೆಳಗುದುರುತ್ತಿತ್ತು. ರಘು ಥಟ್ಟನೆ ಅವಳನ್ನು ನೋಡಿದ ಕೂಡಲೇ ಅವಳು ಇವನನ್ನು ನೋಡಿ ಅತಿ ಆಕರ್ಷಕವಾಗಿ ಮುಗುಳುನಗೆಯನ್ನು ಮುಖದ ಮೇಲೆ ಬರಿಸಿಕೊಂಡಂತೆ ಇವನಿಗೆ ಕಂಡಿತು. ಏನು ಮಾಡಬೇಕೆಂದು ತೋರದೆ, 'ಯಾರು ನೀವು, ಯಾರು ನೀವು?' ಎಂದು ರಘು ಕಿರಿಚಿದ.

## ಆಶ್ಚರ್ಯ!

**ನನ್ನ ಕಂಡೊಡನೆ ಲಜ್ಜೆಯಿಂದ**
**ತಲೆತಗ್ಗಿಸಿ ನಡೆಯುತ್ತಿದ್ದ ಕನ್ಯೆ,**
**ಮೊನ್ನೆ –**
**ಜಿಂಕೆಯಂತೆ ಕಣ್ಣರಳಿಸಿ**
**ಕಿಲಕಿಲನೆ ನಗುತ್ತ ನನ್ನೆದುರೇ**
**ಬಂದಳು – ಗಂಡನೊಡನೆ!**

● ಎಂ. ಎಸ್. ರಮೇಶ್

ಅವಳು ನಿಧಾನವಾಗಿ ತಲೆ-ಮುಖದ ಮೇಲಿನ ನೀರನ್ನು ಎರಡೂ ಕೈಗಳಿಂದ ಝಾಡಿಸಿದಂತೆ ಒರೆಸಿಕೊಂಡಳು. ಎದುರು ಬರುತ್ತಿದ್ದ ವಾಹನಗಳ ತೀಕ್ಷ್ಣ ದೀಪಗಳ ಬೆಳಕು ಅವಳ ಮುಖದ ಮೇಲೆ ಬಿದ್ದಾಗ ಫಕ್ಕನೆ ಆ ಸುಂದರ ಮುಖದ ಆಕರ್ಷಕ ಗೆರೆಗಳು ಸ್ಪಷ್ಟ ವಾಗಿ ಕಾಣುತ್ತಿದ್ದವು. ಪಕ್ಕದ ಶಾಪಿಂಗ್ ಕಾಂಪ್ಲೆಕ್ಸ್‌ನ ವಿವಿಧ ನಿಯೋನ್ ಸೈನ್ ದೀಪಗಳ ಬಣ್ಣಗಳು ಆ ಮುಖದ ಮೇಲೆ ಬಿದ್ದು ಆರುತ್ತಿದ್ದವು. ಅವಳು ಯಾವ ಚಡಪಡಿಕೆಯೂ ಇಲ್ಲದೆ ಸಾವಕಾಶವಾಗಿ ನೀರು ಒರೆಸಿಕೊಂಡಳು. ರಘು ಮತ್ತೆ ಕೂಗಿದ: 'ಯಾರು ನೀವು. ನನ್ನ ಕಾರ್‌ನಲ್ಲಿ ಯಾಕಿದೀರಿ?'

ಅವಳು ಕಿಲಕಿಲನೆ ನಕ್ಕಳು. ಮತ್ತೆ ಗೆಜ್ಜೆ ಸದ್ದು, ಬಳೆಗಳ ಸದ್ದಾದವು. ರಘುವಿನ ಮುಖವನ್ನೆ ದಿಟ್ಟಿಸಿ ನೋಡಿದಳು. 'ಇದ್ದಕ್ಕಿದ್ದ ಹಾಗೆ ಮಳೆ ಶುರುವಾಗಿ ಮೈಯೆಲ್ಲ ತೊಯ್ದೋಯ್ತು. ಏನು ಮಾಡ್ಬೇಕೂಂತ ತಿಳೀಲಿಲ್ಲ. ಪಕ್ಕದಲ್ಲಿ ಎಲ್ಲೂ ನಿಲ್ಲೋಕ್ಕೆ ಜಾಗ ಕಾಣಿಸ್ಲಿಲ್ಲ. ಆಗ ನಿಮ್ಮ ಕಾರು ಬಂದು ಪಕ್ಕದಲ್ಲೆ ನಿಲ್ತು. ಬೇರೆ ಆಲೋಚನೆ ಮಾಡದೆ ಬಾಗಿಲು ತೆಗೆದು ಒಳಗೆ ಬಂದು ಕೂತ್ಬಿಟ್ಟೆ' – ಎಂದಳು ಅವಳು. ಅವಳ ಮಾತುಗಳಲ್ಲಿ ಯಾವ ರೀತಿಯ ಅನುಮಾನ-ಸಂಕೋಚಗಳೂ ಇರಲಿಲ್ಲ.

ರಘುವಿಗೆ ಏನು ಹೇಳಬೇಕೆಂದು ತೋರ ಲಿಲ್ಲ. ನೋಡಿದರೆ ಶ್ರೀಮಂತರ ಹೆಣ್ಣಿನಂತೆ ಕಾಣುತ್ತಿದ್ದಾಳೆ. ತಲೆಗೂದಲು ಹರಡಿಕೊಂಡಿದೆ. ಹಣೆಯ ಮೇಲಿನ ದೊಡ್ಡ ಕುಂಕುಮ ಕೆದರಿದೆ. ತುಟಿಗಳು ಮೃದುವಾಗಿ ಅಲುಗಾಡುತ್ತಿವೆ. 'ಹೀಗೆಲ್ಲ ದಾರೀಲಿ ಸಿಗೋ ಯಾರ್‍ಯಾರ್‍ನೋ ಕಾರ್‌ನಲ್ಲಿ ನುಗ್ಗಿಬಿಡೋದಾ? ಸರಿ, ಈಗ ಇಳೀರಿ. ಪಕ್ಕದಲ್ಲಿ ಅಂಗಡಿಗಳಿವೆ. ಅಲ್ಲಿ ಹೋಗಿ ನಿಂತ್ಕೊಳ್ಳಿ' – ಎಂದ. 'ದಯವಿಟ್ಟು ನಾನು ತುಂಬಾ ನೆಂದ್ಬಿಟ್ಟಿದೀನಿ. ನನ್ನನ್ನ ಇನ್ನು ಸ್ವಲ್ಪ ದೂರ ಡ್ರಾಪ್ ಮಾಡ್ಬಿಡಿ, ಪ್ಲೀಸ್' – ಅವಳು ಮೃದುವಾಗಿ ಕೇಳಿದಳು. ರಘುವಿಗೆ ಬಲವಂತ ವಾಗಿ ಕೆಳಗಿಳಿಸಲು ಮನಸ್ಸು ಬರಲಿಲ್ಲ. 'ಸರಿ, ನೀವು ವಾಸಿಸೋದು ಎಲ್ಲಿ, ಎಲ್ಲಿವರ್ಗೂ ಹೋಗ್ಬೇಕು?' ಎಂದು ಕೇಳಿದ. ಅವಳು ಮತ್ತೆ ನಕ್ಕಳು-ಪಿಂಗಾಣಿ ಬಟ್ಟಲೊಳಗೆ ಗಾಜಿನ ಗೋಲಿ ಗಳನ್ನು ಉರುಳಾಡಿಸಿದಂತೆ ಸದ್ದಾಯಿತು. 'ನಾನು ತುಂಬಾ ದೂರ ಇರೋಳು. ಅಲ್ಲೀವರ್ಗೂ ಪಾಪ ನೀವ್ಯಾಕೆ ಬರ್‍ಬೇಕು. ನನ್ನನ್ನ ಈ ರಸ್ತೆಯ ಕೊನೆಯಲ್ಲಿ ಬಿಟ್ಬಿಡಿ ಸಾಕು. ನಾನು ಅಲ್ಲಿಂದ ಮುಂದೆ ಹೋಗ್ತೀನಿ' – ಎಂದಳು.

ರಘು ಮತ್ತೆ ಕಾರ್ ಸ್ಟಾರ್ಟ್ ಮಾಡಿದ. ಈಗ ಗೆಜ್ಜೆಸದ್ದು-ಬಳೆಗಳ ನಿನಾದ ಸ್ಪಷ್ಟವಾಗಿ ಕೇಳಿಸಿತು. ಹಿಂದಿನ ಸೀಟಿನಲ್ಲಿ ಅವಳು ಅಲುಗಾಡುತ್ತಿರಬೇಕು ಎಂದುಕೊಂಡ. ರಸ್ತೆಯ ತುದಿಗೆ ಬಂದು ನಿಲ್ಲಿಸಿ ಕಾರ್ 'ಆಫ್' ಮಾಡಿ ಹಿಂತಿರುಗಿ ನೋಡಿದಾಗ ಅವಳು ಸೀಟ್‌ನ ಮೇಲೆ ಕಾಣಿಸಲಿಲ್ಲ. ಆಶ್ಚರ್ಯದಿಂದ ಅತ್ತಿತ್ತ ಕತ್ತು ತಿರುಗಿಸಿ ಕಿಟಕಿಯಾಚೆ ನೋಡಿದಾಗ ಅವಳು ಆಗಲೇ ಫುಟ್‌ಪಾತ್ ದಾಟಿ ಹೋಗುತ್ತಿದ್ದಳು. ಇವನತ್ತ ನೋಡಿ ಮುಗುಳು ನಕ್ಕು ಕೈಬೀಸಿದಳು. ರಘು ಕೈಬೀಸಿದ, ಮುಂದಿನ ಕ್ಷಣಗಳಲ್ಲಿ ಅವಳು ಮಳೆ ಹನಿಗಳ ಮಸಕಿನಲ್ಲಿ ಮರೆಯಾಗಿದ್ದಳು. ಯಾವಳೊ ಕಿಲಾಡಿ ಹುಡುಗಿಯ ಹಾಗೆ ಇದ್ದಾಳೆ, ಇವಳು ಕಾರಿನೊಳಗೆ ಬಂದದ್ದೂ ಗೊತ್ತಾಗಲಿಲ್ಲ, ಕೆಳಗಿಳಿದು ಹೋದದ್ದೂ ತಿಳಿಯಲಿಲ್ಲ ಅಂದುಕೊಂಡ ರಘು. ಒಂದುಕ್ಷಣ ಮಳೆಯಲ್ಲಿ ನೆನೆಯುತ್ತಲೇ ಹೋಗುತ್ತಿರುವ ಅವಳನ್ನು ನೋಡುತ್ತ ಕುಳಿತ. ಮಳೆಯ ತೆರೆಗಳ ಆಚೆ ಅವಳು ಮರೆಯಾದ ಕೂಡಲೇ ಮತ್ತೆ ಕಾರ್ ಸ್ಟಾರ್ಟ್ ಮಾಡಿ ಮನೆಯತ್ತ ಹೊರಟ.

ಕಾಂಪೌಂಡಿನೊಳಗೆ ಪ್ರವೇಶಿಸಿ ಕಾರನ್ನು ಗ್ಯಾರೇಜಿನ ಮುಂದೆ ನಿಲ್ಲಿಸಿ ಮನೆಯತ್ತ ಹೆಜ್ಜೆ ಹಾಕಿದಾಗ ಬಾಗಿಲಲ್ಲೆ ರಮೇಶ ಸಿಕ್ಕಿದ. 'ಅಣ್ಣ ನಿನ್ನ ಹುಡುಕ್ಕೊಂಡು ಯಾರೊ ಒಬ್ರು ಲೇಡಿ ಬಂದಿದ್ರು' – ಎಂದ. ರಘುವಿಗೆ ಆಶ್ಚರ್ಯ. ಮನೆಯವರೆಗೂ ಹುಡುಕಿಕೊಂಡು ಬರುವ ಸ್ನೇಹಿತರೇ ಅಪರೂಪ; ಅದರಲ್ಲೂ ಹೆಂಗಸೊಬ್ಬಳು ತನ್ನನ್ನು ಹುಡುಕಿಕೊಂಡು

ಬಂದಿದ್ದಳು ಎಂದರೆ? 'ಯಾರೊ ಅದು, ಯಾರೂಂತ ಹೆಸರು ಹೇಳಿದ್ರೇನೊ?' ಎಂದು ವಿಚಾರಿಸಿದ. 'ಇಲ್ಲಣ್ಣ, ನಾನು ಅವ್ರನ್ನ ಮೊದ್ಲು ನೋಡಿರ್ಲಿಲ್ಲ. ನಿನ್ನ ಹೆಸ್ರು ಹೇಳಿ ಇದಾರ ಅಂದ್ರು. ಇಲ್ಲ ಅಂದೆ. ಸರಿ ಬರ್‍ತೀನಿ ಅಂದ್ರು. ನಿಮ್ಮ ಹೆಸರೇನು, ಏನಾದ್ರೂ ಹೇಳೋದು ಇದ್ಯಾ ಎಂದು ಕೇಳಿದೆ. ಅಂಥಾದ್ದೇನೂ ಅರ್ಜೆಂಟ್ ಇಲ್ಲ, ಫೋನ್ ಮಾಡ್ತೀನಿ ಅಂತ ಹೇಳಿ ಸರಸರನೆ ಗೇಟಾಚೆ ಹೊರ್‍ಟ್ಹೋದ್ರು,' -- ಎಂದ ರಮೇಶ್. 'ಸರಿ, ಬಿಡು. ಅವರು ಫೋನ್ ಮಾಡಿದ್ರೆ ನೋಡೋಣ' – ಎನ್ನುತ್ತ ರಘು ಒಳಗೆ ಬರುತ್ತಿದ್ದವನು, ಥಟ್ಟನೆ ಏನೊ ನೆನಪು ಮಾಡಿಕೊಂಡವನಂತೆ, 'ಅವ್ರು ತುಂಬಾ ವಯಸ್ಸಾದೋರೊ, ಚಿಕ್ಕವ್ರೊ?' ಎಂದು ಕೇಳಿದ. ಹೊರಗೆ ಹೋಗುತ್ತಿದ್ದ ರಮೇಶ್ ಹಿಂತಿರುಗಿ ನೋಡುತ್ತ ಹೇಳಿದ: 'ಏನು ನನಗಿಂತ ಐದಾರು ವರ್ಷ ದೊಡ್ಡೋರಿರ್‍ಬ್ಹುದು ಅಷ್ಟೆ. ಹಸಿರು ಸೀರೆ, ಫುಲ್ ಹಸಿರಲ್ಲೆ ಇದ್ದಂಗಿತ್ತು.'

ರಮೇಶ್ ಹೊರಟುಹೋದ. ಮುಂದಿನ ಕ್ಷಣಗಳಲ್ಲಿ ಅವನ ಮೋಟರ್‌ಸೈಕಲ್ ಪಟಪಟನೆ ಸದ್ದು ಮಾಡುತ್ತ ಗೇಟಿನಾಚೆ ಹೊರಟು ಹೋಯಿತು. ರಘು ಒಂದು ಕ್ಷಣ ಯೋಚಿಸುತ್ತ ನಿಂತು ಒಳಗೆ ನಡೆದ. ಮಹಡಿಯ ಮೆಟ್ಟಿಲು ಗಳನ್ನು ಸರಸರನೆ ಹತ್ತುತ್ತಿದ್ದಾಗ ಏನೊ ಮತ್ತೆ ನೆನಪು ಬಂತು: ಜೋರು ಮಳೆಯಲ್ಲಿ ನೆಂದು ತನ್ನ ಕಾರಲ್ಲಿ ತನಗೇ ಗೊತ್ತಿಲ್ಲದೆ ಕುಳಿತು, ತಾನು ಕಾರು ನಿಲ್ಲಿಸುತ್ತಿದ್ದಂತೆಯೇ ಮಿಂಚಿನ ವೇಗದಲ್ಲಿ ಕಾರಿನಿಂದಾಚೆ ಹೋಗಿದ್ದ ಆ ಹೆಣ್ಣು; ತನಗಿಂತಲೂ ಚಿಕ್ಕವಳು, ಬಹುಶಃ ಶಾಲಿನಿಯ ವಯಸ್ಸೊ, ಅಥವ ಒಂದೆರಡು ವರ್ಷ ದೊಡ್ಡ ವಳೊ ಇರಬಹುದು; ಹೌದು, ಅವಳು ಧರಿಸಿದ್ದದ್ದೂ 'ಫುಲ್' ಹಸಿರು ಉಡುಪು.

ರಾತ್ರಿ ಊಟ ಮಾಡಿದ ಮೇಲೆ, ಮಲಗಿ ಕೊಂಡ ಮೇಲೂ ರಘುವಿಗೆ ಆ ಮಳೆಯಲ್ಲಿ ನೆಂದ ಹುಡುಗಿಯ ನೆನಪು ಮತ್ತೆಮತ್ತೆ




ಅಂದ್ರೆ, ಇಲ್ಲೂ ಹುಡುಗಿಯರದೇ ಮೇಲುಗೈ ಅಂದ ಹಾಗಾಯ್ತು ಅಲ್ವೇನ್ರಿ?

ಬಂದಿತು. ಸಂಜೆ ನಡೆದದ್ದನ್ನು ಮೆಲುಕು ಹಾಕಿದಾಗ ಅವಳುಟ್ಟಿದ್ದ ಹಸಿರು ಉಡುಪು ಸ್ಪಷ್ಟವಾಗಿ ನೆನಪಿಗೆ ಬಂದಿತು. ದೊಡ್ಡ ಬಾರ್ಡರಿನ ಸೀರೆ, ವಿನ್ಯಾಸ ತುಂಬಿದ ಸೆರಗು, ಅದೇ ವರ್ಣದ ಕುಬುಸ-ತೋಳ ತುದಿಯಲ್ಲಿ ಕುಬುಸದ ಅಂಚಿನಲ್ಲಿ ಮತ್ತೆ ವಿನ್ಯಾಸದ ಬಾರ್ಡರ್, ಅವಳ ದಿಟ್ಟ ವ್ಯಕ್ತಿತ್ವ, ಹಗುರವಾದ ಕಿಲಕಿಲ ನಗೆ, ಆಳವಾದ ದನಿ– ಮತ್ತೆಮತ್ತೆ ಅವನ ನೆನಪಿಗೆ ಬಂದಿತು.

ಸಂಜೆ ತಾನಿಲ್ಲದಿದ್ದಾಗ ತನ್ನನ್ನು ಹುಡುಕಿಕೊಂಡು ಬಂದ ಹುಡುಗಿಯದೂ ಸಂಪೂರ್ಣ ಹಸಿರು ಉಡುಪು. ಇದೆಂಥ ಕಾಕತಾಳೀಯ, ವಿಚಿತ್ರ ಎಂದುಕೊಂಡ ರಘು. ಒಂದೇ ದಿನ, ಸುಮಾರು ಒಂದೇ ವೇಳೆಯಲ್ಲಿ, ಒಂದೇ ವಿವರಗಳ ಎರಡು ಹೆಣ್ಣುಗಳು ತನ್ನನ್ನು ಹುಡುಕಿಕೊಂಡು ಬಂದಿದ್ದಾರೆ. 'ಹೂಂ, ಐಸಾಭೀ ಹೋತಾ ಹೈ' – ಎಂದುಕೊಂಡು ಭುಜ ಹಾರಿಸಿ ಶಾಂತವಾಗಿ ಮಲಗಿ ನಿದ್ದೆ ಮಾಡಲು ರಘು ಪ್ರಯತ್ನಿಸಿದ. ಸ್ವಲ್ಪ ಹೊತ್ತಿಗೆಲ್ಲ ನಿದ್ದೆಯೂ ಆವರಿಸಿಕೊಂಡಿತು.

ಮರು ಬೆಳಗ್ಗೆಯೇ ಶಾಲಿನಿಯ ಫೋನ್

ಬಂದಿತ್ತು. 'ಈ ದಿನ ಖಂಡಿತ ಮದ್ರಾಸ್‌ಗೆ ಹೊರಡುತ್ತಿರುವುದಾಗಿ' ರಘು ಅವಳಿಗೆ ಹೇಳಿದ. 'ರೆನಾಲ್ಟ್‌ನಲ್ಲಿ ಬರ್ತೀರಾ?' ಎಂದು ಒಂದು ಅನಿರೀಕ್ಷಿತ ಪ್ರಶ್ನೆಯನ್ನು ಶಾಲಿನಿ ಕೇಳಿದಳು. ರಘು ಈ ರೀತಿ ಯೋಚಿಸಿರಲಿಲ್ಲ. ಮಧ್ಯಾಹ್ನದ ಅಥವ ಸಂಜೆಯ ವಿಮಾನದಲ್ಲಿ ಹೋಗುವುದು ಎಂದು ನಿರ್ಧರಿಸಿದ್ದ. 'ಅದನ್ನ ನಾನು ಯೋಚ್ನೆ ಮಾಡಿಲ್ಲ. 'ಪ್ಲೇನ್‌ನಲ್ಲಿ ಬರೋಣಾಂತಿದ್ದೆ' ಎಂದ. 'ಸರಿ ನಿಮ್ಮಿಷ್ಟ ಪ್ಲೇನ್‌ನಲ್ಲೆ ಬನ್ನಿ' ಎಂದಳು ಶಾಲಿನಿ.

ಕಾರಿನಲ್ಲಿ ಒಬ್ಬನೇ ಊರಿಂದೂರಿಗೆ ಡ್ರೈವ್ ಮಾಡಿಕೊಂಡು ಹೋಗುವುದು ಬೇಡ, ಕ್ಷೇಮವಲ್ಲ ಎಂದುಬಿಟ್ಟರು ರಾಮರಾಯರು. ರೆನಾಲ್ಟ್ ತುಂಬ ವೇಗವನ್ನು ಪಡೆದುಕೊಳ್ಳುವ ಕಾರು. ನೀನು ಅದರಲ್ಲಿ ಹೊರಟರೆ ನಮಗಿಲ್ಲಿ ಯೋಚನೆ ಪ್ರಾರಂಭವಾಗುತ್ತದೆ ಎಂದರು ಸೀತಾಬಾಯಿ. ರೆನಾಲ್ಟ್‌ನಲ್ಲಿ ಹೋಗಲು ರಘು ಆಲೋಚಿಸಿರಲಿಲ್ಲ. ಅಷ್ಟು ದೂರ ಸ್ವತಃ ಡ್ರೈವ್ ಮಾಡಿಕೊಂಡು ಹೋಗುವಾಗ ತುಂಬಾ ಆಯಾಸವೂ ಆಗಬಹುದು ಅನ್ನಿಸಿತ್ತು. ವಿಮಾನದಲ್ಲೆ ಹೋಗಲು ನಿರ್ಧರಿಸಿ, ಇಂಡಿಯನ್ ಏರ್‌ಲೈನ್ಸ್ ಆಫೀಸಿಗೆ ಫೋನ್ ಮಾಡಿದ. ಮಧುರೈ-ಬೆಂಗಳೂರು-ಮದ್ರಾಸ್ ವಿಮಾನದಲ್ಲಿ ಸೀಟು ಖಾಲಿ ಇದೆ ಎಂದು ಕೇಳಿ, ಒಂದು ಸೀಟ್ ಬುಕ್ ಮಾಡಿಸಿಬಿಟ್ಟ. ಮಧ್ಯಾಹ್ನ ಹನ್ನೆರಡೂವರೆಗೆ ವಿಮಾನ ಹೊರಡುವುದಿತ್ತು. ಕೂಡಲೇ ಮದ್ರಾಸ್‌ಗೆ ಫೋನ್ ಮಾಡಿ ಹನ್ನೆರಡೂವರೆ ಫ್ಲೈಟ್‌ಗೆ ಹೊರಡುತ್ತಿರುವ ಬಗ್ಗೆ ತಿಳಿಸಿದ. 'ನಾವು ಏರ್‌ಪೋರ್ಟ್‌ಗೆ ಬರ್ತೀವಿ' – ಎಂದ ಶಾಲಿನಿಯ ಉತ್ಸಾಹದ ದನಿ ಕೇಳಿಸಿತು.

ಸಣ್ಣ ಸೂಟ್‌ಕೇಸ್‌ನಲ್ಲಿ ಬಟ್ಟೆ ಜೋಡಿಸಿಟ್ಟುಕೊಂಡು ಹನ್ನೊಂದೂವರೆ ಸುಮಾರಿಗೆ, ಏರ್‌ಪೋರ್ಟ್ ತಲುಪಿದ್ದ. ರಂಗನಾಥ ಬಂದು ಗೆಳೆಯನನ್ನು ತನ್ನ ಕಾರಿನಲ್ಲಿ 'ಡ್ರಾಪ್' ಮಾಡಿಹೋದ. ಟಿಕೆಟ್‌ಕೊಂಡು, ಬೇರೆ ಕಾಗದಗಳನ್ನು ಪಡೆದುಕೊಂಡು, ಸೂಟ್‌ಕೇಸನ್ನು ಸೆಕ್ಯುರಿಟಿಗೆ ಕೊಟ್ಟು, ಚೆಕ್ ದಾರಿಯಿಂದ ಒಳಗಿನ ಲೌಂಜ್‌ಗೆ ಬಂದ. ಆಗಲೇ ಸೂಟ್‌ಕೇಸ್ ಚೆಕ್ ಆಗಿ 'ಟ್ಯಾಗ್' ಆಗಿ ಕೈಗೆ ಬಂತು. ಮುಂದಿನ ಅರ್ಧಘಂಟೆಯಲ್ಲಿ ರಘು ವಿಮಾನದೊಳಗಿದ್ದ. ಕಿಟಕಿಯ ಬದಿಯ ಸೀಟು. ವಿಮಾನದಲ್ಲಿ ಗದ್ದಲವಿರಲಿಲ್ಲ. ಖಾಲಿಖಾಲಿ. ಮಧುರೈಯಿಂದ ಬಂದಿದ್ದ ಷರ್ಟ್-ಪಂಚೆಧಾರಿ ಪ್ರಯಾಣಿಕರನೇಕರು ಸೀಟಿಗೊರಗಿ ನಿದ್ದೆ ಮಾಡುತ್ತಿದ್ದರು. ಒಂದೆರಡು ಕಡೆ ಗೊರಕೆ ಸದ್ದೂ ಕೇಳಿಸುತ್ತಿತ್ತು. ಸೀಟ್‌ನಲ್ಲಿ ಕುಳಿತು ರಘು ಬೆಲ್ಟ್ ಕಟ್ಟಿಕೊಂಡ. ಹನ್ನೆರಡೂವರೆಗೆ ಮೇಲೆದ್ದ ವಿಮಾನ, ರಘು



ಹಿರಿಯವಳು ವೈಜಯಂತಿ... ಜಯಂತಿ... ಜಯಲಲಿತಾ... ಜಯಪ್ರದಾ... ಅಂತ... ಯಾರಾಗಬಹುದು ನಿಮ್ಮಗನಿಗೆ...?

ಅತ್ತಿತ್ತ ನೋಡಿ– ಅದೂ ಇದೂ ಯೋಚನೆ ಮಾಡುವುದರಲ್ಲಿ ಮದ್ರಾಸ್ ಏರ್‌ಪೋರ್ಟ್‌ನಲ್ಲಿ ಇಳಿಯುತ್ತಿತ್ತು. ರಘು ಬೆಲ್ಟ್ ಕಳಚಿ ಎದ್ದು ವಿಮಾನದಿಂದ ಹೊರಗೆ ಬಂದು ಮುಂದು ವರಿದು ನಡೆದು ಮದ್ರಾಸ್ ಏರ್‌ಪೋರ್ಟ್ ಲೌಂಜ್‌ಗೆ ಬಂದು ಸುತ್ತಲೂ ನೋಡಿದಾಗ, ಎದುರಿನಲ್ಲೇ ಸುಧಾ, ಶಾಲಿನಿಯ ಸುಂದರ ಸಂತೋಷದ ಮುಖಗಳು ಕಂಡವು. ಅವ ರಿಬ್ಬರೂ ಕೈಯೆತ್ತಿ ಆಡಿಸಿದರು.

ಮುಂದಿನ ನಿಮಿಷಗಳಲ್ಲಿ ರಘು ಅವರಿಬ್ಬ ರೊಂದಿಗೆ ಸ್ಟಾಂಡರ್ಡ್-2000 ಭವ್ಯ ಕಾರಿನಲ್ಲಿ ಕುಳಿತಿದ್ದ. ಡ್ರೈವರ್ ನಡೆಸುತ್ತಿದ್ದ ಆ ಕಾರು ಅಲುಗಾಡದೆ-ಕುಲುಕಾಡದೆ ಮದ್ರಾಸ್ ರಸ್ತೆ ಗಳಲ್ಲಿ ಓಡುತ್ತಿತ್ತು. 'ಅಂತೂ ಈ ಸಲ ಮನಸ್ಸು ಮಾಡ್ಬಿಟ್ರಿ,' ಎಂದಳು ಶಾಲಿನಿ. 'ಈ ಸಲ ಮನಸ್ಸು ಮಾಡ್ಲೇಬೇಕಾಗಿತ್ತು. ಇಲ್ದಿದ್ರೆ ಈ ಹಾರಾಡೋ ಮನಸ್ಸನ್ನ ಹಿಡಿತಕ್ಕೆ ತರೋದೇ ಕಷ್ಟ ಆಗ್ತಿತ್ತು'– ಎಂದ ರಘು. ಇದ್ದಕ್ಕಿದ್ದ ಹಾಗೆಯೇ ತನ್ನ ಮೈಮನಸ್ಸು ನಿರಾಳವಾಗಿವೆ, ಉಲ್ಲಸಿತಗೊಂಡಂತಿವೆ ಎಂದನ್ನಿಸಿತ್ತು ಅವನಿಗೆ. ಶಾಲಿನಿಯನ್ನು ನೋಡಿ ಮಾತನಾಡಿಸಿದ ಕೂಡಲೇ ಅವನ ಭಾವನೆಗಳಲ್ಲಿ ಉಲ್ಲಾಸ ತುಂಬಿಕೊಂಡು ಯಾವ ಒತ್ತಡಗಳೂ ಇಲ್ಲದೆ ಹಗುರವಾಗಿರುವಂತನ್ನಿಸಿತ್ತು.

ಬೆಸೆಂಟ್ ನಗರದಲ್ಲಿ ಸಮುದ್ರತೀರವನ್ನು ನೋಡುತ್ತಿದ್ದ ದೊಡ್ಡ ಬಂಗಲೆ ನಾಣಿಮಾವ ಅವರದು. ಹಿಂದೆ ಹಳೆಯ ಮಾಂಬಲಂ, ಟ್ರಿಪ್ಲಿಕೇನ್‌ಗಳಲ್ಲಿದ್ದವರು ಈ ಏಳೆಂಟು ವರ್ಷಗಳಿಂದ ಬೆಸೆಂಟ್ ನಗರದ ಈ ಮನೆಗೆ ಬಂದಿದ್ದಾರೆ. ಕಟ್ಟಿ ಸಿದ್ಧವಾಗಿದ್ದ ಈ ಮನೆಯನ್ನು ಕೊಂಡುಕೊಳ್ಳಲು ಕಾರಣ, ಆ ಮನೆ ನಾಣಿಮಾವ ಆತ್ಮೀಯರೊಬ್ಬರು ಕಟ್ಟಿದ್ದು; ಅವರು ಅನಿರೀಕ್ಷಿತವಾಗಿ ಹೆಂಡತಿಯನ್ನು ಕಳೆದುಕೊಂಡು, ವಿದೇಶದಲ್ಲಿ ರುವ ಮಗನ ಮನೆಗೆ ಹೋಗಬೇಕಾಗಿ ಬಂದದ್ದರಿಂದ, ಹೊಸದಾಗಿ ಕಟ್ಟಿ ಮುಗಿಸಿದ್ದ ಈ ಸುಂದರ ಬಂಗಲೆಯಲ್ಲಿ ಒಂದು ದಿನವೂ ವಾಸ ಮಾಡಲಿಲ್ಲ. ನಾಣಿಮಾವನೇ ಗೃಹಪ್ರವೇಶ ಮಾಡಿಕೊಂಡು ಇಲ್ಲಿಗೆ ಬರಬೇಕಾಯಿತು. ಗೃಹಪ್ರವೇಶ ಸಮಾರಂಭಕ್ಕೆ ರಘು ತಂದೆ ತಾಯಿ-ತಮ್ಮನೊಂದಿಗೆ ಬಂದಿದ್ದ. ಆಗವನು ಇನ್ನೂ ಇಂಜನಿಯರಿಂಗ್ ಓದುತ್ತಿದ್ದ. ಶಾಲಿನಿ ಲಂಗ ಜಂಪರಿನ ಪುಟ್ಟ ಹುಡುಗಿ.

ನಾಣಿಮಾವ-ಲಕ್ಷ್ಮಿ ಅತ್ತೆ ಬಾಗಿಲಲ್ಲೆ ಕಾದು ನಿಂತಿದ್ದರು– ಭಾವೀಅಳಿಯನನ್ನು ಹೃತ್ಪೂರ್ವಕ ವಾಗಿ ಸ್ವಾಗತಿಸಿದರು. ರಘು, ಶಾಲಿನಿ, ಸುಧಾ ಒಳಗೆ ಬಂದು ಕುಳಿತೊಡನೆ ನಾಣಿಮಾವ ಮನೆಯ ಕ್ಷೇಮಸಮಾಚಾರಗಳನ್ನು ವಿಚಾರಿ ಸಲು ಪ್ರಾರಂಭಿಸಿದ್ದರು. ರಘುವಿನ ಕಾರ್ಖಾನೆ ಪ್ರಗತಿ, ರೆನಾಲ್ಟ್ ಕಾರ್ ಬಗ್ಗೆ ಹೊಸ ಸಮಾಚಾರಗಳು– ಇವೆಲ್ಲ ಕೇಳಿದರು.

ಊಟ ಮಾಡಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು ಸಂಜೆ ಶಾಲಿನಿ-ರಘು ಇಬ್ಬರೇ ಸಮುದ್ರತೀರದಲ್ಲಿ ಹೋಗಿ ಕುಳಿತರು. ಸಮುದ್ರದ ತಂಗಾಳಿ ಹಾಯೆನಿಸಿ ಶಾಲಿನಿ ಪಕ್ಕದಲ್ಲಿ ಕುಳಿತು ಕನಸುಗಳನ್ನು ಕಾಣುವುದು ಸಾಧ್ಯವಾಯಿತು. ರಘು ನಿಧಾನವಾಗಿ ತನ್ನ ಮನಸ್ಸನ್ನು ಬರಿದು ಮಾಡಿದ. 'ಶಾಲಿ, ಈ ಸಲ ಯಾಕೊ ನೀನು ಇಲ್ಲಿಗೆ ವಾಪಸ್ಸಾದ್ಮೇಲೆ ನನಗೆ ಯಾವುದರಲ್ಲೂ ಕಾನ್ಸೆಂಟ್ರೇಟ್ ಮಾಡೊಕ್ಕೆ ಆಗ್ಲೇ ಇಲ್ಲ. ಒಂದ್ವಾರ ಚಿತ್ರವಿಚಿತ್ರವಾಗಿ ಆಡ್ತಿದ್ದೆ ಅಂತ ಕಾಣುತ್ತೆ. ಒಂದಿನ ಸ್ಪೀಡಾಗಿ ಡ್ರೈವ್ ಮಾಡ್ಬಿಟ್ಟೆ– ರಾತ್ರಿ ಒಂದಿಷ್ಟು ಜ್ವರಾನೂ ಬಂತು' ಶಾಲಿನಿ ಮೃದುವಾಗಿ ನಕ್ಕಳು. ಗಂಭೀರವಾಗಿ ಕುಳಿತಳು. 'ಈಗ ಹ್ಯಾಗಿದೆ?' ಎಂದು ಮೆಲ್ಲನೆ ಕೇಳಿದಳು. ರಘು ಮರಳಿನ ಮೇಲಿದ್ದ ಅವಳ ಕೈಹಿಡಿದು ಅದುಮುತ್ತ ಹೇಳಿದ: 'ಅವುಗಳ ಯಾವ ನೆನಪು ಇಲ್ಲ. ಈಗ ನಂಗೆ ಕಾಣಿಸ್ತಿರೋದು ನೀನೊಬ್ಳೆ. ಮನಸ್ಸು ಹಾಯಾಗಿ ಖುಷಿಯಾಗಿದೆ.' 'ನಿಮಗೆ ಜ್ವರ ಬಂದು ಮಲಗಿದ ಮಾರನೇ ದಿನಾನೇ ನಾನು ಫೋನ್ ಮಾಡಿದ್ದೆ. ಅತ್ತೆ ನಿಮ್ಮ ಸ್ಥಿತಿ ಹೇಳಿದ್ರು. ನಾನೇ ಬೆಂಗಳೂರಿಗೆ ಹೊರಟುಬಿಡ್ತೀನಿ ಅಂತ ಹಠ ಹಿಡಿದೆ. ನಿಮ್ಮನ್ನೆ ಇಲ್ಲಿಗೆ ಕರೆಸ್ತೀನಿ ಅಂತ ಅಣ್ಣ ಅಂದ್ರು. ಅದಕ್ಕೆ ಬರಲೇಬೇಕೂಂತ

## ಸಮಾಧಾನ

ನೀಲಾಂಬರದ
ಕೆಳಗೇ
ಇರುವ
ಸುಂದರಿ
ನಿನಗೆ
'ಪೀತಾಂಬರ'ವೇ ?



● ಎಸ್. ಬಿ. ಗೊಂಡಬಾಳ 'ಚೈತ್ರ'

ನಿಮಗೆ ಬಲವಂತ ಮಾಡಿದ್ದು. ಅಲ್ಲಿನ ಎಲ್ಲ ಮರ್ರು ಇಲ್ಲಿಗೆ ಬಂದು ಹಾಯಾಗಿ ನಮ್ಜೊತೆ ಇರ್ಬೇಕೂಂತ ನಂಗೆ ತುಂಬ ಅನ್ನಿಸ್ತು'– ಎಂದಳು ಶಾಲಿನಿ. 'ಓಹ್, ಹಾಗಾದ್ರೆ, ನನ್ನ ಪ್ರವಾಸ-ವೆಲ್-ಪ್ಲಾನ್ಡ್ ಅಂತಾಯ್ತು. ಅತ್ತೆ-ಸೊಸೆ ಎಲ್ಲ ಮೊದ್ಲೆ ಚೆನ್ನಾಗಿ ಮಾತಾಡ್ಕೊಂಡು ಬಿಟ್ಟಿದೀರಿ' – ಎಂದ ರಘು. 'ಹೌದು ಅವ್ರಿಗೂ ಎಲ್ಲವನ್ನೂ ನನಗೆ ಹೇಳ್ದೆ ಸಮಾಧಾನನೇ ಇರ್ಲಿಲ್ಲ. ನೀವು ಯಾವಾಗ್ಲೊ ಮನೆಗೆ ಬರೋದು, ತುಂಬಾ ಕೆಲ್ಸ ಮಾಡ್ತಿ ರೋದು, ವೇಗವಾಗಿ ಡ್ರೈವ್ ಹೋಗೋದು ಇವೆಲ್ಲ ಅತ್ತೆ ನಂಗೆ ಫೋನ್‌ನಲ್ಲಿ ಹೇಳಿದ್ರು'– ಎಂದಳು ಶಾಲಿನಿ.

ಸೌಮ್ಯವಾಗಿ ಮೇಲೆದ್ದು ಮುಂದೆ ಬಂದು ಮರಳಿನ ಮೇಲೆ ಜಾರಿ ಇಂಗಿಹೋಗುತ್ತಿದ್ದ ಅಲೆಗಳನ್ನೆ ಇಬ್ಬರೂ ನೋಡುತ್ತ ಕುಳಿತರು. ಸಂಜೆಯವರೆಗೂ ತೀಕ್ಷ್ಣವಾಗಿದ್ದ ಬಿಸಿಲು ನಿಧಾನವಾಗಿ ತಂಪಾಗುತ್ತಿತ್ತು. ಸುತ್ತಲೂ ನಸುಗತ್ತಲು ಆವರಿಸಿಕೊಳ್ಳುತ್ತಿತ್ತು. ದೂರದಲ್ಲಿ ಸಮುದ್ರದಾಚೆ ಆಕಾಶ ಕೆಂಪಾಗುತ್ತಿತ್ತು. ರಘು ಕಾರ್ಖಾನೆಯ ಪ್ರಗತಿಯನ್ನು ಅತ್ಯುತ್ಸಾಹದಿಂದ ಶಾಲಿನಿಗೆ ಹೇಳಿದ. 'ವೃತ್ತಿಯಲ್ಲಿ ಈಗ ನಾನೊಂದು ಉತ್ತಮ ಮಟ್ಟ ಮುಟ್ಟಿದೀನಿ. ನಮ್ಮ ಕಾರ್ಖಾನೆ ತಾಂತ್ರಿಕ ವಲಯಗಳಲ್ಲಿ ಒಳ್ಳೆಯ ಗೌರವ ಸಂಪಾದಿಸುತ್ತಿದೆ' – ಎಂದ.

ಶಾಲಿನಿಗೂ ತುಂಬ ಸಂತೋಷವಾಗಿತ್ತು. ಮದುವೆ ದಿನಾಂಕ ನಿರ್ಧಾರದ ಬಗ್ಗೆ ರಘು ಹೇಳಿ, 'ನಿಂಗೆ ಈ ಸಮಾಚಾರ ಕೇಳಿ ಏನನ್ನಿಸ್ತು ?' ಎಂದು ಕೇಳಿದ. ಶಾಲಿನಿಯ ಮುಖದಲ್ಲಿ ರಂಗು ಕಾಣಿಸಿಕೊಂಡಿತು. ಆ ಬಿಳುಪು ಸುಂದರ ಮುಖದಲ್ಲಿ ಆಕಾಶದ ಸುಂದರ ವರ್ಣ ಮೂಡಿತೇನೋ ಅನ್ನಿಸಿತು ಅವನಿಗೆ. ಮುಖದ ಮೇಲೆಲ್ಲ ಹಾರಾಡುತ್ತಿದ್ದ ಕೂದಲ ಸುರುಳಿಗಳನ್ನು ಹಿಂದಕ್ಕೆ ತಳ್ಳುತ್ತ ಮೆಲ್ಲನೆ ಶಾಲಿನಿ ಹೇಳಿದಳು; 'ಈ ಸಮಾಚಾರ ಕೇಳಿ ನಿಮಗೆ ಏನನ್ನಿಸಿತೋ, ನನಗೂ ಅದೇ ಅನ್ನಿಸ್ತು.'

ಬಹಳ ಹೊತ್ತು ಇಬ್ಬರೂ ಅಲ್ಲೆ ಕುಳಿತಿದ್ದರು. ಕತ್ತಲು ದಟ್ಟವಾಗಿ ದೂರದಲ್ಲಿ ದೀಪಗಳು ಹಚ್ಚಿಕೊಂಡವು. ಸಮುದ್ರದ ಮೇಲೆ ಎಲ್ಲೊ ದೂರದಲ್ಲಿ ಎತ್ತರವಾಗಿ ದೊಡ್ಡ ದೀಪ ಕಾಣಿಸಿಕೊಂಡಿತು. ಹಕ್ಕಿಗಳ ಹಿಂಡು ಹಾರಾಡುತ್ತ ಹೋಗುತ್ತಿದ್ದದ್ದು ನಿಧಾನವಾಗಿ ಕಡಿಮೆಯಾಗಿತ್ತು. ಅಲೆಗಳ ಆವೇಶ ಹೆಚ್ಚಿದಂತಾಗಿತ್ತು. ಅಲೆಗಳು ಬಂದೊರಗುವ ಕಡೆ ಬೇಕಾದಷ್ಟು ಜನ. ಅಲೆ ಬಂದು ಬಡಿದಾಗ ಕಿರಿಚಿ ಮಂಡಿಯವರೆಗೂ ಉಡುಪು ಸರಿಸುತ್ತಿದ್ದ ಗಂಡಸರು-ಹೆಂಗಸರು, ಸುತ್ತಲೂ ಮರಳಿನ ಮೇಲೆ ಈಗ ಅನೇಕ ಕುಟುಂಬಗಳು, ತಮ್ಮಂತೆಯೆ ಯುವ ಜೋಡಿಗಳು, ಒಂಟಿ ವೃದ್ಧರು– ಇವರೆಲ್ಲ ಕಂಡರು.

ರಘುವಿನ ಮನಸ್ಸಿನ ತುಂಬಾ ಮಧುರ ಭಾವನೆಗಳು ತುಂಬಿಕೊಂಡಿದ್ದವು. ಗಾಳಿಗೆ ಶಾಲಿನಿಯ ಸೀರೆಯ ಸೆರಗಿನ ಅಂಚು ಹಾರಿ ಬಂದು ಬಡಿದಾಗ ಯಾವುದೊ ಸುವಾಸನೆ ತೇಲಿಬಂದು ಅವನ ಉಸಿರಾಟದ ಮೂಲಕ ಹೃದಯ ತಲುಪಿದಂತನ್ನಿಸುತ್ತಿತ್ತು.

ಆಗಲೇ ಎದುರು ಅಲೆಯೊಂದಿಗೆ ಆಟವಾಡುತ್ತಿದ್ದ ಹೆಣ್ಣೊಂದು ಕಾಣಿಸಿತು. ಇಡೀ ಹಸಿರು ಉಡುಪಿನ ತುಂಬುಗೂದಲ ಹೆಣ್ಣು. ರಘು ಬೆಚ್ಚಿ ನೋಡಿದ.

● (ಸಶೇಷ)

ತುಷಾರ

# ಪಂಚಕಜ್ಜಾಯ

## ವ್ಯಕ್ತಿತ್ವದಲ್ಲಿ ಸೊಗಸಿರಬೇಕು – 5

● ರಾಧಾ

ಹೋದ ತಿಂಗಳು ನಾನು ಹದಿಹರೆಯದವರ ಬಗ್ಗೆ ತಿಳಿಸಲು ಪ್ರಾರಂಭಿಸಿದ್ದೆ. ಹದಿನೈದು ವರ್ಷಗಳಾದ ನೇಲೆ ಹುಡುಗಿಯರು ಬದುಕಿನಲ್ಲಿ ತುಂಬ ಜಾಗರೂಕತೆಯಿಂದ ಇರಬೇಕು, ಗಂಡು ಹುಡುಗರೊಂದಿಗೆ– ಗಂಡಸರೊಂದಿಗೆ ಗಂಭೀರವಾಗಿ ನಡೆದುಕೊಳ್ಳಬೇಕು, ಚೆಲ್ಲುಚೆಲ್ಲುತನ ಕೂಡದು ಎಂದು ಹೇಳಿದ್ದೆ. ಹೌದು: ಹೆಣ್ಣುಮಕ್ಕಳು ಸಹಜವಾಗಿ ಜಾಗರೂಕರಾಗಿರುತ್ತಾರೆ. ಆದರೆ, ಈಗಿನ ಕಾಲದಲ್ಲಿ ಶಾಲೆ, ಕಾಲೇಜು, ಉದ್ಯೋಗ ಎಂದು ವಿಧವಿಧ ಗುಣಗಳ ಜನರೊಂದಿಗೆ ಒಡನಾಡಬೇಕಾಗುತ್ತದೆ. ಆದ್ದರಿಂದ, ಅವರವರ ಹುಷಾರಿನಲ್ಲಿ ಅವರವರಿರಬೇಕು. ಪ್ರತಿಯೊಂದು ಹೆಜ್ಜೆ ಇಡುವಾಗಲೂ ತುಂಬಾ ಯೋಚಿಸಿ ಮುಂದುವರೆಯಬೇಕು. ನಿಮ್ಮ ಉಡುಪುಗಳ ಬಗ್ಗೆ ಯಾವಾಗಲೂ ನಿಮಗೆ ಗಮನವಿರಲಿ.

ನಾನು ಕೆಲ ಹುಡುಗಿಯರನ್ನು ನೋಡಿದ್ದೇನೆ: ಏನೂ ಗೊತ್ತಿಲ್ಲದ ಅಮಾಯಕರೂ ಇದ್ದಾರೆ, ನನಗೆಲ್ಲ ಗೊತ್ತು, ಏನಾಗುತ್ತೆ ಮಹಾ ಎನ್ನುವವರೂ ಇದ್ದಾರೆ. 'ಜಯ ಇರುವವರೆಗೂ ಭಯ ಇಲ್ಲ'– ನಿಜ. ಆದರೆ, ಎಲ್ಲವನ್ನೂ ತಿಳಿದುಕೊಂಡಿರುವುದು, ಆಲೋಚಿಸುವುದು, ನಿರೀಕ್ಷಿಸುವುದು ಒಳ್ಳೆಯದಲ್ಲವೇ?

ಇನ್ನೂ ಒಂದು ಸಲಹೆ ಕೊಡುತ್ತೇನೆ: ನಿಮ್ಮ ಮನೆಯಲ್ಲೊ, ನಿಮ್ಮ ಗೆಳತಿಯರ ಮನೆಯಲ್ಲೊ ಅಜ್ಜಿಯರು ಇದ್ದರೆ, ಅವರೊಂದಿಗೆ ಮುಕ್ತವಾಗಿ ನಿಮಗೇನು ಅನುಮಾನ ಇದ್ದರೂ ಚರ್ಚಿಸಿ. ಖಂಡಿತ ಉಪಯೋಗವಾಗುತ್ತದೆ. ಮನೆಯ ಹಿರಿಯ ಗಂಡಸರೊಂದಿಗೂ (ತಂದೆ, ತಾತ, ಸೋದರಮಾವ) ಇಂಥ ಮಾತು ತೆಗೆದು ಗಂಡಸರ ಮನೋಭಾವವನ್ನು ಅರ್ಥಮಾಡಿಕೊಳ್ಳಬಹುದು.

ಬೆಂಗಳೂರಿನ ಗೆಳತಿಯೊಬ್ಬರು ಬರೆದಿದ್ದಾರೆ: 'ಯಾವಾಗಲೂ ನಗುಮುಖ ಇರಬೇಕು. ಇನ್ನೊಬ್ಬರನ್ನು ನೋಡಿದಾಗ ಗಂಟಿಕ್ಕಿದ ಮುಖ ಇರಬಾರದು. ನಗುಮುಖ ಇರಬೇಕು ಎಂದು ನೀವು ಬರೆದಿದ್ದೀರಿ. ಹದಿಹರೆಯದ ಹುಡುಗಿಯರನ್ನು ತಿಂದುಬಿಡುವಂತೆ ನೋಡುವ ಗಂಡಸರು, ನಾವು ನಗುಮುಖ ಕಾಣಿಸಿದರೆ ಸುಮ್ಮನಿರುತ್ತಾರೆಯೇ?'

ಗೆಳತಿ, ನನ್ನ ಮಾತಿನ ಸರಿ ಅರ್ಥ ನೀವು ಮಾಡಿಕೊಂಡಿಲ್ಲ. ನಗುಮುಖ ಎಂದಕೂಡಲೇ, ಆಹ್ವಾನಿಸುವ– ಅರ್ಥಕಾಣಿಸುವ ನಗು ಎಂದಲ್ಲ ನಾನು ಹೇಳಿದ್ದು: ನಿಮ್ಮ ಪರಿಚಿತರನ್ನು ನೋಡಿದಾಗ, ಗೆಳತಿಯರನ್ನು ನೋಡಿದಾಗ ಕಾಣಿಸುವ ಮುಗುಳುನಗೆಯಲ್ಲಿ ಆತ್ಮೀಯತೆ ಇರುತ್ತದೆ. ಎಲ್ಲರನ್ನು ನೋಡುವಾಗಲೂ ಹೀಗೆಯೇ ನಗಬೇಕೆಂದಲ್ಲ.

ನಗುಮುಖ ಇರಬೇಕು ಎಂದರೆ, ಮುಖ ಉಲ್ಲಸಿತವಾಗಿರಬೇಕು, ಶಾಂತವಾಗಿ, ತೃಪ್ತಿಯಿಂದ ಕಂಡರೆ ಅಂಥ ಮುಖದಲ್ಲಿ ಏನೋ ಒಂದು ಅತಿ ಸಹಜ ಆಕರ್ಷಣೆಯ ವ್ಯಕ್ತಿತ್ವವಿರುತ್ತದೆ. ಇದು ನಮ್ಮ ವ್ಯಕ್ತಿತ್ವದ ಸಹಜ ಅಂಶವಾಗಬೇಕು. ಚಿಂತೆಯ– ಒತ್ತಡಗಳ ಮುಖ ನಗೆ ಸೂಸಲು ಸಾಧ್ಯವೆ? ಕೆಲವರು ಸುಂದರವಾಗಿ– ಸೌಮ್ಯವಾಗಿ ಮುಖದ ಮೇಲೆ ನಗುವಿನ ಗೆರೆಗಳನ್ನು ಕಾಣಿಸುತ್ತಾರೆ. ಇದರಲ್ಲಿ ಗಂಡುಗಳು ಅಪಾರ್ಥಮಾಡಿಕೊಳ್ಳುವ ನೋಟ ಖಂಡಿತ ಕಾಣಿಸುವುದಿಲ್ಲ.

ಆದರೆ– ನೀವಂದಂತೆ, ಹದಿಹರೆಯದ ಹೆಣ್ಣುಮಕ್ಕಳು ಕಂಡಕಂಡವರನ್ನು ನೋಡಿದಾಗಲೆಲ್ಲ ನಗಬೇಕೆಂದಿಲ್ಲ. ಅಪಾರ್ಥಕ್ಕೆ ದಾರಿಮಾಡಿಕೊಡುವಂತಾಗಬಾರದು.

ಇಲ್ಲೊಂದು ಮಾತು ಹೇಳಿಬಿಡಬೇಕು– ಗಂಡಸರು ಅಪಾಯಕಾರಿಗಳು, ಅವರೊಂದಿಗೆ ಹುಷಾರಾಗಿರಬೇಕು, ಅವರನ್ನು ನೋಡುವುದಕ್ಕೂ ಯೋಚಿಸಬೇಕು ಎಂದೆಲ್ಲ ಹೆಣ್ಣುಮಕ್ಕಳು ಭಾವಿಸಿಬಿಡಬಾರದು. ಪ್ರತಿಯೊಂದು ಹೆಜ್ಜೆಯನ್ನೂ ಎಚ್ಚರದಿಂದ ಇಡಬೇಕಾದ್ದರ ಅಗತ್ಯವನ್ನು ಒತ್ತಿಹೇಳಬೇಕಾಯಿತು, ಅಷ್ಟೆ.

* * *

ಕಿರಿಯ ಸೋದರರು ಕೆಲವರು ಬರೆದಿದ್ದಾರೆ: 'ಸ್ಥಿರವಾಗಿ ಒಂದು ಕೆಲಸವನ್ನು ಮಾಡಲಾಗುತ್ತಿಲ್ಲ. ಮನಸ್ಸು ಹತೋಟಿಯಲ್ಲಿ ಇರುವುದಿಲ್ಲ. ಏನೇನೊ ಒಡಕು ಒಡಕು ಭಾವನೆಗಳು, ಕನಸುಗಳು. ಒಂದೇ ಮನಸ್ಸಿನಿಂದ ಓದುವುದು, ನೆನಪಿನಲ್ಲಿಟ್ಟುಕೊಳ್ಳುವುದು ಆಗುತ್ತಿಲ್ಲ. ಭವಿಷ್ಯದ ಬಗ್ಗೆ ಏನೇನೊ ಆಸೆಗಳಿವೆ.'

ಇದೂ ಒಂದು ರೀತಿಯ ಹದಿಹರೆಯದವರ ಸಮಸ್ಯೆ. ಯೌವನಾವಸ್ಥೆಗೆ ಕಾಲಿಡುತ್ತಿರುವಾಗ ಬೇಡದ್ದೆಲ್ಲ ಕಾಲಿಗೆ ತೊಡರುತ್ತವೆ. ಯಾವುಯಾವುದೊ ವಿಷಯಗಳು ಸೆಳೆಯುತ್ತವೆ. ಸ್ವಂತ ಬೆಳವಣಿಗೆಯ ಕಡೆಗೆ, ಭವಿಷ್ಯದ ಬಗ್ಗೆ ಆಲೋಚನೆಯೇ ಇಲ್ಲದಂತೆ, ಒಂದು ನಿಶ್ಚಿತ ಗುರಿ ಇಲ್ಲದಂತೆ ಯುವಕರು ಕಾಲಕಳೆಯುತ್ತಾರೆ. ಓದು– ಕಾಲೇಜ್‌ಗಿಂತಲೂ ಹೊರಗಿನ ನೋಟ– ಹರಟೆ– ಸಿನಿಮಾಗಳೇ ಮುಖ್ಯವೆನಿಸುತ್ತದೆ. ಓದು ಮುಖ್ಯ, ಗುರಿ ಸಾಧನೆ ಮುಖ್ಯ, ಭವಿಷ್ಯ ಮುಖ್ಯ ಎಂದು ಅರ್ಥಮಾಡಿಕೊಳ್ಳದವರಿಗೆ ವ್ಯವಸ್ಥಿತ ರೀತಿ-ನೀತಿಗಳ ಮಹತ್ವವೇ ತಿಳಿಯುವುದಿಲ್ಲ.

ವಿದ್ಯಾರ್ಥಿ ಓದಬೇಕು, ಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕು, ಒಳ್ಳೆಯ ಗೆಳೆಯರೊಂದಿಗೆ ಬೆರೆಯಬೇಕು, ಶಾಂತನಾಗಿರಬೇಕು– ಇವೆಲ್ಲ ಯಾವ ಹೆಚ್ಚಿನ ಕಷ್ಟವೂ ಇಲ್ಲದೆ ಮಾಡಬಹುದಾದಂಥ ಕೆಲಸಗಳು.

'ನಾನು ಓದುತ್ತೇನೆ, ಖಂಡಿತ ನನ್ನ ಮನಸ್ಸು ನನ್ನ ಹತೋಟಿಯಲ್ಲಿದೆ, ನಾನು ಹೀಗೇ ಮಾಡುತ್ತೇನೆ, ಸಾಧಿಸುತ್ತೇನೆ' – ಎಂದು ನಿರ್ಧರಿಸಿ ಮುಂದುವರಿಯಿರಿ. ನಿಮಗೆ ಅನುಕೂಲ ಖಂಡಿತ ಆಗುತ್ತದೆ.

* * *

ದೇಹಾರೋಗ್ಯ, ಶಾರೀರಿಕ ತೊಂದರೆಗಳು ಇವನ್ನೆಲ್ಲ ಕುರಿತು ಅನೇಕರು ಪತ್ರ ಬರೆದಿದ್ದಾರೆ. ಇವಕ್ಕೆಲ್ಲ ದಯವಿಟ್ಟು ಸಮರ್ಥ ವೈದ್ಯರನ್ನು ನೋಡಿ. ಅವರೊಂದಿಗೆ ಮುಕ್ತವಾಗಿ ಚರ್ಚಿಸಿ. ನಿಮಗೆ ಉಪಯೋಗವಾಗುತ್ತದೆ.

ಯೋಗಾದ ಬಗ್ಗೆ ಹೆಚ್ಚು ತಿಳಿಸಿರಿ ಎಂದು ಕೆಲವರು ಬರೆದಿದ್ದಾರೆ. ಖಂಡಿತ ತಿಳಿಸುತ್ತೇನೆ. ಈ ಲೇಖನಮಾಲೆಯಲ್ಲೆ, ಬೆಂಗಳೂರಿನ ಪರಿಣತ ವೈದ್ಯರೂ ಯೋಗಾಚಿಕಿತ್ಸಕರೂ ಆದ ಡಾ। ನಾಗರತ್ನ ಅವರ ಪರಿಚಯ ಮಾಡಿಕೊಡುತ್ತೇನೆ. ಯೋಗಾದ ಬಗ್ಗೆ ನಿಮಗೇನಾದರೂ ತಿಳಿದುಕೊಳ್ಳಬೇಕಾಗಿದ್ದರೆ ನನಗೆ ಬರೆಯಿರಿ. ಡಾ। ನಾಗರತ್ನ ಅವರೊಂದಿಗೆ ಚರ್ಚಿಸಿ ಮುಂದಿನ ಲೇಖನದಲ್ಲಿ ತಿಳಿಸುತ್ತೇನೆ.

'ಸಾಧ್ಯವಾದಷ್ಟು ಕಾಲ ಈ ಲೇಖನಮಾಲೆ ಮುಂದುವರಿಯಲಿ. ಅನೇಕರು ಹೀಗೆ ಕೋರಿ ಬರೆದಿದ್ದಾರೆ' – ಎಂದು ಸಂಪಾದಕರು ಆಜ್ಞೆ ಮಾಡಿದ್ದಾರೆ. ಹೀಗಾಗಿ ನಿಮ್ಮೊಂದಿಗೆ ಇನ್ನೂ ಕೆಲ ತಿಂಗಳು ಇರುತ್ತೇನೆ.

● (ಇನ್ನೂ ಇದೆ)

# ಬಾಲಪ್ರಪಂಚ



## ಮಿತ್ರಭೇದದ ಕಥೆಗಳು

● ಪ್ರೊ । ಜಿ. ವೆಂಕಟಸುಬ್ಬಯ್ಯ

# ಸೊಸೆಯ ಮಾತನ್ನು ಕೇಳದ ಅತ್ತೆಯ ಕಥೆ

ಸಾಲಗ್ರಾಮವೆಂಬ ಊರಿನಲ್ಲಿ ಒಬ್ಬ ಊರಿನ ಯಜಮಾನನಿದ್ದನು. ಅವನ ಹೆಂಡತಿ ಕ್ರೂರಳಾದವಳು. ತನ್ನ ಸೊಸೆಗೆ ಸದಾ ಕಿರುಕುಳವನ್ನು ಉಂಟುಮಾಡುತ್ತಿದ್ದಳು. ಒಂದು ಸಲ ಅತ್ತೆ ಬೇರೆ ಊರಿಗೆ ಹೋಗಲೇ ಬೇಕಾಯಿತು. ಆಗ ಅವಳು ತನ್ನ ಸೊಸೆಯನ್ನು ಕರೆದು ಹೀಗೆ ಹೇಳಿದಳು: ''ನಾನು ಬೇರೆಯೂರಿಗೆ ಹೋಗಬೇಕಾಗಿದೆ. ನೀನು ಜಾಣೆಯಾಗಿ ಮನೆ ನೋಡಿಕೋ. ದುಂದುವೆಚ್ಚ ಮಾಡಬೇಡ; ಸ್ವಲ್ಪದರಲ್ಲಿ ಸರಿದೂಗಿಸು.'' ಸೊಸೆ ಅತ್ತೆಯ ಮಾತನ್ನು ಒಪ್ಪಿ ಹಾಗೆಯೇ ಮಾಡುವುದಾಗಿ ತಿಳಿಸಿದಳು.

ಅತ್ತೆ ಊರನ್ನು ಬಿಟ್ಟ ಮೇಲೆ ಒಬ್ಬ ವೃದ್ಧ ಬ್ರಾಹ್ಮಣ ಇವರ ಮನೆಗೆ ಬಂದು ಸೊಸೆಗೆ ಹೀಗೆ ಹೇಳಿದನು: ''ಗೃಹಿಣಿಯೇ, ನೀನು ಸದ್ಗುಣವುಳ್ಳವಳು. ಈ ದಿನ ತುಂಬ ಶುಭವಾದ ದಿನ. ಹನ್ನೆರಡು ಜನ ಒಳ್ಳೆಯ ಬ್ರಾಹ್ಮಣರಿಗೆ ರುಚಿಕರವಾದ ಭೋಜನವನ್ನು ಹಾಕಿಸಿದರೆ ನಿನಗೆ ಒಳ್ಳೆಯದಾಗುತ್ತದೆ. ಚಿನ್ನದ ಲಾಭವಾಗು



ತ್ತದೆ. ಪುತ್ರ ಜನನವಾಗುತ್ತದೆ. ನಿನಗೆ ಬೇಕಾದುದೆಲ್ಲ ಒದಗಿ ನಿನ್ನ ಕಷ್ಟ ನಿವಾರಣೆ ಯಾಗುತ್ತದೆ.'' ಈ ಮಾತನ್ನು ಕೇಳಿ ಸೊಸೆಗೆ ಆ ಮುದಿ ಬ್ರಾಹ್ಮಣನ ಮಾತಿನಲ್ಲಿ ನಂಬಿಕೆ ಉಂಟಾಯಿತು. ಅವಳು ಹನ್ನೆರಡು ಜನ ಬ್ರಾಹ್ಮಣರನ್ನು ಕರೆದು ಒಳ್ಳೆಯ ಊಟವನ್ನು ಬಡಿಸಿ ಅವರಿಗೆ ಸಂತೋಷವನ್ನುಂಟು ಮಾಡಿದಳು. ಅವರೆಲ್ಲ ಸೊಸೆಯನ್ನು ಹರಸಿದರು.

ಸಂತೋಷಗೊಂಡು ಬ್ರಾಹ್ಮಣರೆಲ್ಲ ಹೊರಟು ಹೋದ ಸ್ವಲ್ಪ ಹೊತ್ತಿಗೆ ಅತ್ತೆ ಊರಿಗೆ ಬಂದು ಮನೆಯನ್ನು ಸೇರಿದಳು. ಮನೆಯಲ್ಲಿ ನಡೆದಿದ್ದ ಸಂತರ್ಪಣೆ ಅವಳಿಗೆ ತಿಳಿಯಿತು. ಅವಳು ಕೋಪಗೊಂಡು ಸೊಸೆಯನ್ನು ಬೈದು ''ಹೀಗೆ ದುಂದುವೆಚ್ಚ ಮಾಡುವವಳು ನನ್ನ ಮನೆಯಲ್ಲಿ ಇರಕೂಡದು, ಹೊರಗೆ ನಡೆ'' ಎಂದು ಮನೆಯಿಂದ ಹೊರಕ್ಕೆ ನೂಕಿಬಿಟ್ಟಳು.

ಸೊಸೆ ಆ ಕತ್ತಲೆಯ ರಾತ್ರಿಯಲ್ಲಿ ಎಲ್ಲಿಯೂ ಹೋಗಲಾಗದೆ ಮನೆಯ ಹತ್ತಿರದಲ್ಲಿದ್ದ ಹುಣಿಸೆಯಮರದ ಪೊಟರೆಯಲ್ಲಿ ಅಡಗಿ ಕುಳಿತಳು. ಮಧ್ಯರಾತ್ರಿಯಾದಾಗ ಕೆಲವರು ಶಾಕಿನಿಯರು ಬಂದು ಮರದ ಮೇಲೆ ಹತ್ತಿ ಕುಳಿತರು. ಸ್ವಲ್ಪ ಹೊತ್ತಿನಲ್ಲಿಯೇ ಅವರು ಹುಣಿಸೆಯ ಮರಕ್ಕೆ ''ಸುವರ್ಣದ್ವೀಪಕ್ಕೆ ಹೋಗು'' ಎಂದು ಅಪ್ಪಣೆ ಮಾಡಿದರು. ಮರವು ಕೂಡಲೇ ಆಕಾಶಕ್ಕೆ ಹಾರಿ ಸುವರ್ಣ ದ್ವೀಪಕ್ಕೆ ಹೋಗಿ ನೆಲೆಸಿತು. ಶಾಕಿನಿಯರು ಮರದಿಂದ ಇಳಿದು ಸುವರ್ಣದ್ವೀಪದ ಮಾನವ ರನ್ನು ತಿನ್ನಲು ಹೊರಟುಹೋದರು. ಸೊಸೆಯು ಮರದ ಪೊಟರೆಯಿಂದ ಈಚೆ ಬಂದು ನೋಡಿ ದರೆ ಸುತ್ತಲೂ ಚಿನ್ನದ ಹುಡಿ ರಾಶಿ ರಾಶಿಯಾಗಿ ಬಿದ್ದಿತ್ತು. ತನಗೆ ಕೈಲಾದಷ್ಟು ಚಿನ್ನದ ಹುಡಿಯನ್ನು ಕಟ್ಟಿಕೊಂಡು ಅವಳು ಮತ್ತೆ ಹುಣಿಸೆಯ ಮರದ ಪೊಟರೆಯೊಳಕ್ಕೆ ಸೇರಿ ಕೊಂಡಳು. ಶಾಕಿನಿಯರು ಆ ದ್ವೀಪದ ಮಾನವರ ಮಾಂಸವನ್ನು ತಿಂದು ತೃಪ್ತರಾಗಿ ಬಂದು ಮರದ ಮೇಲೆ ಕುಳಿತರು. ಮರಕ್ಕೆ ಹಿಂದಿನ ಜಾಗಕ್ಕೆ ಹೋಗುವಂತೆ ಅಪ್ಪಣೆ ಮಾಡಿದರು. ಮರವು ಕೂಡಲೇ ಹಿಂದಿನ ನೆಲೆಯಲ್ಲಿ ಬಂದು ನಿಂತಿತು. ಸೊಸೆಗೆ ಆಶ್ಚರ್ಯವಾಯಿತು. ಅಷ್ಟರಲ್ಲೇ ಬೆಳಗಾಯಿತು.

ಆಗ ಆ ಸೊಸೆ ತಾನು ತಂದಿದ್ದ ಚಿನ್ನದ ಹುಡಿಯ ಗಂಟಿನೊಡನೆ ಮನೆಗೆ ಬಂದು ಅತ್ತೆಗೆ ಅಷ್ಟನ್ನೂ ಕೊಟ್ಟು ರಾತ್ರೆ ನಡೆದ ಕತೆಯನ್ನೆಲ್ಲ ಹೇಳಿದಳು.

ಅತ್ತೆಗೆ ದುರಾಸೆ ಹೆಚ್ಚಾಯಿತು. ಅವಳು ತನ್ನ ಸೊಸೆಗೆ ಹೀಗೆ ಹೇಳಿದಳು: ''ನೀನು ಸ್ವಲ್ಪ ಚಿನ್ನದ ಹುಡಿಯನ್ನು ತಂದಿದ್ದೀಯೆ. ನಾನು ಈ ದಿನ ಹೋಗಿ ತುಂಬ ಚಿನ್ನದ ಹುಡಿಯನ್ನು ತರುತ್ತೇನೆ. ನೋಡುತ್ತಿರು. ಆಗ ಸೊಸೆ ಹೇಳಿದಳು ''ಅತ್ತೆಯವರೇ, ಆ ಶಾಕಿನಿಯರು ಸಾಮಾನ್ಯರಲ್ಲ. ನೀವು ಏನೇ ಆದರೂ ಮೌನವಾಗಿರುವುದಾದರೆ ಹೋಗಿ. ಇಲ್ಲದಿದ್ದರೆ ಅಪಾಯ. ಹೋಗಬೇಡಿ.'' ಈ ಮಾತನ್ನು ಕೇಳಿ ಅತ್ತೆಗೆ ಕೋಪ ಬಂತು. ಅವಳು ಹೇಳಿದಳು ''ನನಗೆ ನೀನು ಬುದ್ಧಿ ಹೇಳಬೇಕೇ! ನಡಿ, ನಡಿ. ನನಗೆಲ್ಲ ಗೊತ್ತು.''

ಅಂತೂ ಅತ್ತೆ ಹುಣಿಸೆಯ ಮರದ ಪೊಟರೆ ಯೊಳಗೆ ಕುಳಿತಳು. ಅರ್ಧರಾತ್ರೆಯ ಸಮಯಕ್ಕೆ ಶಾಕಿನಿಯರು ಬಂದು ಮರವನ್ನೇರಿದರು. ಆ ದಿನ ಅವರು ಆ ಮರವನ್ನು ಕಡಾರದ ದ್ವೀಪಕ್ಕೆ ಹೋಗುವಂತೆ ಅಪ್ಪಣೆ ಮಾಡಿದರು. ಕಡಾರ ಎಂದರೆ ಭೂಮಿಯಲ್ಲಿ ಹೂತಿಟ್ಟ ನಿಧಿ. ಆಗ ಅತ್ತೆಗೆ ಕಷ್ಟವುಂಟಾಯಿತು. ಅವಳು ಧೈರ್ಯ ಮಾಡಿ ಹೀಗೆ ಗಟ್ಟಿಯಾಗಿ ಹೇಳಿದಳು: ''ಕಡಾರದ ದ್ವೀಪ ಬೇಡ. ಅಲ್ಲಿಯ ಜನರ ಮಾಂಸ ಉಪ್ಪುಪ್ಪು. ಅಲ್ಲದೆ ರುಚಿಯಿಲ್ಲ. ಸುವರ್ಣದ್ವೀಪಕ್ಕೇ ಹೋಗಿ.'' ಶಾಕಿನಿಯರಿಗೆ ಈ ಮಾತು ಕೇಳಿ ಪೊಟರೆಯಲ್ಲಿ ಒಬ್ಬ ಮಾನವಳು ಇರುವುದು ಗೊತ್ತಾಯಿತು. ಅವರು ಬೇರೆ ಯಾವ ದ್ವೀಪವೂ ಬೇಡವೆಂದು ಕೆಳಗಿಳಿದು ಅತ್ತೆಯನ್ನು ಹೊರಗೆಳೆದು ಸೀಳಿ ತಿಂದು ತೇಗಿದರು. ಅತ್ತೆಯ ಕತೆ ಮುಗಿದುಹೋಯಿತು.

ಮಕ್ಕಳೇ, ಇದರಿಂದ ಏನು ತಿಳಿಯುತ್ತದೆ? ಅತಿ ಆಸೆ ಇರಬಾರದು, ಅನುಭವಸ್ಥರು ಹೇಳುವುದನ್ನು ಕೇಳಬೇಕು, ಮಾತನ್ನು ಎಲ್ಲಿ ಆಡಬಾರದೊ ಅಲ್ಲಿ ಆಡಬಾರದು. ●

# ಒಗ್ಗಟ್ಟಿನ ಕೆಲಸ

ಹೋದ ತಿಂಗಳು ಒಂದು ದಿನ-ಶನಿವಾರ. ನಮ್ಮ ಬೀದಿಯ ಮಕ್ಕಳು ಒಂದೇ ಸಮನೆ ಕೂಗಾಡುವುದು, ಓಡಾಡುವುದು ಮಾಡುತ್ತಿದ್ದಂತೆ ಕೇಳಿಸಿತು. ಸ್ವಲ್ಪ ಹೊತ್ತಿನ ಮೇಲೆ ನಮ್ಮ ಮನೆಯ ಪಕ್ಕದಲ್ಲೆ ಗದ್ದಲ ಕೇಳಿಸಿತು, ನೆಲ ಕೆತ್ತುತ್ತಿರುವ ಸದ್ದು ಬೇರೆ, ಬಗ್ಗಿ ನೋಡಿದೆ.

ಖಾಲಿ ಸೈಟಿನಲ್ಲಿ ಪೊದೆಯ ಹಾಗೆ ಬೆಳೆದಿರುವ ಗಿಡಗಳನ್ನು, ಮುಳ್ಳುಗಳನ್ನು ಚಿಕ್ಕ ಚಿಕ್ಕ ಮಕ್ಕಳು ಸಾವಕಾಶವಾಗಿ ಕತ್ತರಿಸಿ, ಕಿತ್ತಿ ತೆಗೆಯುತ್ತಿದ್ದಾರೆ. ಪುಟ್ಟ ಕೈಗಳು ಮಾಡುತ್ತಿರುವ ಕೆಲಸಗಳನ್ನು ನೋಡಿ ನಗುಬಂತು. ಈ ಪೊದೆರಾಶಿಯನ್ನು ಕಿತ್ತಿ ತೆಗೆಯಲು ಈ ಕಿರಿಯರಿಂದ ಹೇಗಾಗುತ್ತದೆ, ಸುಮ್ಮನೆ ಕಷ್ಟ ಪಡುತ್ತಿದ್ದಾರೆ ಅನ್ನಿಸಿತು. ಖಾಲಿ ಸೈಟಿನಲ್ಲಿ ಗಿಡಗಂಟೆ ತೆಗೆದು ಆಟ ಆಡಲು ಜಾಗ ಮಾಡಿಕೊಳ್ಳುತ್ತಿರಬೇಕು ಅಂದುಕೊಂಡೆ.

ಇನ್ನೆರಡು ದಿನ ಬಿಟ್ಟು ನೋಡಿದಾಗ-ಪರವಾಗಿಲ್ಲ ಎನ್ನಿಸಿತು. ಸೈಟಿನ ಮುಂಭಾಗವನ್ನೆಲ್ಲ ಶುಚಿಗೊಳಿಸಿಬಿಟ್ಟಿದ್ದಾರೆ. ಪುಟ್ಟ ಪುಟ್ಟ ಹೆಣ್ಣುಮಕ್ಕಳು ಬಾಂಡಲೆ ಹಿಡಿದು ಮಣ್ಣು ಹೊತ್ತು ಹಾಕುತ್ತಿದ್ದಾರೆ. ಗಂಡು ಹುಡುಗರು ಮೈಮೇಲೆ ಬಂದವರ ಹಾಗೆ ನೆಲ ಕೆತ್ತುತ್ತಿದ್ದಾರೆ. ಮರುದಿನ ಸೈಟ್‌ನ ಅರ್ಧ ಭಾಗ 'ಸಾಫ್' ಆಗಿತ್ತು. ಯಾವ ಆಟ ಆಡುತ್ತಾರೊ ಎಂದು ನಾನೂ ಕುತೂಹಲದಿಂದ ನೋಡುತ್ತಿದ್ದೆ.

ಇನ್ನೊಂದು ಸಾಯಂಕಾಲ ವಾಪಸ್ಸು ಬರುತ್ತಿದ್ದಾಗ, ಬೀದಿಯುದ್ದಕ್ಕೂ ದಾರಕಟ್ಟಿ ಬಣ್ಣದ ಕಾಗದಗಳ ಬಾವುಟ ಕಟ್ಟುತ್ತಿದ್ದರು. ಗಿಜಿಗಿಜಿ ಮಾತನಾಡುತ್ತ, ಓಡಾಡುತ್ತ ಎಲ್ಲರೂ ಕೆಲಸ ಮಾಡುತ್ತಿದ್ದರು. ಆ ಸಂಜೆಯೆ ಸೈಟ್‌ನ ಮುಂದೆ ಒಂದು ವ್ಯಾನ್ ಬಂದು ನಿಂತಿತು. ಆಳೊಬ್ಬ ಕೆಳಗಿಳಿದು ಪುಟ್ಟ ಟೆಂಟ್ ಒಂದನ್ನು ಶುಚಿಮಾಡಿದ ಸೈಟ್ ಮುಂಭಾಗದಲ್ಲಿ ಹಾಕಿದ. ಆಗಲೇ ನನಗೆ ಗೊತ್ತಾಗಿದ್ದು; ಬೀದಿ ಮಕ್ಕಳೆಲ್ಲ ಸೇರಿ ಗಣೇಶೋತ್ಸವ ಆಚರಿಸುತ್ತಾರೆ ಎನ್ನುವುದು.

ಬೀದಿಯೆಲ್ಲ ಸಂಭ್ರಮ ಪ್ರಾರಂಭವಾಯಿತು. ಮಕ್ಕಳು ಟೆಂಟ್‌ಗೆ ತೋರಣ ಕಟ್ಟಿದರು. ಮಾವಿನೆಲೆ-ಬಾಳೆಕಂಭ ಕಟ್ಟಿದರು. 'ಸಿದ್ಧಿ ವಿನಾಯಕನಿಗೆ ಜಯವಾಗಲಿ' ಎಂದು ಕೂಗುತ್ತ ಗಣೇಶ ವಿಗ್ರಹವನ್ನು ತಂದು ಮಂಟಪದಲ್ಲಿ ಇರಿಸಿದರು. ಬೀದಿಯ ದೊಡ್ಡವರು ಒಬ್ಬೊಬ್ಬರಾಗಿ ಬಂದು ಮಕ್ಕಳೊಂದಿಗೆ ಸೇರಿಕೊಂಡರು.

ಗಣೇಶೋತ್ಸವ ತುಂಬಾ ಸಂಭ್ರಮವಾಗಿ ನಡೆಯಿತು. ಪುಟ್ಟ ಮಕ್ಕಳು ಒಗ್ಗಟ್ಟಾಗಿ ಕೆಲಸಮಾಡಿ ಇದನ್ನು ಸಾಧಿಸಿದರು. ಜೊತೆಗೆ ಬೀದಿಯ ದೊಡ್ಡವರು ಒಬ್ಬರನ್ನೊಬ್ಬರು ನೋಡಿ ಮಾತನಾಡಿಸಿದರು. ಮಕ್ಕಳಿಗೆ ಒಟ್ಟಾಗಿ ಸೇರಿ ಕೆಲಸ ಮಾಡಬಹುದು ಎನ್ನುವುದು ತಿಳಿಯಿತು. ದೊಡ್ಡವರಿಗೆ ಪರಸ್ಪರ ಮನಬಿಚ್ಚಿ ಮಾತನಾಡುವುದು ಸಾಧ್ಯವಾಯಿತು.

● ಸಂಧ್ಯಾ, ಬೆಂಗಳೂರು



# ಮಕ್ಕಳ ಆಯ್ದ ಬರಹಗಳು

## ರಾಮನ ಪ್ರಾಮಾಣಿಕತೆ

ಒಂದು ಊರಿನಲ್ಲಿ ಒಬ್ಬಳು ಅಜ್ಜಿಯಿದ್ದಳು. ಆ ಅಜ್ಜಿಗೆ ಒಬ್ಬ ಮಗನಿದ್ದನು. ಅವನ ಹೆಸರು ರಾಮ ಅಂತ. ಆ ಅಜ್ಜಿ ಬಹಳ ಬಡವಳು ಆಗಿದ್ದಳು. ಆ ಅಜ್ಜಿಗೆ ರಾಮನನ್ನು ಶಾಲೆಗೆ ಕಳುಹಿಸಬೇಕು ಅಂತ ಇತ್ತು. ಅವನು ಮುಂದೆ ತನ್ನನ್ನು ಚೆನ್ನಾಗಿ ನೋಡಿಕೊಂಡು ಇರಬಹುದೆಂದು



ಆಲೋಚಿಸಿ, ತಾನು ಕಷ್ಟಪಟ್ಟು ದುಡಿದು ಅವನನ್ನು ಶಾಲೆಗೆ ಕಳುಹಿಸಿದಳು. ರಾಮನು ಸತ್ಯವಂತ ಅಷ್ಟೆ ಅಲ್ಲ ಪ್ರಾಮಾಣಿಕನೂ ಆಗಿದ್ದನು. ಕಷ್ಟದಲ್ಲಿದ್ದ ಜನರಿಗೆ ಸಹಾಯ ಮಾಡುತ್ತಿದ್ದನು.

ಒಂದು ದಿನ ಶಾಲೆಗೆ ಹೋಗುವಾಗ ದಾರಿಯಲ್ಲಿ ವಜ್ರದ ಉಂಗುರ ಸಿಕ್ಕಿತು. ಬೇರೆ ಯಾರಾದರೂ ಆಗಿದ್ದರೆ ಅದನ್ನು ತಾವೇ ಇಟ್ಟುಕೊಳ್ಳುತ್ತಿದ್ದರು. ಆದರೆ ರಾಮನು ಹಾಗೆ ಮಾಡಲಿಲ್ಲ. ಅದನ್ನು ತನ್ನ ಶಾಲೆಯ ಮುಖ್ಯೋಪಾಧ್ಯಾಯರಲ್ಲಿ ಕೊಟ್ಟನು. ಆ ಉಂಗುರ ಮುಖ್ಯೋಪಾಧ್ಯಾಯರದ್ದೆ ಆಗಿದ್ದಿತು. ಅವರು ರಾಮನ ಪ್ರಾಮಾಣಿಕತೆಯನ್ನು ನೋಡಿ ಹೊಗಳಿದರು. ಆ ರಾಮನನ್ನು ಮುಂದೆ ತಾನೇ ವಿದ್ಯಾಭ್ಯಾಸವನ್ನು ಮಾಡಿಸುವೆನೆಂದು ಹೇಳಿದರು. ಅವನ ತಾಯಿಗೆ ಇದನ್ನು ಕೇಳಿ ಸಂತೋಷವಾಯಿತು. ಈ ಕತೆಯ ನೀತಿ – ಪ್ರಾಮಾಣಿಕತೆಗೆ ತಕ್ಕ ಪ್ರತಿಫಲ ಇದೆ.

● ಸುಧಾವಾಣಿ ಬಿ., ಪೈವಳಿಕೆ

## ಅರಳುವ ಹೂವು

ನಮ್ಮ ಮನೆ ಅಂಗಳದಿ ಇರುವುದೊಂದು ಹೂವು
ನೋಡುವೆ ನಾ ಅದನು ಅರಳುವುದೇ ಎಂದು.
ಅದಕೆ ಬೇಕು ಬಹಳ ಹೊತ್ತು
ಅದರಳುವುದು ರಾತ್ರಿ ಹೊತ್ತು
ಅದು ನನಗೆ ಖಂಡಿತ ಗೊತ್ತು
ನನ್ನ ದೃಷ್ಟಿ ಅದರ ಮೇಲೆ ಇತ್ತು
ನನಗೆ ಬೇಕೇ ಬೇಕು ಒಂದು ಹೂವು
ಕಾಲಕಳೆಯಲು ಇವೊತ್ತು.

● ನಾಗಶ್ರೀ ಎಚ್. ವಿ., ಭದ್ರಾವತಿ

## ನಮ್ಮ ನಾಯಿ

ಗುಬ್ಬಿಯೊಂದು ಹಾರಿ ಬಂದು,
ಮನೆಯ ಮುಂದೆ ಕುಳಿತಿತು.

ಅದನು ಕಂಡು ನಮ್ಮ ನಾಯಿ,
ಹಿಡಿಯಲೆಂದು ಓಡಿತು.

ಗುಬ್ಬಿಯೆದ್ದು ಹಾರಿಹೋಗಿ,
ಮರದ ಮೇಲೆ ಕುಳಿತಿತು.

ನಮ್ಮ ನಾಯಿ ಬೇಸರದಿ,
ತಿರುಗಿ ಮನೆಗೆ ಬಂದಿತು.

● ಐ. ಬಾಲಸುಬ್ರಹ್ಮಣ್ಯ, ಪೆರುವಾಯಿ

## ಆಸೆ

ಆಸೆ ಆಸೆ ನನ್ನ ಆಸೆ
ಬಾನಿನಲ್ಲಿ ಹಾರುವ ಆಸೆ
ನೀರಿನಲ್ಲಿ ಈಜುವ ಆಸೆ
ಸೈಕಲಿನಲ್ಲಿ ಹೋಗುವ ಆಸೆ
ಚೆಂಡಿನಲ್ಲಿ ಆಡುವ ಆಸೆ
ಸ್ಪರ್ಧೆಯಲ್ಲಿ ಓಡುವ ಆಸೆ
ರೈಲಿನಲ್ಲಿ ಕೂರುವ ಆಸೆ
ವಿಮಾನದಲ್ಲಿ ಏರುವ ಆಸೆ

● ಶೋಭ ಪೂಜಾರ್ತಿ, ಮೂಡುಪೆರಂಪಳ್ಳಿ

## ಹಾಡು

ಅಲ್ಲಿ ನೋಡು ಸುಂದರಕಾಡು
ನವಿಲಿನ ಬೀಡು ಜಿಂಕೆಯ ಓಡು
ಅದು ನಿಸರ್ಗದ ಪಾಡು
ಇದು ಕವಿತೆಯೊಂದರ ಹಾಡು.

● ಕೆ. ಎ. ಅಶ್ವಿನಿ, ಕುಣಿಗಲ್

## ವಾಸ್ತವ

ಹಾಡುತ್ತಿದ್ದಳು ಹುಡುಗಿಯು
ಒಬ್ಬಳು –
''ಕುಣಿಯುವ ನವಿಲಿಗೆ
ಹಾಡುವ ಹಕ್ಕಿಗೆ ಎಷ್ಟು ಸುಖ''
ಕೇಳಿದ ಹಕ್ಕಿಯು
ಮನದಲಿ ನಕ್ಕಿತು –
''ಹುಡುಗಿಗೆ ಸುತ್ತಣ ಅರಿವಿಲ್ಲ''
ನೀರು ಇಲ್ಲ
ನೆರಳೂ ಇಲ್ಲ
ಹೇಗೆ ಬದುಕುವುದು
ಎಷ್ಟುತ್ತ.

● ಅಪರ್ಣಾ ಹುಲಿತಾಳ, ಮಡಿಕೇರಿ



## ಮಂಗಣ್ಣ

ಮಂಗಣ್ಣ, ಮಂಗಣ್ಣ
ಮರದಲ್ಯಾಕೆ ಹನುಮಣ್ಣ
ಮರದಾ ಕೊಂಬೆಗೆ ಬಾಲಾ ಸುತ್ಕೊಂಡ್
ಉಯ್ಯಾಲೆ ಆಡೋದ್ ಏಕಣ್ಣ ?
ಬಾಲಾ ಹರದು ಕೆಳಗೆ ಬಿದ್ರೆ
ಮನಸ್ಸ್ಯಾ ಆಗ್ತೀ ಏನಣ್ಣಾ ?

● ಪಯಸ್ವಿನಿ ಎಂ. ಎಸ್., ಜಮಖಂಡಿ

## ಒಳ್ಳೆಯತನ

ಒಂದು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದ ಇಬ್ಬರು ಹುಡುಗಿಯರಲ್ಲಿ ಒಬ್ಬಳ ಹೆಸರು ವಿನಯ. ಇನ್ನೊಬ್ಬಳ ಹೆಸರು ಉಮಾ. ವಿನಯ ಬಡಮನೆತನದ ಹುಡುಗಿಯಾಗಿದ್ದರೂ ಬುದ್ಧಿವಂತೆ, ವಿನಯವಂತೆಯಾಗಿದ್ದಳು. ಉಮಾ ಅಷ್ಟೇನೂ ಬುದ್ಧಿವಂತೆಯಾಗಿರಲಿಲ್ಲ.

ಒಂದು ಬಾರಿ ಪ್ರಬಂಧದ ತರಗತಿಗೆ ಮುಖ್ಯೋಪಾಧ್ಯಾಯರು ಬಂದು ಪರಿಸರ ಸಂರಕ್ಷಣೆಯ ಬಗೆಗೆ ಪ್ರಬಂಧ ಬರೆದುಕೊಂಡು ಬರಲು ಹೇಳಿ 'ಯಾರೂ ಕಾಪಿ ಮಾಡಬಾರದು' ಎಂದೂ ಹೇಳಿದ್ದರು. ವಿನಯ ಚೆನ್ನಾಗಿ ಬರೆದು ಕೊಂಡು ಬಂದಿದ್ದಳು. ಆದರೆ ಉಮಾ ಒಂದಕ್ಷರವೂ ಬರೆದಿರಲಿಲ್ಲ. ಉಮಾ ಸ್ನೇಹ ವನ್ನು ನಟಿಸುತ್ತಾ ಒಳ್ಳೆಯ ಮಾತಿನಲ್ಲಿ 'ವಿನಯಾ, ನೀನೇನು ಬರೆದಿದ್ದೀಯ ? ನೋಡಿಕೊಡುತ್ತೇನೆ' ಎಂದು ಹೇಳಿ ನೋಟ್ಸ್ ಇಸಿದುಕೊಂಡು ಕಾಪಿ ಮಾಡಿಕೊಟ್ಟಳು.



ಮುಖ್ಯೋಪಾಧ್ಯಾಯರು ಇವರಿಬ್ಬರ ಪ್ರಬಂಧಗಳೂ ಒಂದೇ ಆಗಿರುವುದನ್ನು ಗಮನಿಸಿ 'ಯಾರು ಮೊದಲು ಬರೆದದ್ದು? ಯಾರು ಕಾಪಿ ಮಾಡಿದಿರಿ? ಹೇಳಿ' ಎಂದಾಗ ಉಮಾ ಧೈರ್ಯವಾಗಿ 'ನಾನೇ ಬರೆದದ್ದನ್ನು ವಿನಯಾ ಕಾಪಿ ಮಾಡಿಕೊಂಡಳು ಸರ್' ಎಂದಳು. ವಿನಯಳನ್ನು ಕೇಳಿದಾಗ ಅವಳು ಸುಮ್ಮನೆ ನಿಂತಳು. ವಿನಯಳಿಗೆ ಏಟುಬಿದ್ದಾಗ ಉಮಾಳಿಗೆ ಪಶ್ಚಾತ್ತಾಪವಾಗಿ ಅಳಲಾರಂಭಿಸಿದಳು. ಮುಖ್ಯೋಪಾಧ್ಯಾಯರು ಅವಳ ಅಳುವಿಗೆ ಕಾರಣ ಕೇಳಿದರು. ಉಮಾ 'ಸರ್, ನಾನೇ ವಿನಯಾಳ ಪ್ರಬಂಧವನ್ನು ಕಾಪಿ ಮಾಡಿದೆ. ನನ್ನ ತಪ್ಪನ್ನು ಕ್ಷಮಿಸಿಬಿಡಿ' ಎಂದಾಗ ಮುಖ್ಯೋಪಾಧ್ಯಾಯರು 'ನೀನು ಮಾಡಿದ ತಪ್ಪಿಗೆ ವಿನಯಳ ಕ್ಷಮೆ ಕೇಳು' ಎಂದರು. 'ಗೆಳತಿಯ ತಪ್ಪನ್ನು ಹೊತ್ತುಕೊಂಡು ಶಿಕ್ಷೆ ಅನುಭವಿಸಿದ ವಿನಯ ಒಳ್ಳೆಯ ಹುಡುಗಿ. ತಪ್ಪನ್ನು ಒಪ್ಪಿಕೊಂಡು ಪಶ್ಚಾತ್ತಾಪಪಡುವುದೂ ಒಳ್ಳೆಯ ಗುಣ. ಆದ್ದರಿಂದ ಉಮಾ ಕೂಡ ಒಳ್ಳೆಯ ಹುಡುಗಿ' ಮುಖ್ಯೋಪಾಧ್ಯಾಯರು ಹೇಳಿದರು. ಎಲ್ಲಾ ಮಕ್ಕಳೂ ಚಪ್ಪಾಳೆ ತಟ್ಟಿದರು.

● **ಟಿ. ಜೆ. ಶ್ರೀನಿಧಿ, ಶ್ರೀಮಂಗಳ (ಕೊಡಗು)**

## ತುಷಾರಣ್ಣನ ಪತ್ರ

ಪ್ರಿಯ ಪುಟಾಣಿಗಳೇ, ಈ ಸಲ ನೀವು ಕಳುಹಿಸಿದ ಕಥೆ–ಕವನಗಳು ನನಗೇಕೊ ಸಮಾಧಾನವಾಗಲಿಲ್ಲ. ಆದರೂ ಕೆಲವನ್ನು ಆರಿಸಿ ಪ್ರಕಟಿಸಿದ್ದೇನೆ. ದೆವ್ವ–ಭೂತ, ದೇವರು, ಪುರಾಣದ ಕೇಳಿದ್ದೇ ಕಥೆಗಳನ್ನು ಮತ್ತೆ ಮತ್ತೆ ಬರೆಯಬೇಡಿ. ನಿಮ್ಮಂಥ ಪುಟಾಣಿಗಳಿಗೆ ಹೊಸದು ಎನ್ನಿಸುವ ಏನಾದರೂ ಕಥೆ ಬರೆಯಿರಿ. ಈಗಿನ ಕಾಲಕ್ಕೆ ತಕ್ಕಂತೆ, ನಿಮ್ಮ ಸುತ್ತಮುತ್ತಲೂ ನಡೆಯುತ್ತಿರುವುದನ್ನು ನೋಡಿ ಬರೆಯಿರಿ.

ಸೆಪ್ಟೆಂಬರ್ ತಿಂಗಳ ಕೊನೆಯೊಳಗೆ ಕಥೆ–ಲೇಖನ–ಚಿತ್ರಗಳನ್ನು ಬರೆದವರೆಲ್ಲರಿಗೂ ಬೊಂಬೆ ಪುಸ್ತಕ ಖಂಡಿತ ಬರುತ್ತದೆ. ತುಷಾರಣ್ಣ ಒಂದಿಷ್ಟು ಪ್ರವಾಸದಲ್ಲಿ ಇದ್ದುದರಿಂದ, ನಿಮಗಾಗಿ ಪುಸ್ತಕಗಳನ್ನು ಆಯ್ಕೆ ಮಾಡಿ, ಕೊಂಡು ತಂದು, ಕವರ್‌ನಲ್ಲಿ ಹಾಕಿ, ಸ್ಟಾಂಪ್ ಹಚ್ಚಿ, ನಿಮ್ಮ ವಿಳಾಸ ಬರೆದು ಪೋಸ್ಟ್ ಮಾಡಲು ಆಗಿಲ್ಲ. ಬೇಜಾರು ಮಾಡಿಕೊಳ್ಳಬೇಡಿ ಪುಟಾಣಿಗಳೆ–ನಿಮ್ಮ ತಂದೆ-ತಾಯಂದಿರಿಗೂ ಹೇಳಿ.

ಈ ಸಲವೂ ಕಥೆ–ಕವನಗಳನ್ನೇ ಬರೆಯಿರಿ. ಚೆನ್ನಾಗಿ, ಚಿಕ್ಕದಾಗಿ ಬರೆಯಿರಿ. 5 ಅಕ್ಟೋಬರ್ ಮೊದಲು ನನಗೆ ತಲುಪಿಸಿ, ನಿಮ್ಮ ವಯಸ್ಸು, ಓದುವ ಶಾಲೆ, ತರಗತಿ, ವಿಳಾಸ ತಿಳಿಸಿ.

ತುಷಾರಣ್ಣ, ಬಾಲಪ್ರಪಂಚ, ತುಷಾರ, ಪ್ರೆಸ್ ಕಾರ್ನರ್, ಮಣಿಪಾಲ–576 119.
– ಈ ವಿಳಾಸಕ್ಕೆ ಬರೆಯಿರಿ.

ನಿಮಗೆಲ್ಲ ಒಳ್ಳೆಯದಾಗಲಿ–ನಿಮ್ಮ ಪ್ರೀತಿಯ ತುಷಾರಣ್ಣ.

**ಕ್ವಾಟೆ** (ಕಥಾಸಂಗ್ರಹ) ಲೇ: ಚದುರಂಗ; 194 ಪುಟಗಳು. ಬೆಲೆ: ರೂ. 40/-.

ಕನ್ನಡದ ಹಿರಿಯ ಬರೆಹಗಾರ ಚದುರಂಗ ಅವರ ಹದಿಮೂರು ಅತ್ಯುತ್ತಮ ಈಚಿನ ಕಥೆಗಳ ಸಂಕಲನ. ಚದುರಂಗರ ವಿಶೇಷ ಗ್ರಾಮ್ಯ ಶೈಲಿ, ಬದುಕನ್ನು ಸಹಜವಾಗಿ–ಸೂಕ್ಷ್ಮವಾಗಿ ನೋಡುವ ರೀತಿಯ ಸುಂದರ ಕಥೆಗಳು. ಕನ್ನಡಿಗರೆಲ್ಲರೂ ಖಂಡಿತ ಓದಬೇಕಾದ ಕಥೆಗಳು.



**ಗಂಧವ್ರತ** (ಆಯ್ದ ಕವನಗಳು) ಲೇ: ಎಚ್. ಎಸ್. ವೆಂಕಟೇಶಮೂರ್ತಿ. 80 ಪುಟಗಳು. ಬೆಲೆ: ರೂ. 12/-.

ಎಚ್. ಎಸ್. ವೆಂಕಟೇಶಮೂರ್ತಿ ಅವರ ಸುಪ್ರಸಿದ್ಧ ಪ್ರಾತಿನಿಧಿಕ ಮೂವತ್ತೊಂದು ಕವಿತೆಗಳ ಸಂಗ್ರಹ. ಉತ್ತಮ ಕಾವ್ಯಾನುಭವ ನೀಡಬಲ್ಲ ಕೃತಿ.




**ಕುಹೂಗೀತ** (ಭಾವಗೀತೆಗಳ– ಗೀತೆಗಳ ಸಂಕಲನ) ಲೇ: ಸುಮತೀಂದ್ರ ನಾಡಿಗ. 64 ಪುಟಗಳು. ಬೆಲೆ: ರೂ. 12/-.

ನಲವತ್ತೇಳು ಭಾವಗೀತೆ–ಗೀತೆಗಳ ಸಂಗ್ರಹ, ಅರ್ಥಪೂರ್ಣವಾಗಿದೆ. ಬದುಕಿನ ಸಹಜ ಭಾವನೆಗಳ ನೋಟ.

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು: ಸುವಿದ್ಯಾ ಪ್ರಕಾಶನ, 9/2 ಸರ್ವೆಯರ್ ರಸ್ತೆ, ಬಸವನಗುಡಿ, ಬೆಂಗಳೂರು– 560 004.

**ಬಾಚಿಗೊಂಡನ ಹಳ್ಳಿ ಮತ್ತು ಏಣಗಿ ಬಸಾಪುರದ ಜನಪದ ಗೀತೆಗಳು** ಸಂ: ಎಸ್. ಎ. ಕೃಷ್ಣಯ್ಯ. ಪ್ರಕಾಶಕರು– ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, (ಎಂಜಿಎಂ ಕಾಲೇಜು ಆವರಣ), ಉಡುಪಿ– 576 102 (ದ.ಕ.). 228 ಪುಟಗಳು. ಬೆಲೆ: ರೂ. 50/-.

ಬಳ್ಳಾರಿ ಜಿಲ್ಲೆಯ ಎರಡು ತಾಲೂಕುಗಳಲ್ಲಿನ ಜಾನಪದ ಗೀತೆಗಳ ಸಂಗ್ರಹ, ಗೀತೆಗಳೊಂದಿಗೆ, ಅವುಗಳ ಅರ್ಥ ವಿವರಣೆ, ಕಠಿಣ ಪದಗಳ ಅರ್ಥ ಇವುಗಳಿಂದ ಇದೊಂದು ಉತ್ತಮ ಪ್ರಯತ್ನವಾಗಿದೆ.

**ಹನಿಗವಿತೆಗಳು** ಲೇ: ಭಾಗ್ಯ ಜಯಸುದರ್ಶನ; ಶೇಷಲತ ಪ್ರಕಾಶನ, ನಂ. 364, 11ನೇ 'ಎ' ಕ್ರಾಸ್, ಮೊದಲನೇ ಹಂತ, ಜೆ.ಪಿ. ನಗರ, ಬೆಂಗಳೂರು– 560 078.

ಸುಮಾರು ನೂರಿಪ್ಪತ್ತು ಅರ್ಥಪೂರ್ಣ–ಸ್ವಾರಸ್ಯ ಹನಿಗವನಗಳಿವೆ.

**ಭಾರತದಲ್ಲಿ ಸಮಾಜ ಕಾರ್ಯ–ಹಿನ್ನೆಲೆ, ಮುನ್ನೋಟ** ಸಂ: ಎಸ್. ಆರ್. ರಾಮಸ್ವಾಮಿ; ರಾಷ್ಟ್ರೋತ್ಥಾನ ಸಾಹಿತ್ಯ. 'ಕೇಶವ ಶಿಲ್ಪ', ಕೆಂಪೇಗೌಡ ನಗರ, ಬೆಂಗಳೂರು– 560 019. 348 ಪುಟಗಳು. ಬೆಲೆ: ರೂ. 55/-.

ದೇಶದ ಅಭಿವೃದ್ಧಿಗೆ, ಜನವಿಕಾಸಕ್ಕಾಗಿ ಹಿಂದಿನಿಂದ– ಇಂದಿನವರೆಗೆ ಭಾರತದಲ್ಲಿ ಆಗಿರುವ ಸಾರ್ವಜನಿಕ ಹಿತಾಸಕ್ತಿಗಳ ಐತಿಹಾಸಿಕ ಪರಿಚಯ ಮತ್ತು ತಾತ್ವಿಕ ಚಿಂತನೆ, ಆಧ್ಯಾತ್ಮ ದೃಷ್ಟಿ, ನೈತಿಕ-ಧಾರ್ಮಿಕ ನೆಲೆಗಟ್ಟು – ಇವುಗಳ ವಿಶ್ಲೇಷಣೆ. ಅತ್ಯುತ್ತಮ ಗ್ರಂಥ.

**ಕನ್ನಡ ಲೇಖಕಿಯರ ನೆಲೆ-ಬೆಲೆ** ಲೇ: ಬಿ. ಎಸ್. ವೆಂಕಟಲಕ್ಷ್ಮಿ; ಎನ್. ಟಿ. ಶ್ಯಾಂ ಪ್ರಕಾಶನ, 79, ಸಾಯಿರಾಂ, 13ನೆ 'ಬಿ' ಮ್ಯೆನ್, ಎಚ್. ಎ. ಎಲ್. 2ನೆ ಹಂತ, ಇಂದಿರಾನಗರ, ಬೆಂಗಳೂರು – 560 008. 188 ಪುಟಗಳು. ಬೆಲೆ: ರೂ. 45/-

ಕನ್ನಡದಲ್ಲೊಂದು ಅಪರೂಪ ವಿಮರ್ಶಾ ಕೃತಿ. ಕನ್ನಡ ಸಾಹಿತ್ಯಲೋಕದಲ್ಲಿ ಮಹಿಳೆ ಪ್ರಾರಂಭದಿಂದ ಮೂಡಿಸಿದ ಹೆಜ್ಜೆ ಗುರುತುಗಳ ಐತಿಹಾಸಿಕ ನೋಟದ ಜೊತೆಗೆ ವಿಮರ್ಶಾತ್ಮಕ ಅಧ್ಯಯನವೂ ಇದೆ.



**ದೇವನೂರ ಮಹಾದೇವ ಅವರ ಕೃತಿಗಳು** (ಸಮಗ್ರ ಕತೆ, ಕಾದಂಬರಿಗಳು) ಪತ್ರಿಕೆ ಪ್ರಕಾಶನ, ನಂ. 9, ಆಂಜನೇಯ ದೇವಸ್ಥಾನದ ರಸ್ತೆ, ಬಸವನಗುಡಿ, ಬೆಂಗಳೂರು – 560 004. 169 ಪುಟಗಳು. ಬೆಲೆ: ರೂ. 50/-.

'ದ್ಯಾವನೂರು' ಕಥಾ ಸಂಕಲನದಲ್ಲಿ ಕಂಡ ಏಳು ಕಥೆಗಳು, 'ಒಡಲಾಳ' ನೀಳ್ಗತೆ, 'ಕುಸುಮಬಾಲೆ' ಕಾದಂಬರಿ– ಇವನ್ನೊಳಗೊಂಡ ಅಪರೂಪ ಪುಸ್ತಕ. ಒಬ್ಬ ಲೇಖಕ ಬರೀ ಒಟ್ಟು 169 ಪುಟಗಳಷ್ಟೇ ಬರೆದು ಸುಪ್ರಸಿದ್ಧರಾಗಿರುವ ಆಶ್ಚರ್ಯ – ಸಂತೋಷ ನೀಡುವ ಅಪರೂಪ– ಸಂಗ್ರಹ ಯೋಗ್ಯ ಕೃತಿ.

**ಮಹೂವಾ** (ಕವಿತೆಗಳು) ಲೇ: ಬಂಜಗೆರೆ ಜಯಪ್ರಕಾಶ; ಚರ ಪ್ರಕಾಶನ, ಸ್ಟಾಫ್ ಕ್ವಾರ್ಟರ್ಸ್, ಗ್ರಾಮೀಣ ಮಹಿಳಾ ಸ್ವ-ಉದ್ಯೋಗ ತರಬೇತು ಸಂಸ್ಥೆ, ಹಾರೊಹಳ್ಳಿ – 562 112. 96 ಪುಟಗಳು. ಬೆಲೆ: ರೂ. 10/-.

ಬಂಡಾಯ ಕಾವ್ಯದ ಮೂವತ್ತೆಂಟು ಎಳೆಗಳು, ಸುತ್ತಲ ಬದುಕನ್ನು ಆಕ್ರೋಶದಿಂದ – ವಿಷಾದದಿಂದ ಕಾಣುವ ಅಭಿವ್ಯಕ್ತಿ.

**ಐದು ಸಮಾಜವಾದಿ ನಾಟಕಗಳು** ಲೇ: ಚೆನ್ನಣ್ಣ ವಾಲೀಕಾರ; ಗ್ರೀನೋಬಲ್ಸ್ ಪ್ರಕಾಶನ, ಗುಲ್ಬರ್ಗಾ. 167 ಪುಟಗಳು. ಬೆಲೆ ರೂ. 24/-.

ಗುಲ್ಬರ್ಗಾದ ಹಿರಿಯ ಲೇಖಕ ಡಾ। ಚೆನ್ನಣ್ಣ ವಾಲೀಕಾರ ಅವರ ಐದು ನಾಟಕಗಳ ಸಂಗ್ರಹ. ರಂಗ ನಾಟಕ, ಬಾನುಲಿ ನಾಟಕ ಎಂದು ಅವರು ಬರೆದದ್ದು. ಅವರ ಮನೋಭಾವದಂತೆಯೇ ಬದುಕನ್ನು ಸೀಳಿ ನೋಡುವ ವಸ್ತುಗಳ ಪ್ರಯತ್ನಗಳು.

**ಹೆಜ್ಜೆಗಳು** (ಬಳ್ಳಾರಿ ಜಿಲ್ಲಾ ಪ್ರಾತಿನಿಧಿಕ ಕಥಾಂಜಲಿ) ಸಂ: ಗುರುಮೂರ್ತಿ ಪೆಂಡಕೂರು; ಕನ್ನಡ ಸಾಹಿತ್ಯ ಪರಿಷತ್ತು, ಬಳ್ಳಾರಿ ಜಿಲ್ಲಾ ಸಮಿತಿ, ಹಗರಿಬೊಮ್ಮನಹಳ್ಳಿ – 583 212. 260 ಪುಟಗಳು. ಬೆಲೆ: ರೂ. 40/-.

ಬಳ್ಳಾರಿ ಜಿಲ್ಲೆಯ ಇಪ್ಪತ್ತು ಕಥೆಗಾರರ ಸಾರ್ಥಕ ಕಥೆಗಳ ಸಂಕಲನ. ಆತ್ಮವಿಶ್ವಾಸದ ಹೆಜ್ಜೆಗಳು.



**ಹಾಮಾನಾ ಹೊತ್ತಗೆಗಳು** (ಡಾ। ಹಾ. ಮಾ. ನಾಯಕರ ವರ್ಗೀಕೃತ ವರ್ಣನಾತ್ಮಕ ಗ್ರಂಥಸೂಚಿ) ಸಂ: ಡಾ। ಎಚ್. ಎಸ್. ಸುಜಾತಾ. ಸುಹಾಸ ಪ್ರಕಟಣೆಗಳು, 53, 6ನೆ ಬ್ಲಾಕ್, ಕುವೆಂಪುನಗರ, ಮೈಸೂರು – 570 023. 123 ಪುಟಗಳು. ಬೆಲೆ: ರೂ. 80/-.

ಕನ್ನಡ ಸಾರಸ್ವತ ಲೋಕಕ್ಕೊಂದು ಅಪೂರ್ವ ಸೇರ್ಪಡೆ– ಬಹುಶಃ, ಭಾರತದಲ್ಲಿ ಇಂಥ ಕೆಲವೇ ಪ್ರಯತ್ನಗಳಲ್ಲಿ ಒಂದು. ಡಾ। ಹಾಮಾನಾ ಬದುಕು– ಬರೆಹದ ಎಲ್ಲ ಅಂಕಿ-ಅಂಶಗಳ ಖಚಿತ ದಾಖಲೆ. ಅಭಿನಂದನಾರ್ಹ ಪ್ರಯತ್ನ. ●

# ಸಾಹಿತಿ ಕ್ವಿಜ್ ಸಾಹಿತ್ಯ

1. ಕರ್ನಾಟಕ ಸಂಸ್ಕೃತಿ ಪ್ರಸಾರ ಇಲಾಖೆಯ ಪ್ರಥಮ ನಿರ್ದೇಶಕರು.
2. ಶಾತವಾಹನ ಅರಸು 'ಹಾಲ' ರಚಿಸಿದ ಶೃಂಗಾರಕಾವ್ಯ.
3. ''ಕಾವೇರಿಯಿಂದಮಾ ಗೋದಾವರಿ ವರಮಿರ್ದ ನಾಡದಾ ಕನ್ನಡದೊಳ್'' ಎಂಬ ಉಲ್ಲೇಖ ಯಾವ ಕೃತಿಯಲ್ಲಿದೆ?
4. ಕರ್ನಾಟಕದವರಾಗಿದ್ದು ಇಂಗ್ಲಿಷ್‌ನಲ್ಲಿ ಸಾಹಿತ್ಯ ರಚಿಸಿ ಖ್ಯಾತರಾಗಿ ರಾಜ್ಯಸಭೆಗೆ ನಾಮಕರಣ ಹೊಂದಿದವರು.
5. ಮಹಾಕಾವ್ಯ 'ಭವ್ಯಮಾನವ' ರಚಿಸಿದವರ್ಯಾರು? ಅದಕ್ಕೆ ಯಾವ ಪುರಸ್ಕಾರ ದೊರಕಿದೆ?
6. ಮಧ್ಯಪ್ರದೇಶ ಸರ್ಕಾರ ಡಾ। ಶಿವರಾಮ ಕಾರಂತರಿಗೆ ಯಾವ ಸಾಧನೆಗಾಗಿ 1990 ರಲ್ಲಿ 'ತುಲಸೀ ಸಂಮಾನ್' ಗೌರವ ನೀಡಿತು?
7. ಕನ್ನಡದ ಪ್ರಸಿದ್ಧ ಪತ್ರಿಕೆಯೊಂದರ ಸ್ಥಾಪಕ ಸಂಪಾದಕರಾಗಿದ್ದು ಕೇಂದ್ರ ಸಂಗೀತ ನಾಟಕ ಅಕಾಡಮಿ ಫೆಲೋ ಆಗಿದ್ದವರು.
8. ತೀ.ನಂ.ಶ್ರೀ ಅವರ ಪೂರ್ಣ ಹೆಸರು.
9. ಬೆಟಗೇರಿ ಕೃಷ್ಣಶರ್ಮರ ಕಾವ್ಯನಾಮ.
10. ಚಿತ್ರದಲ್ಲಿರುವ ಕನ್ನಡ ಅಧ್ಯಾಪಕರು ಕವಿಗಳು ಹಾಗೂ ವಿಧಾನ ಪರಿಷತ್‌ನ ನಾಮಕರಣ ಸದಸ್ಯರೂ ಆಗಿದ್ದರು.

ಪ್ರಶ್ನೆ : 6



11. ಕರ್ನಾಟಕ ಮಹಿಮಾ ಸ್ತೋತ್ರ ಯಾರ ಕವನ ಸಂಕಲನ?
12. ಸಾರಿಗೆ ಕಮೀಷನರ್ ಆಗಿದ್ದು ಕನ್ನಡ ಸಾಹಿತ್ಯ ಸಮ್ಮೇಳನವೊಂದರ ಅಧ್ಯಕ್ಷಪೀಠ ಅಲಂಕರಿಸಿದವರು.
13. ಸುಬೋಧ ರಾಮರಾಯರು ಆರಂಭಿಸಿದ ಗ್ರಂಥಮಾಲೆ.
14. ಕವಿ ಪು.ತಿ.ನ. ಅವರಿಗೆ ಕೇಂದ್ರ ಅಕಾಡಮಿ ಪ್ರಶಸ್ತಿ ತಂದುಕೊಟ್ಟ ಕೃತಿ ಯಾವುದು?
15. ಕನ್ನಡದ ರಗಳೆ ಕವಿ ಎಂದು ಯಾರನ್ನು ಕರೆಯುತ್ತಾರೆ?

● ನಾ. ಜ. ಪ್ರ.

ಪ್ರಶ್ನೆ : 10



ಪ್ರಶ್ನೆ :14



## ಕಳೆದ ಸಂಚಿಕೆಯಲ್ಲಿ ಪ್ರಕಟವಾದ ಕ್ವಿಜ್‌ನ ಉತ್ತರ

1) ''ಶಿಲಪ್ಪದಿಕಾರಂ''–ತೋಲ್ಕಾಪ್ಪಿಯಾ ಕಾವ್ಯದಲ್ಲಿ.
2) ಭಾರತ ಕಥಾಮಂಜರಿ.
3) ಸಾಹಿತಿ ಎಂ. ವಿ. ಸೀತಾರಾಮಯ್ಯ.
4) ಡಾ। ಸರೋಜಿನಿ ಮಹಿಷಿ.
5) ಕೈವಾರ ಸಾಹಿತ್ಯ ಸಮ್ಮೇಳನ ಎ. ಎನ್. ಮೂರ್ತಿರಾವ್.
6) ಚಿಕ್ಕಮಗಳೂರುಜಿಲ್ಲೆ ದೇವನೂರು.
7) ಶ್ರೀರಾಮಾಯಣದರ್ಶನಂ, ಕುವೆಂಪು.
8) ರಾವ್‌ಬಹದ್ದೂರ್.
9) ವಿಚಿತ್ರಶಿಕ್ಷೆ.
10) ಪಂಪಪ್ರಶಸ್ತಿ, ನಾಟ್ಯಸರಸ್ವತಿವಿಗ್ರಹ.
11) ಎ. ಆರ್. ಕೃಷ್ಣಶಾಸ್ತ್ರಿಗಳು.
12) ಕವಿರಾಜಮಾರ್ಗ (ಕ್ರಿ.ಶ.850)
13) ದ.ರಾ.ಬೇಂದ್ರೆ.
14) ಕನಕದಾಸರು.
15) ವಿ.ಕೃ.ಗೋಕಾಕ್ (ದಂಪತಿ)

# ಅರ್ಧಸತ್ಯ



ಶಕುನಿಯರ
ನಿರಂತರ ದಾಹದ
ದಾಳಗಳು
ಉರುಳುತ್ತಲೇ...
ರಾಜ್ಯಕೋಶ ಬರಿದಾಗಿ
ಖಾಲಿಯಾದ
ಆಸನಗಳಲಿ
ಕಾಣುವುದು
ಚಿತ್ತಾರವಲ್ಲ
ಕುಳಿತು ಆಳಿದವರ
ಚಿತ್ತವಿಕಾರ
ಕಾಲಗರ್ಭದಿ ಹುದುಗಿಹ
ಈ ಅರ್ಧಸತ್ಯದ
ಅರಿವು
ನಿನಗಾಗುವ
ಮೊದಲೇ ಭರ್ತಿಯಾಗಬಹುದು
ಮತ್ತೆ
ಕೌರವರಿಂದ
ಅರಿತವರಾರು ?

ಆಗ
ನೀನೇ ಹಾಡಬಹುದು
ದ್ರೌಪದಿಯಾಗಿ
ಮತ್ತೊಂದು ಕುರುಕ್ಷೇತ್ರಕ್ಕೆ
ನಾಂದಿ.

● ಕೃಷ್ಣಮೂರ್ತಿ ಕವತ್ತಾರ್

## ಚಿತ್ರಕವನ ಸ್ಪರ್ಧೆ – 110

# ಫಲಿತಾಂಶ

ಬಹುಮಾನಿತ ಕವನ :

ಅರ್ಧಸತ್ಯ ● ಕೃಷ್ಣಮೂರ್ತಿ ಕವತ್ತಾರ್, ಬೆಂಗಳೂರು

ಮೆಚ್ಚುಗೆ ಪಡೆದ ಕವನಗಳು :

1) ಆಯ್ದುಕೋ ನಿನಗೆ ನೀನೇ ● ಲಕ್ಷ್ಮೀಸತ್ಯ, ಪೂನಾ
2) ಪಲ್ಲವಿಸು ● ಸೀಮಾ ಪಟ್ಟಣಶೆಟ್ಟಿ, ಧಾರವಾಡ
3) ಎಲ್ಲಿ ಮಾಯವಾಗಿಹರು ● ಅಶೋಕ್ ಕೆ., ಮಂಗಳೂರು
4) ಯಾಕೆ ಕಾಯುತ್ತೀ ? ● ಶರಣ ಹೀರಾಪೂರ, ಇಂಡಿ

ಕಾದಂಬರಿ

# ದ್ವಂದ್ವ

● 'ಮನು'

ವಿಳಾಸ :
ಪಿ. ಎನ್. ರಂಗನ್ ('ಮನು')
**153, 'AMAN', C-2, Ist Road**
**Dahanurkar Colony,**
**Kothrud, Pune – 411 029**

ಓಹಾಯೋ ನಗರದ ವಿಮಾನ ನಿಲ್ದಾಣದಲ್ಲಿ ಇಳಿದಾಗ ನನಗೆ ಮೊದಲು ಸಿಕ್ಕವನು ಅಶೋಕ– ಅಶೋಕ ಪಟವರ್ಧನ. ಅವನು ತನ್ನ ಪರಿಚಿತ ರನ್ನು ಕಳಿಸಿಕೊಡಲು ಅಲ್ಲಿಗೆ ಬಂದಿದ್ದ. ನಾನು ನಿಲ್ದಾಣದಿಂದ ಹೊರಗೆ ಬರುವ ಸನ್ನಾಹದಲ್ಲಿ ದ್ದಾಗ ಅವನನ್ನು ಕಂಡು ಅಚ್ಚರಿಗೊಂಡೆ, ಸಂತೋಷದಿಂದ ಹತ್ತಿರ ಸಾಗಿದೆ.

ಹೌದು, ಅಶೋಕನನ್ನು ಕಂಡು ಸುಮಾರು ಹತ್ತು ವರ್ಷಗಳೇ ಆಗಿದ್ದವು. ಅವನು ನಮ್ಮ ಪೈಕಿ ಬಹಳ ಬುದ್ಧಿವಂತ ಹುಡುಗ. ಅವನಿಗೆ ಓದುವಾಗಲೇ ಅಮೆರಿಕೆಯ ಹುಚ್ಚು ಅಂಟಿ ಕೊಂಡಿತ್ತು. ಹಾಗಾಗಿ ನನಗೆ ಈಗ ಅವನನ್ನು ಇಲ್ಲಿ ಕಂಡು ಅಚ್ಚರಿಯಾಗಬಾರದಿತ್ತು.

ಆದರೆ ಆಶ್ಚರ್ಯವಾಗಿದ್ದು ಅದಕ್ಕಲ್ಲ. ಅವನ ಮುಖದಲ್ಲಿ ಆಗಿದ್ದ ಬದಲಾವಣೆಯನ್ನು



ಕಂಡು. ನಮ್ಮಲ್ಲಿ ಅತಿಬುದ್ಧಿವಂತನಾದ ಅಶೋಕ ಚಟುವಟಿಕೆಯಿಂದ ಮಾತನಾಡುತ್ತಿದ್ದರೆ, ಅವನನ್ನು ನೋಡುತ್ತ ನಿಲ್ಲುವುದೇ ಆನಂದದ ವಿಷಯವಾಗಿರುತ್ತಿತ್ತು. ಆದರೆ ಇಂದೇಕೋ ಅವನಲ್ಲಿ ಆ ಆನಂದದ ಸೆಲೆಯೇ ಬತ್ತಿ ಹೋಗಿರುವಂತೆ ಕಂಡುಬಂದಿತು. ಅಥವಾ ನಾನು ಅವನ ಮುಖವನ್ನು ಓದುವುದರಲ್ಲಿ ತಪ್ಪು ಮಾಡುತ್ತಿದ್ದೇನೆಯೇ?

ನನಗೆ ಆದಷ್ಟೇ ಸಂತೋಷ, ಅಶೋಕನಿಗೂ ನನ್ನನ್ನು ಕಂಡು ಉಂಟಾಗಿತ್ತು. ಹಾಗಾಗಿ ತಾನು ಎಲ್ಲಿಗೆ ಹೋಗಬೇಕಾಗಿತ್ತು ಎಂಬುದನ್ನು ಮರೆತು, ನನ್ನನ್ನು ಎಳೆದುಕೊಂಡು, ತನ್ನ ಕಾರಿನಲ್ಲಿ ನನ್ನನ್ನು ದಬ್ಬಿಕೊಂಡು, ನಗರದೊಳಗೆ ಪ್ರವೇಶಿಸುತ್ತಿದ್ದಂತೆ ಒಂದು ರೆಸ್ಟೋರೆಂಟ್ ನೊಳಗೆ ನುಗ್ಗಿ, ಟೇಬಲ್ ಒಂದನ್ನು ಆಕ್ರಮಿಸಿ, ನನ್ನ ಮೇಲೆ ಪ್ರಶ್ನೆಗಳ ಸುರಿಮಳೆಯನ್ನು ಕರೆಯುತೊಡಗಿದ.

ಅವನ ಭಾವನೆ ನನಗೆ ಅರ್ಥವಾಗಿತ್ತು. ನಾನು ಆಗಲೂ ಅಷ್ಟೇ, ಈಗಲೂ ಅಷ್ಟೇ, ಅಂತಹ ಮಹಾಬುದ್ಧಿವಂತ ಎಂದು ಹೇಳಿಕೊಳ್ಳಲಾರೆ. ಆದರೆ ವಿಷಯವನ್ನು ಅರ್ಥಮಾಡಿಕೊಳ್ಳುವಲ್ಲಿ, ಕೆಲಸ ನಿಭಾಯಿಸುವಲ್ಲಿ, ಇಂಗ್ಲಿಷ್‌ನಲ್ಲಿ ಹೇಳುವ 'ಕಾಮನ್‌ಸೆನ್ಸ್' ಉಪಯೋಗಿಸುವ ಜಾತಿಗೆ ಸೇರಿದವನು ನಾನು. ಮೊದಲಿಂದಲೂ ನನಗೂ ಅಶೋಕನಿಗೂ ಒಂದು ವಿಷಯದಲ್ಲಿ ಭಿನ್ನಾಭಿಪ್ರಾಯವಿತ್ತು. ಅವನಿಗೆ ಅಮೆರಿಕೆಯ ಬಗ್ಗೆ ವ್ಯಾಮೋಹವಿದ್ದರೆ, ನನಗೆ ನನ್ನ ತಾಯಿನಾಡಿನಲ್ಲೇ ಉಳಿದುಕೊಳ್ಳಬೇಕು ಎಂಬ ಅಭಿಪ್ರಾಯವಿತ್ತು. ನನ್ನ ಈ ಅಭಿಪ್ರಾಯವನ್ನು ತಿಳಿದಿದ್ದ ಅವನಿಗೆ ಈಗ ನಾನು ಸೂಟ್‌ಕೇಸ್ ಜೊತೆ ಬಂದಿಳಿದಿರುವಾಗ, ಏನೋ ಅಪರೂಪದ ದೃಶ್ಯ ಕಂಡಂತೆ ಆಗಿರಬೇಕು.

ಆಗ ಅವನಿಗೆ ವಿವರಿಸಿದೆ. ಇಲ್ಲಿ ಒಂದು ತಿಂಗಳ ಕಾಲ ವಿಶೇಷವಾದ ತರಬೇತಿಗೆ ನನ್ನ ಸಂಸ್ಥೆ ನನ್ನನ್ನು ಕಳಿಸಿದೆ ಎಂದು ಹೇಳಿದೆ. ಇಲ್ಲಿಯ ಕೆಲವು ತಾಂತ್ರಿಕ ಕ್ಷೇತ್ರಗಳಲ್ಲಿ – ಅದರಲ್ಲೂ ಪ್ರಯೋಗಾಲಯಗಳಲ್ಲಿ – ಅಧ್ಯ

**ಅಮೆರಿಕಾಕ್ಕೆ ಹೋಗಿದ್ದಾಗ ನನ್ನ ಪ್ರಿಯ ಗೆಳೆಯ ವಿಜಯನನ್ನು ನೋಡಬೇಕೆನ್ನಿಸಿತು. ಅವನನ್ನು ಹುಡುಕಿಕೊಂಡು ಹೊರಟಾಗ ಕುತೂಹಲಭರಿತ ಭಯಾನಕ ಘಟನೆಗಳು ಎದುರಿಗೆ ನಿಂತವು.**

ಯನ ನಡೆಸಲು ನನ್ನನ್ನು ಕಳಿಸಿದೆ ಎಂದು ಹೇಳಿದೆ. ನಾನು ಇಂತಹ ಕಡೆ ಹೋಗಬೇಕು. ಅಲ್ಲಿ ನನಗೆ ಹೊಟೇಲ್ ರೂಮನ್ನು ಗೊತ್ತು ಮಾಡಿದ್ದಾರೆ ಎಂದೂ ಹೇಳಿದೆ.

ಅಲ್ಲಿಗೆ ಅವನು ನಿಟ್ಟುಸಿರು ಬಿಟ್ಟ!

ಅವನು ನಿಟ್ಟುಸಿರು ಬಿಟ್ಟಿದ್ದನ್ನು ನೋಡಿ, ಕೇಳಿ, ನಾನು ಅಚ್ಚರಿಯಿಂದಲೇ ಪ್ರಶ್ನಿಸಿದೆ.

'ಏನೋ ಅಶೋಕ, ನಾನು ಬರೇ ಒಂದು ತಿಂಗಳ ಮಟ್ಟಿಗೆ ಯಾವುದೋ ತರಬೇತಿಗೆ ಬಂದಿದ್ದೇನೆ ಅಂತ ಕೇಳಿ, ಸದ್ಯ ಅಂತನ್ನೋ ಹಾಗೆ ನಿಟ್ಟುಸಿರು ಬಿಡ್ತಿದ್ದೀಯಲ್ಲ. ಅಮೆರಿಕೆ ಎಂದರೆ ಪ್ರಾಣ ಬಿಡ್ತಿದ್ದ ನೀನು ಈ ರೀತಿ ನಿಟ್ಟುಸಿರು ಬಿಡೋದ!' ಎಂದು ಅವನನ್ನು ಛೇಡಿಸಿದೆ.

ಅವನು ನನ್ನ ಮಾತಿಗೆ ಕೋಪಿಸಿಕೊಳ್ಳಲಿಲ್ಲ.

'ಹೌದೋ ಆನಂದ, ಅದೆಲ್ಲ ಒಂದು ಕಾಲ. ಈವತ್ತು ನಾವುಗಳು ಯೋಚಿಸೋದೆ ಬೇರೇ ರೀತಿ' ಎಂದ.

'ಯೋಚಿಸೋದೇ ಬೇರೇ ರೀತಿ! ಏನು ಹಾಗಂದರೆ? ನೀನು ಹೇಗೂ ಅಮೆರಿಕೆಯ ಪ್ರಜೆಯಲ್ಲವೇ?'

'ಯಾರು ಹೇಳಿದ್ದು ನಾನು ಅಮೆರಿಕೆಯ ಪ್ರಜೆಯಾಗಿದ್ದೀನಿ ಅಂತ?'

'ಯಾರು ಯಾಕೆ ಹೇಳಬೇಕು? ನೀನು ಇಲ್ಲಿಗೆ ಬಂದು ಹತ್ತು ವರ್ಷಗಳೇ ಆದವು. ಪ್ರತಿಷ್ಠಿತವಾದ ಸ್ಥಳದಲ್ಲಿ ದೊಡ್ಡ ಉದ್ಯೋಗದಲ್ಲಿ ಇದ್ದೀಯ. ಹಾಗೆಲ್ಲ ಇರೋವಾಗ ನೀನು

ಅಮೆರಿಕೆಯ ಪ್ರಜೆಯಾಗಿರ್ತೀಯ ಅಂತ ನಾನು ಸಹಜವಾಗಿ ಭಾವಿಸಿದೆ.'

'ಇಲ್ಲ... ನಾನು ಅಮೆರಿಕೆಯ ನಾಗರಿಕನಲ್ಲ... ನಾನಿನ್ನೂ ಭಾರತೀಯ ನಾಗರಿಕ' ಎಂದ ತಲೆ ಎತ್ತಿಕೊಂಡು.

'ಅರೆ, ಇದು ಹೊಸ ಸುದ್ದಿಯಾಯಿತಲ್ಲ! ನಿನ್ನನ್ನು ತಿಳಿದವನು ಯಾರೂ ಇದನ್ನು ಒಪ್ಪೋದಿಲ್ಲ ನೋಡು.'

'ಆವತ್ತಿನ ಅಶೋಕ ಬೇರೆ, ಈವತ್ತಿನ ಅಶೋಕ ಬೇರೆ, ಆನಂದ' ಎಂದ ಮುಗಮ್ಮಾಗಿ.

ಆಮೇಲೆ ನಿಧಾನವಾಗಿ ಅವನಿಂದ ಒಂದೊಂದಾಗಿ ಸಮಾಚಾರವನ್ನೂ ಹೊರಡಿಸಿದೆ.

ನಾಸಾಗೆ ಸಂಬಂಧಿಸಿದ ನಿಗೂಢವಾದ ಕೆಲಸಗಳನ್ನು ಮಾಡುವುದಕ್ಕೆ ಅಶೋಕ ಹತ್ತು ವರ್ಷದ ಹಿಂದೆ ಅಮೆರಿಕೆಗೆ ಬರುವುದಕ್ಕಿಲ್ಲ ಕೆಲಸಕ್ಕೆ ಸೇರಿಕೊಂಡಿದ್ದ. 'ವಸ್ತುವಿಷಯ'ಗಳಲ್ಲಿ ಅಶೋಕನಿಗಿದ್ದ ಅರ್ಥಪೂರ್ಣ ಜ್ಞಾನವನ್ನು ಕಂಡು ಸಂಸ್ಥೆಯವರು ಕ್ಷಿಪಣಿಗಳಲ್ಲಿ, ಉಪಗ್ರಹಗಳಲ್ಲಿ ಬಳಸುವ ಅಪರೂಪದ ಲೋಹದ ಅಧ್ಯಯನ ಮಾಡಲು, ಹಾಗೂ ಅದರ ಬಗ್ಗೆ ನಿರ್ಧಾರ ತೆಗೆದುಕೊಳ್ಳಲು ಅವನನ್ನು ಗೊತ್ತುಮಾಡಿದರು. ಅದರಂತೆ ಕ್ಷಿಪ್ರದಲ್ಲೇ ಅಶೋಕ ಪಟವರ್ಧನ ಇಂತಹ ಲೋಹಗಳ ವಿಷಯದಲ್ಲಿ ಪ್ರಕಾಂಡ ಪಂಡಿತನಾದ. ಇವನನ್ನು ಬಿಟ್ಟರೆ ಬೇರೆಯವರು ಈ ಕ್ಷೇತ್ರದಲ್ಲಿ ಪರಿಣತರು ಇಲ್ಲ ಎಂಬಂತಹ ಪರಿಸ್ಥಿತಿ ಉಂಟಾಯಿತು.

ಈ ಸಂದರ್ಭದಲ್ಲಿ ಅಶೋಕ ಕೆಲಸ ಮಾಡುವ ಸಂಸ್ಥೆ, ಅವನು ಅಮೆರಿಕೆಯ ಪೌರತ್ವ ಪಡೆಯಲು ಉತ್ತೇಜಿಸಿತು. ಅವನ ಮನಸ್ಸು ಅದರ ಕಡೆಯೇ ವಾಲಿತ್ತು. ಆದರೆ ಅವನನ್ನು ಒಂದು ಸಣ್ಣ ವಿಷಯ ಬಾಧಿಸುತ್ತಿತ್ತು.

ಅದು, ಅವನು ಹಾಗೂ ಅವನ ತಂದೆಯ ನಡುವಿನ ಸಂಬಂಧ. ತನ್ನಪ್ಪನ ವಿಷಯದಲ್ಲಿ ಅಶೋಕನಿಗೆ ವಿಪರೀತ ಪ್ರೀತಿ. ತಾನು ಏನೇ ಆಗಿದ್ದರೂ, ಅದಕ್ಕೆ ಅವರೇ ಕಾರಣ ಎಂದು ಬಲವಾಗಿ ನಂಬಿದ್ದ. ಹಾಗಿರುವಾಗ ತಾನು



ಆಗ ನಾವು ದೇಶ ಬಿಟ್ಟು ಹೋಗಿ ಎಂದು ಚಳವಳಿ ಮಾಡಿದೆವು. ಈಗ ನೋಡಿ, ವಿದೇಶಿಗರೇ ನಮ್ಮ ದೇಶಕ್ಕೆ ಬನ್ನಿ, ಬಂಡವಾಳ ಹೂಡಿ ಅನ್ನಿದಾರೆ.

ಅಮೆರಿಕೆಗೆ ಬರುವಾಗ ತನ್ನ ತಂದೆಯನ್ನು ಕರೆದುಕೊಂಡು ಬರಲು ಪುಸಲಾಯಿಸಿದ. ಆದರೆ ಅಶೋಕನಿಗಿದ್ದಷ್ಟು ಅಮೆರಿಕೆಯ ವ್ಯಾಮೋಹ ಅವನ ತಂದೆಗಿರಲಿಲ್ಲ. ಅವರು ಅಮೆರಿಕೆಗೆ ಬರಲು ನಿರಾಕರಿಸಿದರು. ಅದೂ ಅಲ್ಲದೆ, 'ನೋಡು ಅಶೋಕ, ನನಗೆ ಈಗ ಆರೋಗ್ಯ ಸರಿಯಾಗಿಲ್ಲ. ಯಾವ ಕ್ಷಣದಲ್ಲಿ ನನ್ನ ದೇಹದಿಂದ ಪ್ರಾಣ ಕಳಚಿಕೊಳ್ಳುತ್ತೋ ಗೊತ್ತಿಲ್ಲ. ಹಾಗಿರೋವಾಗ, ಬೇರೆ ಇನ್ನೊಂದು ನೆಲದ ಮೇಲೆ, ಬೇರೆ ಜನಗಳ ಮಧ್ಯೆ ನಾನು ಪ್ರಾಣಬಿಡೋದು ನನಗೆ ಸುತರಾಂ ಇಷ್ಟ ಇಲ್ಲ. ಸಾಯೋದಾದರೆ ನಾನು ಇಲ್ಲೇ ಸಾಯ್ತೀನಿ. ನನ್ನ ಆ ವಿಷಯದಲ್ಲಿ ಬಲವಂತ ಮಾಡಬೇಡ' ಎಂದುಬಿಟ್ಟರು ಖಡಾಖಂಡಿತವಾಗಿ.

ಅಶೋಕನೂ ಗಮನಿಸಿದ್ದ. ಅವರ ಆರೋಗ್ಯ ಕ್ಷೀಣಿಸುತ್ತಾ ಬಂದಿತ್ತು. ಏನು ಮಾಡುವುದು? ತಾನು ಅಮೆರಿಕೆಯಲ್ಲಿದ್ದರೂ, ತನ್ನ ಮನಸ್ಸು ತನ್ನ ತಂದೆಯವರ ಬಗ್ಗೆಯೇ ಯೋಚಿಸುತ್ತಿರುತ್ತದೆ. ಅವರ ಆರೋಗ್ಯದ ಬಗ್ಗೆ ಸದಾ

ಚಿಂತಿತವಾಗಿರುತ್ತದೆ. ಹಾಗಿರುವಾಗ, ತಾನು ಎಲ್ಲವನ್ನೂ ಕಿತ್ತೊಗೆದು ಅಮೆರಿಕೆಯ ಪೌರತ್ವವನ್ನು ಸ್ವೀಕರಿಸುವುದು ಸರಿಯಾಗುತ್ತದೆಯೇ? ಹೇಗೂ ಅದಕ್ಕೆ ಸಮಯವಿದೆ. ತನ್ನ ಅಪ್ಪ ಸತ್ತ ಮೇಲೆ, ತಾನು ಅಮೆರಿಕೆಯಲ್ಲಿ ನೆಲಸುವುದು ಹೇಗೂ ಇದ್ದೇ ಇದೆ.

ಅದೂ ಅಲ್ಲದೆ, ತಾನು ಈಗಲೇ ಅಮೆರಿಕೆಯ ಪೌರನಾದರೆ, ಅಪ್ಪನಿಗೆ ಪ್ರಾಣಾಂತಿಕ ಸಮಯ ಬಂದರೆ, ತಾನು ತಟ್ಟನೆ ಭಾರತಕ್ಕೆ ಹೋಗಬೇಕಾದರೆ, ಅದು ಸಾಧ್ಯವಾಗುವುದಿಲ್ಲ. ಭಾರತೀಯ ಎಂಬಾಸಿಯಿಂದ ವೀಸಾಗೆ ಕಾಯುತ್ತಾ ಕುಳಿತುಕೊಳ್ಳಬೇಕಾಗುತ್ತದೆ. ವೀಸಾ ದೊರಕಲು ಕನಿಷ್ಠಪಕ್ಷ ಹದಿನೈದು ದಿನಗಳಾದರೂ ಬೇಕು. ಆದರೆ ಭಾರತೀಯ ನಾಗರಿಕನಾಗೇ ಉಳಿದರೆ, ಯಾವ ಕ್ಷಣದಲ್ಲಿ ಬೇಕಿದ್ದರೂ, ವಿಮಾನದ ಟಿಕೆಟ್ ತೆಗೆದುಕೊಂಡು ಹಾರಬಹುದು.

ಅಶೋಕ ಲೆಕ್ಕವೇನೋ ಹಾಕಿದ. ಆದರೆ ಅಶೋಕನ ಪುಣ್ಯಕ್ಕೆ, ಅವನ ತಂದೆಯವರದು ಗಟ್ಟಿ ಜೀವವಾಯಿತು. ಆರೋಗ್ಯ ಅಷ್ಟು ಕ್ಷೀಣಿಸಿದ್ದರೂ, ಈ ಪ್ರಪಂಚವನ್ನು ಬಿಟ್ಟು ಹೋಗಲು ಅವರ ಜೀವ ಸಿದ್ಧವಿರಲಿಲ್ಲ. ಹತ್ತು ವರ್ಷಗಳ ಕಾಲದಿಂದ ಅವರು 'ಕಾಲ'ನನ್ನು ಮುಂದೂಡುತ್ತಲೇ ಬಂದಿದ್ದಾರೆ!

ಏತನ್ಮಧ್ಯೆ ಒಂದು ವಿಚಿತ್ರ ಪರಿವರ್ತನೆ ಅಶೋಕನಲ್ಲೇ ಸಂಭವಿಸಿತು. ಬಂದ ಹೊಸತರಲ್ಲಿ ಅಮೆರಿಕೆಯ ಮೇಲಿನ ಮೋಹದಲ್ಲಿ, ಅದರ ಅತೀವ ಅಭಿಮಾನದಲ್ಲಿ, ಅವನ ಮುಂದಿರುವ ಪ್ರಪಂಚವೆಲ್ಲ ಅವನಿಗೆ ಅತ್ಯಂತ ಸುಂದರವಾಗಿ ಕಂಡಿತ್ತು. ತನ್ನ ಜೀವನದಲ್ಲಿ ತಾನು ಮುಟ್ಟಬೇಕಾದ ಹಂತ ಮುಟ್ಟಿಬಿಟ್ಟಿದ್ದೇನೆ ಎಂದು ಹಿಗ್ಗಿದ್ದ. ಆದರೆ ಈ ಭಾವನೆ ಬಹಳ ದಿವಸ ಉಳಿಯಲಿಲ್ಲ. ತನ್ನ ಕಣ್ಣೆದುರಿಗೆ ಅಮೆರಿಕೆಯ ಸಮಾಜದಲ್ಲಿರುವ ವ್ಯವಹಾರವನ್ನು ನೋಡುತ್ತ ಅವನಿಗೆ ದಿಗ್ಭ್ರಮೆ ಹಿಡಿದು ಹೋಗಿತ್ತು.

ಅಮೆರಿಕನ್ನರು– ಇತಿಹಾಸವನ್ನು ನೋಡಿದ್ದೇ ಆದರೆ– ತಮ್ಮನ್ನು ತಾವು ಒಂದು ವರ್ಗವೆಂದು ಎಂದೂ ತಿಳಿದುಕೊಂಡಿಲ್ಲ. ಅನೇಕ ದೇಶಗಳಿಂದ ಬಂದವರು, ಅನೇಕ ಜಾತಿಯವರು, ಅನೇಕ ಧರ್ಮದವರು, ಅನೇಕ ಭಾಷೆಗಳನ್ನು ಮಾತನಾಡುವವರು, ಅನೇಕ ಸಂಸ್ಕೃತಿ ಹಿನ್ನೆಲೆ ಉಳ್ಳವರು– ಈ ದೊಡ್ಡ ದೇಶವನ್ನು ಸೇರಿ ಸಮೃದ್ಧಗೊಳಿಸಿದ್ದಾರೆ ಎಂದು ಅವರು ಎಲ್ಲಾ ಕಡೆ ಹೇಳುತ್ತಾರೆ, ಎಲ್ಲಾ ಕಡೆ ಬರೆಯುತ್ತಾರೆ. ಅದಲ್ಲದೆ ಅವರ ಸಂವಿಧಾನ, ನ್ಯಾಯಾಂಗಗಳಲ್ಲಿ ನೋಡಿದರೂ ಸಮಾನತೆ, ಧರ್ಮನಿರಪೇಕ್ಷ ನೀತಿ ಎದ್ದುಕಾಣುತ್ತದೆ. ಎಂತಹ ಉದಾತ್ತ ಧ್ಯೇಯ!

ಆದರೆ ವರ್ಗಭೇದವಿಲ್ಲ, ವರ್ಣಭೇದವಿಲ್ಲ ಎಂದ ನಾಡಿನಲ್ಲಿ ಈಗ ವರ್ಣಭೇದ, ವರ್ಗಭೇದ ತಾಂಡವವಾಡತೊಡಗಿತ್ತು. ಬಿಳಿಯ ತೊಗಲಿನವನು ತಾನು ಉತ್ತಮ ಎಂದು ಭಾವಿಸತೊಡಗಿದ್ದ. ತನ್ನ ಬಣ್ಣದ ಚರ್ಮದವನಲ್ಲದವನನ್ನು ತನಗಿಂತ ಕೀಳಾಗಿ ಭಾವಿಸತೊಡಗಿದ. ಸಂವಿಧಾನ ಏನೇ ಹೇಳಲಿ, ನ್ಯಾಯಾಂಗ ಏನೇ ಹೇಳಲಿ, ವ್ಯವಹಾರದಲ್ಲಿ ಈ ರೀತಿಯ ತಿರಸ್ಕಾರ ಭಾವ ಎದ್ದುಕಾಣುತ್ತಿತ್ತು. ಇಂತಹವರನ್ನು 'ಸೆಕೆಂಡ್ ಕ್ಲಾಸ್', 'ಥರ್ಡ್ ಕ್ಲಾಸ್' ನಾಗರಿಕರು ಎಂಬಂತೆ ನಡೆಸಿಕೊಳ್ಳತೊಡಗಿದರು. ಇದು ಎಲ್ಲಾ ಹಂತದಲ್ಲೂ ಬೇರೂರಿ, ಪ್ರತಿಯೊಬ್ಬರ ವ್ಯವಹಾರದಲ್ಲೂ ಸ್ಪಷ್ಟವಾಗಿ ಕಾಣುತ್ತಿತ್ತು. ಅವರ ಜೊತೆ ಮಾತನಾಡುವಾಗ ತಿರಸ್ಕಾರದಿಂದ ಮಾತನಾಡುವುದು, ಅವರ ಜೊತೆ ಸೇರುವುದಕ್ಕೆ ಹಿಂಜರಿಯುವುದು, ಅವರು ತಮ್ಮ ಪಕ್ಕದ ಮನೆಯಲ್ಲಿ ವಾಸಿಸುತ್ತಾರೆ ಎಂದು ಒಪ್ಪಿಕೊಳ್ಳಲೂ ಹಿಂಜರಿಯುವುದು, ಇದು ಎಷ್ಟು ಗಾಢವಾಗತೊಡಗಿತ್ತೆಂದರೆ, ಅಲ್ಲಿ ಹೋಗಿ ನೆಲಸಿದ್ದ ಅಸಂಖ್ಯಾತ ಜನರಿಗೆ ಈಗ ತಾವು ತಪ್ಪು ಮಾಡಿದ್ದೇವೇನೋ ಎನ್ನಿಸತೊಡಗಿತ್ತು.

ಇನ್ನು ಬೆಂಕಿಗೆ ತುಪ್ಪ ಸುರಿಯುವಂತೆ ಕೆಲವು ಭಾರತ ವಿರೋಧಿ ಸಂಘಟನೆಗಳು ತಲೆಎತ್ತಿದ್ದವು. ಬಿಳಿಯರ ಗೂಂಡಾಗಳು ಗುಂಪುಗೂಡಿಸಿ, ಕುಂಕುಮ, ಸೀರೆ ಇತ್ಯಾದಿಗಳಿಂದ ಸುಲಭವಾಗಿ ಗುರುತು ಹಿಡಿಯಬಹುದಾದ

ಭಾರತೀಯ ಮಹಿಳೆಯರ ಮೇಲೆ ಧಾಳಿ ನಡೆಸಿ, ಅವರನ್ನು ಘಾಸಿಗೊಳಿಸಿ, ಕೆಲವರ ಮೇಲೆ ಅತ್ಯಾಚಾರವನ್ನೂ ನಡೆಸಿ, 'ನೀವು ಅಮೆರಿಕೆ ಯನ್ನು ಬಿಟ್ಟು ತೊಲಗಿ' ಎಂದು ಘೋಷಣೆ ಯನ್ನು ಕೂಗಿದ್ದರು.

ಹಾಗೆ ನೋಡಿದರೆ, ಭಾರತೀಯ ಸಮಾಜ ಇಂತಹ ಗುಪ್ತ ಹೆದರಿಕೆಯಿಂದಲೋ ಏನೋ ಅಂತೂ ಇಲ್ಲಿಯ ಜನರ ಜೊತೆ ಸಂಪರ್ಕ ವಿದ್ದರೂ ಅವರನ್ನು ಮದುವೆಯಾಗುವುದು, ಅಥವಾ ಅವರಿಗೆ ಮದುವೆಗೆಂದು ಮಕ್ಕಳನ್ನು ಕೊಡುವುದನ್ನೂ ಮಾಡಲು ಹೋಗಿರಲಿಲ್ಲ. ಆ ದೃಷ್ಟಿಯಿಂದ ಭಾರತೀಯ ಸಮಾಜವನ್ನು ಸಾಂಪ್ರದಾಯಿಕ ನುಡಿಕಟ್ಟಿನಲ್ಲೇ ಉಳಿದುಬಂದ ಸಮಾಜ ಎಂದು ಹೇಳಬಹುದಾಗಿತ್ತು.

ಇದೆಲ್ಲ ಅಶೋಕನ ಮನಸ್ಸಿನಲ್ಲಿ ಭಾರಿ ಪರಿವರ್ತನೆಯನ್ನು ಉಂಟುಮಾಡಿತ್ತು. ಅವನು ಮೊದಲು ಅಮೆರಿಕೆಯಲ್ಲೇ ನೆಲಸುತ್ತೇನೆ ಎಂದು ನಿರ್ಧರಿಸಿದ್ದವನು, ಈಗ ಅದರ ಬಗ್ಗೆ ದೀರ್ಘವಾಗಿ ಆಲೋಚಿಸತೊಡಗಿದ. ತನ್ನ ಸುತ್ತಮುತ್ತಲಿದ್ದ ಭಾರತೀಯ ಗೆಳೆಯರನ್ನು, ಅವರ ಸಂಸಾರಗಳನ್ನು ಸೂಕ್ಷ್ಮವಾಗಿ ಅವಲೋಕಿಸತೊಡಗಿದ. ಅವರ ಮನಸ್ಸಿನಲ್ಲಿ, ಅವರ ಮನೆಗಳಲ್ಲಿ ನಡೆದಿರುವ ಆಂದೋಲನ ವನ್ನು ತಿಳಿದುಕೊಳ್ಳತೊಡಗಿದ.

ಹಾಗಾಗಿ ಅವನ ಮಾತೃಸಂಸ್ಥೆಯವರು ಕೆಲವು ದಿನಗಳ ನಂತರ ಅವನನ್ನು ಅಮೆರಿಕೆಯ ಪೌರತ್ವವನ್ನು ಪಡೆಯಲು ಕೇಳಿಕೊಂಡಾಗ, ಅದನ್ನು ತನ್ನ ಕಿವಿಯ ಮೇಲೆ ಹಾಕಿಕೊಳ್ಳದ ಹಾಗೆ ಇದ್ದ ಅಶೋಕ. ಒಂದು ದಿನ ಅವನ ಬಾಸ್ ಅವನನ್ನು ಕರೆದು,

'ಅಶೋಕ್, ಮೈ ಡಿಯರ್ ಬಾಯ್, ನೀನು ಬಹಳ ಬುದ್ಧಿವಂತ. ಈ ಕೆಲಸದಲ್ಲಿ ನೀನು ತುಂಬಾ ಚಾಣಾಕ್ಷ, ಒಪ್ಪುತ್ತೇನೆ. ಆದರೆ ಈಗ ನಾವು ತೆಗೆದುಕೊಳ್ಳುತ್ತಿರುವ ಯೋಜನೆಗಳು ಅಮೆರಿಕೆಯ ರಕ್ಷಣಾದೃಷ್ಟಿಯಿಂದ ಬಹಳ ಮುಖ್ಯವಾದವು. ಅದರಲ್ಲಿ ಕೆಲಸ ಮಾಡು ವವರೆಲ್ಲ ಅಮೆರಿಕನ್ನರೇ ಆಗಿರಬೇಕು ಎಂಬ ನಿಯಮವಿದೆ. ಹಾಗಾಗಿ ನೀನು ಈ ಕೂಡಲೇ

> ಈ ಕಥಾವಸ್ತುವನ್ನು ಯಾವ ವರ್ಗಕ್ಕೆ ಸೇರಿಸಬೇಕಾಗಬಹುದೆಂಬ ಸಮಸ್ಯೆ ಬರಬಹುದು, ಇದರಲ್ಲಿ ಸ್ವಲ್ಪ ಮಟ್ಟಿಗೆ ವಿಜ್ಞಾನವಿದೆ, ಸ್ವಲ್ಪಮಟ್ಟಿಗೆ ಸಸ್ಪೆನ್ಸ್ ಇದೆ, ಸ್ವಲ್ಪ ಮಟ್ಟಿಗೆ ಇತಿಹಾಸವೂ ಇದೆ. ಆದರೆ ಕಥೆ ಯಲ್ಲಿ ಧಾರೆಯಾಗಿ ಸಾಮಾಜಿಕ ಸಮಸ್ಯೆಯೊಂದರ ಚಿತ್ರಣ ಮಾಡುವ ಪ್ರಯತ್ನ ಎದ್ದುಕಾಣಬಹುದು.
>
> ತುಷಾರ ಓದುಗರು ಇದನ್ನು ಮೆಚ್ಚುತ್ತಾರೆ ಎಂದು ಭಾವಿಸುತ್ತೇನೆ.
>
> ● 'ಮನು'

ಅಮೆರಿಕೆಯ ನಾಗರಿಕನಾದರೆ, ನಾನು ನಿನ್ನ ಕೆಲಸವನ್ನು ಉಳಿಸಿಕೊಳ್ಳಬಹುದು. ಇಲ್ಲ ವಾದರೆ ಕಷ್ಟವಾಗುತ್ತದೆ... ಯೋಚಿಸಿ ನೋಡು...' ಎಂದರು.

ಅಶೋಕ ಯೋಚಿಸಲು ಹೋಗಲೇ ಇಲ್ಲ. 'ಗುಡ್‌ಬೈ ಬಾಸ್' ಎಂದು ಹೇಳಿ ಬಂದವನು ಮತ್ತೆ ಆ ಕಡೆ ಹೋಗಲಿಲ್ಲ. ಬಾಸ್‌ಗೆ ಅವನ ವ್ಯವಹಾರದಿಂದ ಕಿರಿಕಿರಿಯಾಯಿತು. ಅವಸರ ದಲ್ಲಿ ಹಾಗೆ ಮಾತನಾಡಿ ಹೋಗಿದ್ದರೂ ನಂತರ ಬಂದು ಪಶ್ಚಾತ್ತಾಪದ ಮಾತನಾಡಿ, ತನ್ನನ್ನು ವಾಪಸ್ಸು ತೆಗೆದುಕೊಳ್ಳಲು ಕೇಳುತ್ತಾನೆ ಎಂದುಕೊಂಡರು. ಅಶೋಕನಿಗೆ ಬುದ್ಧಿ ಕಲಿಸ ಬೇಕು ಎಂದುಕೊಂಡು, ಆ ಕೆಲಸಕ್ಕೆ ಸೂಕ್ತವಾದ ಮತ್ತೊಬ್ಬ ತಂತ್ರಜ್ಞನನ್ನು ಹುಡುಕಲು ಹೊರಟರು. ಆರು ತಿಂಗಳ ಕಾಲ ಅವರು ಸುತ್ತಾಡಿದರು... ಒಂದಲ್ಲ, ಆರು ತಿಂಗಳ ಕಾಲ... ಅಶೋಕನಂತಹ ಬುದ್ಧಿವಂತನನ್ನು, ಅವನದೇ ರೀತಿಯ ಕೆಲಸ ಮಾಡಬಲ್ಲ ಚಾಣಾಕ್ಷ ವ್ಯಕ್ತಿಯನ್ನು...

ಕಡೆಯಲ್ಲಿ, ತಮ್ಮ ಯೋಜನೆಗೆ ಧಕ್ಕೆ ತಗಲು ತ್ತಿದೆ ಎಂದಾಗ ಅವರು ಶರಣಾಗತರಾಗಿ, ಮೇಲಕ್ಕೆ ವರದಿ ಒಪ್ಪಿಸಲೇ ಬೇಕಾಯಿತು– 'ಈ




ನೀವ್ಹೇನೆ ಹೇಳಿ ಸಾಂತಮ್ಮ...! ಅವರು ವ್ಯಂಗಚಿತ್ರಕಾರರಾದ್ದರಿಂದ್ಲೆ ನಿನ್ನನ್ನು ಲಗ್ನ ವಾದದ್ದು...!!

ಕೆಲಸಕ್ಕೆ ಇವನೇ ಸರಿ. ಇವನಿಗೆ ಬದಲು ಹುಡುಕಲು ತಾನು ಮಾಡಿದ ಪ್ರಯತ್ನವೆಲ್ಲ ವಿಫಲವಾಯಿತು. ನಾಸಾ ತನ್ನ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಲೇಬೇಕೆಂದರೆ, ಯೋಜನೆಗೆ ಹೊಡೆತ ಬೀಳುತ್ತದೆ. ಹಾಗಾಗಿ ಈ ನಿಯಮದಿಂದ ಅಶೋಕನಿಗೆ ವಿನಾಯಿತಿ ಬೇಕು.'

ಆ ವೇಳೆಗೆ ಅಶೋಕ ಬೇರೊಂದು ಕಾರ್ಖಾನೆಯಲ್ಲಿ ಮೆಟಲರ್ಜಿಕಲ್ ಹೊಣೆ ಹೊತ್ತು ಕೆಲಸ ಆರಂಭಿಸಿದ್ದ. ಅವನ ಮನೆಯ ಬಾಗಿಲಿಗೆ ಮತ್ತೆ ಕರೆ ಹೋಯಿತು. ಬಾಸ್‌ನಿಂದ ಅವನಿಗೆ ನೇರ ಟೆಲಿಫೋನ್ ಕರೆ ಹೋಯಿತು.

'ಮೈ ಡಿಯರ್ ಬಾಯ್, ಆದದ್ದೆಲ್ಲಾ ಮರೆತುಬಿಡು. ನೀನು ಬಂದು ಬೇಗ ಸೇರಿಕೋ. ನೀನಲ್ಲದೆ, ನನ್ನ ಯೋಜನೆಯ ಕೆಲಸ ಮುಂದಕ್ಕೆ ಹೋಗ್ತಾನೇ ಇಲ್ಲ...'

ಅಶೋಕ ತನ್ನ ಕಥೆಯನ್ನು ಹೇಳಿ ಮುಗಿಸಿದಾಗ, ನಾನು ಏನೂ ಪ್ರತಿಕ್ರಿಯೆ ವ್ಯಕ್ತಪಡಿಸಲಿಲ್ಲ. ನಾನು ಕೇವಲ ಅವನ ಮುಖವನ್ನು ನೋಡುತ್ತಾ ಕುಳಿತೆ. ಅವನು ಮಾತನ್ನೆಲ್ಲ ಆಡಿದ ಮೇಲೆ, ತಾನೇ ನಗುತ್ತ,

'ನನ್ನನ್ನು ಕಂಡು ನಿನಗೆ ಮರುಕ ಬರುತ್ತಿರಬೇಕಲ್ಲವೇ?' ಎಂದು ಕೇಳಿದ.

'ಇಲ್ಲ ಅಶೋಕ... ಇಲ್ಲ... ಇಲ್ಲಿ ಮರುಕದ ಪ್ರಶ್ನೆಯೇ ಇಲ್ಲ. ನೀನು ಒಂದು ಗುರಿಯನ್ನು ನಿನ್ನ ಜೀವನದಲ್ಲಿ ಕಣ್ಣ ಮುಂದೆ ಇಟ್ಟುಕೊಂಡಿದ್ದೆ. ಅದನ್ನು ಬಿಡದೆ ಸಾಧಿಸಿದೆ. ಅದನ್ನು ಸಾಧಿಸಿದ ಮೇಲೆ, ಅದರಲ್ಲಿರುವ ಹುಳುಕನ್ನು ನೋಡುವ ಧೈರ್ಯ ನಿನ್ನಲ್ಲಿ ಉಳಿದುಬಂದಿತು. ಅದನ್ನು ನಿನ್ನ ದೊಡ್ಡತನ ಎಂದೇ ನಾನು ಕರೆಯುವುದು. ನೀನೇನೋ ಈ ಮಾತು ಹೇಳುತ್ತಿದ್ದೀಯ. ಆದರೆ ಅನೇಕರು ಈ ಮಾತನ್ನು ಒಪ್ಪಿಕೊಳ್ಳುವುದಿಲ್ಲ. ಇಲ್ಲಿಯ ಅಸಮಾನತೆಯನ್ನು ಅವರು ನೋಡಲು ನಿರಾಕರಿಸುತ್ತಾರೆ. ಅವರ ಕಣ್ಣ ಮುಂದೆ ಇರುವ ಪರದೆ ಇನ್ನೂ ಹರಿದಿಲ್ಲ... ಅದಿನ್ನೂ ಅವರಿಗೆ ಸುಂದರ ದೃಶ್ಯವನ್ನು ತೋರಿಸುತ್ತಲೇ ಇದೆ' ಎಂದೆ.

ಅವನು ನಕ್ಕುಬಿಟ್ಟ.

'ಆನಂದ, ಎಲ್ಲಾ ದೂರದ ಬೆಟ್ಟ... ಎಲ್ಲಾ ದೂರದ ಬೆಟ್ಟ...' ಎಂದ ಮಾತನ್ನು ಪುನರುಚ್ಚರಿಸಿದ.

ಇವನು ಈ ಪದ ಉಪಯೋಗಿಸಿದಾಗ ನನಗೆ ತಟ್ಟನೆ ನೆನಪಾದದ್ದು – ವಿಜಯ. ಅವನೂ ಹೀಗೆ ಒಮ್ಮೆ ಇಂತಹದೇ ಮಾತನಾಡಿದ್ದ. ಆದರೆ, ಅವನು ಭಾರತದ ನೆಲದ ಮೇಲೆ ಈ ಮಾತನಾಡಿದ್ದ. ಅವನೂ ಇದೇ ಊರಿನಲ್ಲಿ ನೆಲಸಿರುವುದು ನೆನಪಿಗೆ ಬಂದಿತು. ರಜೆ ಕಳೆಯಲು ಭಾರತಕ್ಕೆ ಬಂದಾಗ ಅವನು ನನ್ನನ್ನು ಕಂಡಿದ್ದ. ನಮ್ಮಿಬ್ಬರ ಮಾತುಕತೆ ಎಲ್ಲಾ ವಿಷಯಗಳನ್ನು ಸುತ್ತುಹಾಕಿ ಬಂದಿತ್ತು. ಮಾತಿನ ಮಧ್ಯೆ ಅವನೂ ಇದೇ ಪದವನ್ನು ಉಪಯೋಗಿಸಿದ್ದ... ಒಂದು ಬಾರಿಯಲ್ಲ... ಎರಡು ಬಾರಿ...

'ಅಶೋಕ, ನಿನಗೆ ವಿಜಯನ ಜ್ಞಾಪಕ ಇದೆ ಅಲ್ಲವೇ? ಅವನೂ ನಿನ್ನ ಹಾಗೆ ಬುದ್ಧಿವಂತ... ತುಂಬಾ ಬುದ್ಧಿವಂತ... ಇಲ್ಲೇ ಒಹಾಯೋದಲ್ಲೇ ಇದ್ದಾನೆ... ಆದರೆ ಅವನು ಆರಿಸಿಕೊಂಡ ಕ್ಷೇತ್ರ ಬೇರೆ ಅಷ್ಟೇ... ಅಣುವಿಜ್ಞಾನ...'

'ಅರೆ, ವಿಜಯನ ಸಮಾಚಾರ ನನ್ನನ್ನು ಕೇಳ್ತೀಯಾ? ಅವನನ್ನು ಆಗಾಗ್ಗೆ ನೋಡ್ತಾ ಇರ್ತೀನಿ. ಆದರೆ ಇತ್ತೀಚೆಗೆ ಅವನನ್ನು ನೋಡಿ ತುಂಬಾ... ಅಂದರೆ ತುಂಬಾ... ದಿನಗಳೇ

ಆಯಿತು. ಅವನೂ ಅಷ್ಟೇ. ಇಲ್ಲಿ ತುಂಬಾ ದೊಡ್ಡ ಹೆಸರು ಮಾಡಿದ್ದಾನೆ... ಅಣುವಿಜ್ಞಾನ ದಲ್ಲಿ... ಅದರ ತಂತ್ರಜ್ಞಾನದಲ್ಲಿ...'

'ಅವನು ನಾನು ಚಡ್ಡಿಗೆಳೆಯರು... ತುಂಬಾ ಆತ್ಮೀಯ ಗೆಳೆಯರು... ಅವನನ್ನು ಭೇಟಿ ಯಾಗಲೇಬೇಕಲ್ಲ... ನನ್ನ ಹತ್ತಿರ ಅವನ ವಿಳಾಸ ಇದೆ...'

'ವಿಳಾಸ ನಿನ್ನ ಹತ್ತಿರಾನೇ ಇಟ್ಟುಕೋ. ನಿನಗೆ ಅವನ ಮನೆಗೆ ಯಾವಾಗ ಹೋಗಬೇಕು ಅನ್ನಿಸುತ್ತೆ, ಆವಾಗ ಹೇಳು. ಅಲ್ಲಿಗೆ ಕರೆದು ಕೊಂಡು ಹೋಗೋ ಜವಾಬ್ದಾರಿ ನನ್ನದು.'

ಅಲ್ಲಿಂದ ಅಶೋಕನೇ ನನ್ನನ್ನು ಕರೆದು ಕೊಂಡು ಹೋಟೇಲಿನಲ್ಲಿ ಬಿಟ್ಟು ಮುಂದಕ್ಕೆ ಹೋದ. ನಾನು ಮಾರನೇ ದಿನ ಸಂಜೆ ಅವನನ್ನು ನನ್ನಲ್ಲಿಗೆ ಬರಲು ಹೇಳಿದೆ.

* * *

ಬೆಳಿಗ್ಗೆಯಿಂದ ಸಂಜೆಯವರೆಗೆ ಹೋಗ ಬೇಕಾದ ಕಡೆ ಹೋಗಿ, ನೋಡಬೇಕಾದ್ದನ್ನು ನೋಡಿ, ಮಾತನಾಡಿಸಬೇಕಾದ್ದವರನ್ನು ಮಾತ ನಾಡಿಸಿ, ಮೊದಲ ದಿನದ ಸುಸ್ತನ್ನು ಪರಿಹರಿಸಿ ಕೊಳ್ಳಲು ವಾಪಸ್ಸು ಹೋಟೇಲಿನ ರೂಮಿಗೆ ಬಂದು ಸ್ನಾನ ಮಾಡಿಕೊಂಡು ಸಿದ್ಧವಾಗುವು ದಿಕ್ಕಿಲ್ಲ, ಅಶೋಕ ಬಂದಿಳಿದ.

'ಸಿದ್ಧವಾಗಿದ್ದೀಯೇನೋ?' ಎಂದು ಬರುತ್ತಿದ್ದಂತೆ ಕೇಳಿದ.

ಆವತ್ತು ಮಧ್ಯಾಹ್ನ ಅವನಿಗೆ ಫೋನ್ ಮಾಡಿದ್ದೆ. ಮಾಡಿ ಹೇಳಿದ್ದೆ, ಈವತ್ತು ಸಂಜೆಯೇ ವಿಜಯನ ಮನೆಗೇ ಹೋಗೋಣ ಅಂತ.

'ಓಹೋ, ಸಿದ್ಧವಾಗಿದ್ದೀನಿ' ಎಂದೆ.

'ಈವತ್ತು ಹೇಗೆ ಕಳೀತು ನಿನ್ನ ಕೆಲಸ?' ಎಂದು ಕೇಳಿದ.

ನಾನು ನನ್ನ ಓಡಾಟದ ಬಗ್ಗೆ, ನನ್ನ ಆಸಕ್ತಿಯ ಬಗ್ಗೆ, ನನ್ನ ತಾಂತ್ರಿಕ ಕ್ಷೇತ್ರದ ಬಗ್ಗೆ ಅವನಿಗೆ ತಿಳಿಸತೊಡಗಿದೆ.

ನಂತರ, 'ವಿಜಯನ ಅಡ್ರೆಸ್ ಇಲ್ಲಿದೆ ನೋಡು' ಎಂದು ನನ್ನ ವಿಳಾಸದ ಪುಸ್ತಕದಲ್ಲಿ ಬರೆದಿಟ್ಟಿದ್ದ ಅವನ ವಿಳಾಸವನ್ನು ತೋರಿಸಿದೆ.



ಮುದುಕನಾಗಿಬಿಟ್ಟೆ – ಅಂತ ಕೊರಗುತ್ತಿದ್ದವರು ಇತ್ತೀಚಿನ 'ರಾಷ್ಟ್ರಪತಿ ಚುನಾವಣೆ'ಯ ನಂತರ ಗೆಲುವಾಗಿದ್ದಾರೆ!

ಅವನು ಅದನ್ನು ನೋಡಿ ತಲೆಯಾಡಿಸಿದ.

'ಹೌದು, ನಾವು ಅಲ್ಲಿಗೇ ಹೋಗುವುದು. ವಿಜಯನ ಮನೆ ಇಲ್ಲಿಂದ ಹದಿನೈದು ಕಿಲೋ ಮೀಟರ್ ದೂರವಾಗುತ್ತೆ. ಈ ಊರಿನಲ್ಲಿರುವ ದೂರಗಳ ಲೆಕ್ಕ ತೆಗೆದುಕೊಂಡರೆ, ಇದು ತೀರಾ ಹತ್ತಿರವಾದಂತೆಯೇ... ಹುಂ... ನಡಿ... ನಾನು ನನ್ನ ಕಾರನ್ನೇ ತಂದಿದ್ದೀನಿ' ಎಂದ.

ಈವತ್ತು ಅವನು ಬೇರೆ ಇನ್ನೊಂದು ಕಾರನ್ನೂ ತಂದಿದ್ದ. ನಿನ್ನೆ ತಂದ ಕಾರಿಗಿಂತ ಚೆನ್ನಾಗಿತ್ತು. ಅಮೆರಿಕೆಯಲ್ಲಿ ಒಬ್ಬ ವ್ಯಕ್ತಿ ಎರಡು–ಮೂರು ಕಾರನ್ನು ಹೊಂದಿರುವುದು ಸರ್ವೇಸಾಮಾನ್ಯ ವಿಷಯವಾಗಿತ್ತು.

ಹದಿನೈದು ನಿಮಿಷಗಳ ಕಾಲ ನಾನು ಮೌನ ವಹಿಸಿದ್ದೆ ಎಂದು ಹೇಳಬೇಕು. ದಾರಿ ಯುದ್ದಕ್ಕೂ ಅಶೋಕನೇ ಮಾತನಾಡುತ್ತಿದ್ದ. ಅವನು 'ಆನಂದ...' ಎಂದು ಏನಾದರೂ ಹೇಳಿದಾಗ 'ಹಾಂ' 'ಹೂಂ' ಎಂದುಬಿಡುತ್ತಿದ್ದೆ. ನನ್ನ ಮನಸ್ಸಿನ ತುಂಬ ವಿಜಯ ತುಂಬಿಕೊಂಡು ಬಿಟ್ಟಿದ್ದ.

ವಿಜಯನೂ ಸಹ ಅಶೋಕನಷ್ಟೇ ಬುದ್ಧಿ ವಂತನಾಗಿದ್ದ. ಆದರೆ ಅವನೆಂದೂ ಅಮೆರಿಕೆಯ

ಬಗ್ಗೆ ಯೋಚಿಸಿದ್ದಾಗಲೀ, ಅಮೆರಿಕೆಗೆ ಬರಬೇಕು ಎಂದು ಹೇಳಿದ್ದಾಗಲೀ ನನಗಂತೂ ನೆನಪಿಲ್ಲ. ಅವನಿಗೆ ಇಲ್ಲಿಯ ನೆಲದ ಆಕರ್ಷಣೆ ಯಿದೆ ಎಂದು ನನಗೆ ಊಹಿಸಲೂ ಆಗಿರಲಿಲ್ಲ.

ಆದರೆ ಅವನು ಇತ್ತೀಚೆಗೆ– ಅಂದರೆ ಮೂರು ವರ್ಷದ ಕೆಳಗೆ– ಊರಿಗೆ ಬಂದಿದ್ದಾಗ, ನನ್ನೊಡನೆ ಮಾತನಾಡಿದಾಗಲೇ ನಿಜ ಏನು ಎಂದು ಗೊತ್ತಾಗಿತ್ತು. ಅವನ ಮಾತನ್ನು ಕೇಳಿ ಏನು ಹೇಳಬೇಕೆಂದು ನನಗೆ ಆ ಕ್ಷಣದಲ್ಲಿ ತೋಚಿರಲಿಲ್ಲ.

ವಿಜಯ ರ್‍ಯಾಂಕ್ ವಿದ್ಯಾರ್ಥಿ. ರ್‍ಯಾಂಕ್ ಪಡೆದು, ಕೆಲಸಕ್ಕೆ ಅಲ್ಲಿ ಇಲ್ಲಿ ಅರ್ಜಿ ಹಾಕುತ್ತಾ ಭಾರತದಲ್ಲೇ ಉಳಿದ. ಅವನಿಗೆ ಬಹಳ ಸೂಕ್ತ ವಾದ ಕೆಲಸ ಸಿಗುವುದು ಕಷ್ಟ ಎಂದು ನನಗೆ ಗೊತ್ತಿತ್ತು. ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ– ಎಷ್ಟು ಕೆಲಸ ಕೊಟ್ಟರೂ ಸಾಲದು ಅವನಿಗೆ. ಅಂತೂ ಇಂತೂ ಸರಕಾರದ ಸಂಶೋಧನಾಲಯ ಒಂದರಲ್ಲಿ ಇವನು ಅರ್ಜಿ ಹಾಕಿದಾಗ, ಇವನಿಗೆ ಕರೆ ಹೋಯಿತು. ಇವನನ್ನು ಸಂದರ್ಶಿಸಿದ ವ್ಯಕ್ತಿ ಇವನನ್ನು ಮೇಲಿಂದ ಕೆಳಗಿನವರೆಗೆ ನೋಡಿ, 'ಹೂಂ, ಟೆಂಪರರಿ ಮಾಡ್ತೀರೇನ್ರಿ' ಎಂದು ಕೇಳಿದ್ದರು! ಅವನಿಗೆ 'ಟೆಂಪರರಿ'ಯ ಭಯವಿರಲಿಲ್ಲ. ಆದರೆ ಮತ್ತೆ ತನಗೆ ಕೆಲಸ ಮಾಡುವ ಅವಕಾಶ ಸಿಗುತ್ತದೆಯೇ ಎಂದು ಕೇಳಿದ. ಆ ಮಹಾನು ಭಾವರು, 'ನೋಡೋಣ, ಅವಕಾಶವಾದಾಗ ನೋಡೋಣ' ಎಂದರು.

ಆ ಅವಕಾಶ ಅವನು ಎರಡು ವರ್ಷ ಕಾದರೂ ಬರಲಿಲ್ಲ. ತನ್ನ ಬುದ್ಧಿಮತ್ತೆ ನಷ್ಟವಾಗುತ್ತಿದೆ ಎಂದು ಅವನಿಗೆ ಅನ್ನಿಸಿತು. ಅದೂ ಅಲ್ಲದೆ, ಇಲ್ಲಿ ಅವನನ್ನು ಅವರು ಸರಿಯಾಗಿ ಉಪ ಯೋಗಿಸಿಕೊಳ್ಳುತ್ತಿರಲಿಲ್ಲ. ತಾನಾಗಿ ಮುಂದು ವರೆದು ಏನಾದರೂ ಕೆಲಸ ಮಾಡಲು ಹೋದರೆ, 'ನಿಮಗೆ ಯಾಕ್ರೀ ಈ ಉಸಾಬರೀ; ಅಧಿಕಪ್ರಸಂಗಿತನ ತೋರಿಸಬೇಡಿ' ಎಂದು ಅವರು ಬೈದು ಕಳಿಸಿದ್ದರು.

ಎರಡು ವರ್ಷದ ನಂತರ ಅವನಿಗಿಂತ ಜ್ಯೂನಿಯರ್ ಆಗಿದ್ದವನು, ಪಾಸ್‌ಮಾರ್ಕ್ ತೆಗೆದಿದ್ದವನು, ಸರಕಾರದ ನೀತಿಯ ಆಧಾರದ ಮೇಲೆ ವಿಜಯನನ್ನು ಮೀರಿಸಿ, 'ಪರ್ಮನೆಂಟ್' ಕೆಲಸ ಸಂಪಾದಿಸಿದ್ದ!

ಇನ್ನು ತನಗೆ ಇಲ್ಲಿ ಅವಕಾಶವಿಲ್ಲ ಎಂದು ಅವನಿಗೆ ಖಾತರಿಯಾಯಿತು. ಅವನು ಅಮೆರಿಕೆಯ ಒಹಾಯೋದ ಅಣುಶಕ್ತಿ ಕೇಂದ್ರದ ಸಂಶೋಧನಾಲಯಕ್ಕೆ ಅರ್ಜಿ ಹಾಕುವುದಕ್ಕಿಲ್ಲ, ಇವನ ಅರ್ಜಿಗೇ ಕಾದಿರುವಂತೆ, ಆ ಸಂಸ್ಥೆ ಯವರು ಅವನನ್ನು ಮರು ವಿಮಾನದಲ್ಲಿ ಕರೆಸಿಕೊಂಡುಬಿಟ್ಟರು.

ಅಲ್ಲಿಂದ ಮುಂದಕ್ಕೆ ಅವನು ಹಂತ ಹಂತವಾಗಿ ಮೇಲಕ್ಕೆ ಬಂದಿದ್ದ. ಅವನಿಗೆ ಮದುವೆಯೂ ಆಗಿತ್ತು. ಹೆಂಡತಿಯನ್ನೂ, ಹುಟ್ಟಿದ ಮಗುವನ್ನೂ ಇಲ್ಲಿಗೆ ಕರೆತಂದಿದ್ದ. ಆದರೆ, ಮನಸ್ಸಿನಲ್ಲಿ ಅಮೆರಿಕೆಯ ಬಗ್ಗೆ ಏನು ಅಭಿಪ್ರಾಯವಿತ್ತು ಎಂಬ ಬಗ್ಗೆ, ಅಶೋಕನಷ್ಟು ಸ್ಪಷ್ಟವಾಗಿಯಲ್ಲದಿದ್ದರೂ, ಎರಡು ಬಾರಿ ಮಾತಿನ ಮಧ್ಯೆ 'ದೂರದ ಬೆಟ್ಟ... ಆನಂದ... ದೂರದ ಬೆಟ್ಟ...' ಎಂದಿದ್ದ.

ವಿಜಯನ ಆಲೋಚನೆಯಲ್ಲಿ ಮಗ್ನನಾಗಿದ್ದ ನನಗೆ ಹದಿನೈದು ನಿಮಿಷಗಳಾಗಲೀ, ಹದಿನೈದು ಕಿಲೋಮೀಟರ್‌ಗಳಾಗಲೀ ಕಳೆದದ್ದು ಗೊತ್ತೇ ಆಗಲಿಲ್ಲ. 'ವಿಜಯನ ಮನೆ ಬಂತು ಕಣೋ' ಎಂದು ಅಶೋಕ ಎಚ್ಚರಿಸಿದಾಗಲೇ ನನಗೆ ಅತ್ತಿತ್ತ ನೋಡುವ ಹಾಗೆ ಆಯಿತು.

ಅನೇಕ ಭಾರತೀಯರಂತೆ, ವಿಜಯನೂ ತಾನೊಂದು ಫ್ಲಾಟನ್ನು ಕೊಂಡುಕೊಂಡಿದ್ದ. ಈ ಕೆಲವು ವರ್ಷಗಳ ದುಡಿಮೆಯಿಂದ ಬಂದ ಹಣ ವನ್ನು ಹಾಕಿ, ಈ ಫ್ಲಾಟನ್ನು ಕೊಂಡುಕೊಳ್ಳು ವುದು ಅವನಿಗೆ ಸಾಧ್ಯವಾಗಿತ್ತು. ಕೆಲವು ಭಾರತೀಯರು– ಅದರಲ್ಲೂ ವೈದ್ಯ ವೃತ್ತಿ ಯಲ್ಲಿರುವವರು– ಅಮೆರಿಕನ್ನರಿಗಿಂತ ಹೆಚ್ಚು ಸಂಪಾದಿಸುತ್ತ, ಊರ ಹೊರಗೆ ವಿಶಾಲವಾದ ಜಾಗಗಳಲ್ಲಿ ಸೊಗಸಾದ ಬಂಗಲೆಗಳನ್ನು ಕಟ್ಟಿಸಿಕೊಂಡಿದ್ದರು. ಆದರೆ ವಿಜಯ ಅಷ್ಟೇನೂ ಶ್ರೀಮಂತನಾಗಿರಲಿಲ್ಲ. ಅಶೋಕನೂ ಅಷ್ಟೇ.

ಬಹು ಅಂತಸ್ತಿನ ಕಟ್ಟಡದ ಕೆಳಗೆ ಕಾರನ್ನು ಪಾರ್ಕ್ ಮಾಡಿ, ಲಿಫ್ಟ್ ಮೂಲಕ ಮೇಲಕ್ಕೆ

ಹತ್ತನೇ ಅಂತಸ್ತಿನಲ್ಲಿದ್ದ ವಿಜಯನ ಫ್ಲಾಟಿನ ವರೆಗೆ ಬಂದೆವು. ಲಿಫ್ಟ್‌ನಿಂದ ಕೆಲವೇ ಮೀಟರ್‌ಗಳ ದೂರದಲ್ಲಿ ಅವನ ಫ್ಲಾಟ್ ಇದ್ದಿತು. ಅಶೋಕ ಬಾಗಿಲ ಪಕ್ಕದಲ್ಲಿದ್ದ ಕಾಲಿಂಗ್ ಬೆಲ್ ಒತ್ತಿದ.

ಎರಡು ನಿಮಿಷಗಳ ನಂತರ ಒಳಗಡೆಯಿಂದ ಯಾರೋ ಬಂದು ಇಣಕಿ ನೋಡಿ ಒಳಗೆ ಹೋಗಿ, ಮತ್ತೆ ಬಂದು ಬಾಗಿಲು ತೆಗೆದಾಗ, ನಮ್ಮೆದುರಿಗೆ ರಾಧಾ ನಿಂತಿದ್ದಳು.

ನಾನು ವಿಜಯನ ಮದುವೆಯಲ್ಲಿ ರಾಧಾಳನ್ನು ನೋಡಿದ್ದೆ. ಅವನು ರಾಧಾಳನ್ನು ಮದುವೆ ಮಾಡಿಕೊಂಡಾಗ ಅವಳು ತೆಳ್ಳಗೆ ಬೆಳ್ಳಗೆ ಇದ್ದಳು. 'ಹೇಗಿದ್ದಾಳೋಮ್ಮ' ಎಂದು ಮೆಲ್ಲಗೆ ಬಂದು ನನ್ನನ್ನು ಕೇಳಿದ್ದ. ನನ್ನ ಬಾಯಿಂದ ಪ್ರಶಂಸೆಯ ಮಾತನ್ನು ಕೇಳ ಬಯಸಿದ್ದ ಅವನು. ಆಗ ತಾನೇ ಅವನು ಅಮೆರಿಕೆಗೆ ಹೋಗಿಯೂ ಬಂದಿದ್ದ. ಹಾಗಾಗಿ ನಾನು, 'ಹೋಗಲಿ ಬಿಡು, ನಿನ್ನ ಅಮೆರಿಕೆಯಲ್ಲಿ ಇವಳನ್ನು ಬೇರೆ ದೇಶದವಳು ಅಂತ ಗುರುತಿಸೋದಿಲ್ಲ... ಬಿಡು... ಅದೊಂದು ಅನುಕೂಲ...' ಎಂದಿದ್ದೆ. ಅವನೂ ಆ ಮಾತಿಗೆ ನಕ್ಕಿದ್ದ. ಈಗ ರಾಧಾ ಮತ್ತಷ್ಟು ಬೆಳ್ಳಗಾಗಿದ್ದು ಕಂಡಿತು. ಅದೊಂದು ರೀತಿಯ ಬಿಳುಪು... ಜೀವವಿಲ್ಲದ... ಸತ್ವವಿಲ್ಲದ ಬಿಳುಪು... ಛೆ, ಛೆ, ನಾನೇಕೋ ತುಂಬಾ ಊಹಿಸಿಕೊಳ್ಳುತ್ತಿದ್ದೇನೆ ಎಂದು ನನ್ನನ್ನೇ ತಡೆದುಕೊಂಡೆ.

'ರಾಧಾ, ಹೇಗಿದ್ದೀಯಮ್ಮಾ... ಜ್ಞಾಪಕ ಇದೆಯೇ ಇಲ್ಲವೋ... ನಾನು ವಿಜಯ ಇಬ್ಬರೂ ಒಟ್ಟಿಗೆ ಬೆಳೆದವರು... ಮದುವೇಲಿ ನೋಡಿದ್ದು... ಆಮೇಲೆ ಒಮ್ಮೆ ನಮ್ಮ ಮನೇಲಿ ನೋಡಿದ್ದು... ಹಾಗಾಗಿ...'

‘ಇಲ್ಲ… ಚೆನ್ನಾಗಿ ಜ್ಞಾಪಕ ಇದೆ… ನೀವು ಮಿ. ಆನಂದ ಅಲ್ಲವೇ?… ನಿಮ್ಮ ಬಗ್ಗೆ ಅವರು ಆವಾಗಾವಾಗ ಮಾತಾಡ್ತಾನೆ ಇರ್ತಾರೆ… ನಿಮ್ಮ ನೆನಪು ಚೆನ್ನಾಗಿಯೇ ಇದೆ’ ಎಂದಳು.

ನನಗೆ ಆಶ್ಚರ್ಯವಾಯಿತು. ನನ್ನ ಬಗ್ಗೆ ವಿಜಯ ಎಷ್ಟೇ ಮಾತಾಡಿರಬಹುದು. ಆದರೆ ರಾಧಾ ನನ್ನನ್ನು ನೋಡಿದ ತಕ್ಷಣ, ಹೆಸರನ್ನು ನೆನಪಿಸಿಕೊಂಡಿದ್ದಳು.

‘ಅಶೋಕ, ನೀನೇನಾದ್ರೂ ಫೋನ್ ಮಾಡಿದ್ದೆಯಾ?’ ಎಂದು ಅವನ ಕಡೆ ನೋಡಿದೆ.

‘ಇಲ್ಲಪ್ಪ, ನಾನು ‘ಸರ್‌ಪ್ರೈಜ್’ ಕೊಡೋಣ ಅಂತಲೇ ಹೀಗೆ ನಿನ್ನ ಏಕಾಏಕಿ ಕರೆದುಕೊಂಡು ಬಂದೆ’ ಎಂದ ಅಶೋಕ.

‘ಇದೇನು ಇಲ್ಲೇ ಮಾತಾಡ್ತಾ ನಿಂತಿರಿ. ಒಳಕ್ಕೆ ಬನ್ನಿ’ ಎಂದಳು ರಾಧಾ.

ನಾವು ಒಳಗೆ ಹೋಗಿ, ಹಾಲ್‌ನಲ್ಲಿ ಹಾಕಿದ್ದ ದೊಡ್ಡ ಸೋಫಾಗಳ ಮೇಲೆ ಆಸೀನರಾದೆವು.

ರಾಧಾ ಅಶೋಕನ ಕಡೆ ತಿರುಗಿ,

‘ನಾನು ನಿಮ್ಮನ್ನು ಭೇಟಿ ಮಾಡಿದ್ದೀನಿ… ಇದೇ ನಗರದಲ್ಲಿ… ಆದರೆ ಕ್ಷಮಿಸಿ… ತಕ್ಷಣ ಗುರುತು ಹತ್ತಲಿಲ್ಲ’ ಎಂದಳು.

‘ನಾನು ಇಲ್ಲೇ ನಾಸಾದಲ್ಲಿ ಕೆಲಸ ಮಾಡ್ತಾ ಇದ್ದೀನಿ ಮಿಸೆಸ್ ವಿಜಯಕುಮಾರ್. ವಿಜಯ, ಆನಂದ ಹಾಗೂ ನಾನು ಒಟ್ಟಿಗೇ ಓದ್ತಾ ಇದ್ದವರು…’

‘ಹೌದು, ರಾಧಾ. ಆಗೆಲ್ಲ ಓದೋದರಲ್ಲಿ ಅಶೋಕನಿಗೂ ವಿಜಯನಿಗೂ ಪೈಪೋಟಿ ಬೀಳೋದು. ಇಬ್ಬರಲ್ಲಿ ಯಾರು ಹೆಚ್ಚಿಗೆ ಅಂಕ ತಗೋತಾರೆ ಅಂತ ಬೆಟ್ಸ್ ಕಟ್ತೋವರು’ ಎಂದೆ ನಾನು ಮಾತನ್ನು ಸೇರಿಸುತ್ತ.

ಒಂದುಕ್ಷಣ ರಾಧಾಳ ಮುಖದ ಮೇಲೆ ನಗೆಯ ಛಾಯೆ ಸುಳಿದುಹೋಯಿತು.

ಇಲ್ಲಿಯವರೆಗೆ ಅವಳ ಮುಖದ ಮೇಲೆ ಇದ್ದ ನೀರಸ ಭಾವವನ್ನು ಕಂಡು ನನಗೆ ಸ್ವಲ್ಪ ಬೇಸರವೇ ಆಗಿತ್ತು. ಎಲ್ಲಾದರೂ ನಾವು ಬಂದಿರುವುದು ಅವಳಿಗೆ ಅಹಿತಕರವಾಗಿದೆಯೇ? ಹಾಗೆ ನೋಡಿದರೆ, ಅಮೆರಿಕೆಯಲ್ಲಿ ಯಾರು ಬಂದರೂ ಭಾರತೀಯರು ತುಂಬಾ ಆತ್ಮೀಯರಾಗಿ ನಡೆದುಕೊಳ್ಳುತ್ತಾರೆ ಎಂದು ಕೇಳಿದ್ದೆ. ಆದರೆ, ಇಲ್ಲಿ…?!

‘ರಾಧಾ, ನಾವು ಇಲ್ಲಿ ಮಾತಾಡ್ತಾ ಕೂತಿದ್ದೀವಿ. ಮನೆ ಯಜಮಾನನ ಪತ್ತೆ ಇಲ್ಲವಲ್ಲ. ವಿಜಯ ಎಲ್ಲಿ?’ ಎಂದು ಕೇಳಿದೆ.

ಆ ಪ್ರಶ್ನೆ ಅವಳ ಮೇಲೆ ದೊಡ್ಡ ಆಘಾತ ಮಾಡಿದಂತಾಗಿತ್ತು. ಅವಳ ಮುಖ ಕಪ್ಪಾಯಿತು. ತಲೆಯನ್ನು ಕೆಳಗೆ ಹಾಕಿದಳು. ನಿಂತಿದ್ದವಳಿಗೆ, ತನ್ನ ಭಾರವನ್ನು ಕಾಲುಗಳು ತಡೆಯಲಾರವೋ ಎಂಬಂತೆ, ಕುಸಿದು ಸೋಫಾದ ಮೇಲೆ ಕುಳಿತಳು.

‘ಯಾಕೆ ರಾಧಾ, ಏನಾಯಿತು?’ ಎಂದೆ ಸ್ವಲ್ಪ ಗಾಭರಿಯಾಗಿ.

ಅವಳು ತನ್ನ ಭಾವನೆಯನ್ನು ತಡೆಹಿಡಿಯಲು ಬಹಳ ಪ್ರಯತ್ನಿಸುತ್ತಿದ್ದಳು. ಆದರೆ ಸಾಧ್ಯವಾಗುತ್ತಿರಲಿಲ್ಲ.

‘ಸಮಾಧಾನ ಮಾಡಿಕೋಮ್ಮ… ಆಗಲಿ… ಮನಸ್ಸಿಗೆ ತೊಂದರೆಯಾಗೋದಾದರೆ ನಾನು ಏನೂ ಕೇಳೋದಿಲ್ಲ’ ಎಂದೆ ನಾನು.

ಅವಳು ತಲೆಯಲ್ಲಾಡಿಸಿದಳು. ನಂತರ ನಿಧಾನವಾಗಿ ಮಾತನಾಡ ತೊಡಗಿದಳು.

ವಿಜಯ ಕೆಲಸ ಕಾರಣವಾಗಿ ಮನೆಗೆ ವಿಳಂಬವಾಗಿ ಬರುವುದು ಸರ್ವೇಸಾಧಾರಣವಾಗಿತ್ತು. ಅದು ರಾಧಾಳಿಗೆ ಅಭ್ಯಾಸವೇ ಆಗಿತ್ತು. ವಿಜಯ ಕೆಲಸ ಮಾಡುತ್ತಿದ್ದುದು ಸಂಶೋಧನಾ ವಿಭಾಗದಲ್ಲಿ. ಹಾಗಾಗಿ ಅದಕ್ಕೆ ಯಾವುದೇ ನಿಗದಿತವಾದ ವೇಳೆ ಇರುತ್ತಿರಲಿಲ್ಲ. ಅವನಿಗೆ ಸಾಕಷ್ಟು ಸ್ವಾತಂತ್ರ್ಯವಿತ್ತು ಎಂದೋ, ಅಥವಾ ಅವನಿಗೆ ಕೆಲಸ ಮಾಡುವ ವಿಪರೀತ ಹುಚ್ಚು ಹಿಡಿದಿತ್ತೋ– ಅಂತೂ ಅವನು ವೇಳೆಯ ದೃಷ್ಟಿಯಿಂದ ತೀರಾ ಅಶಿಸ್ತಿನವನಾಗಿದ್ದ. ಹಾಗಾಗಿ ಕೆಲಸದ ತೀವ್ರತೆಯಲ್ಲಿ ಒಮ್ಮೊಮ್ಮೆ ಮನೆಗೆ ಬರುತ್ತಲೇ ಇರಲಿಲ್ಲ. ಇನ್ನು ಮನೆಗೆ ರಾಧಾಳಿಗೆ ಫೋನ್ ಮಾಡಿ ಹೇಳುವುದಕ್ಕೂ ಮರೆತುಬಿಡುತ್ತಿದ್ದ. ಅವಳೇ ಪ್ರಯೋಗಾಲಯಕ್ಕೆ ಫೋನ್ ಮಾಡಿ, ಅವನು ಅಲ್ಲೇ ಇದ್ದಾನೆ ಎಂದು ಖಾತರಿ ಮಾಡಿಕೊಳ್ಳುತ್ತಿದ್ದಳು.

ಆದರೆ ಈಗೊಂದು ವಿಚಿತ್ರವಾದ ಪರಿಸ್ಥಿತಿ ಅವಳ ಎದುರಿಗೆ ಬಂದು ನಿಂತಿತ್ತು. ವಿಜಯ ಮನೆಗೆ ಬಂದು ಒಂದು ವಾರವೇ ಆಗಿತ್ತು! ಅವಳು ಫೋನ್ ಮಾಡಿದರೆ ಯಾರೂ ಸರಿಯಾಗಿ ಉತ್ತರಿಸುತ್ತಿರಲಿಲ್ಲ. ವಿಜಯನ ಬಾಸ್ ಜೊತೆ ಮಾತನಾಡಲು ಅವಳು ಪ್ರಯತ್ನಿಸಿದ್ದಳು. ಅವರು, 'ಮಿಸೆಸ್ ಕುಮಾರ್, ನೀವು ಗಾಭರಿಯಾಗಬೇಡಿ. ಅವರೆಲ್ಲೂ ಹೋಗಿಲ್ಲ. ವಾಪಸ್ಸು ಬರುತ್ತಾರೆ' ಎಂದು ಒಮ್ಮೆ ಮಾತನಾಡಿ ಅವಳಿಗೆ ಹೇಳಿದ್ದರು. ಆದರೆ ಅವಳಿಗೆ ಈ ವಿಳಂಬ– ಒಂದು ವಾರ ಕಾಲ ಮನೆಯಿಂದ ದೂರವಿರಬೇಕಾದ ಪ್ರಸಂಗದ ಕಾರಣ– ಅರ್ಥವೇ ಆಗಿರಲಿಲ್ಲ.

'ಏನಮ್ಮಾ ರಾಧಾ, ಅವನೇನು ಕೆಲಸ ಮಾಡುತ್ತಿದ್ದ? ಮನೆಯಲ್ಲಿ ಏನಾದರೂ ಹೇಳುತ್ತಿದ್ದನೇ?' ಎಂದು ನಾನು ಕೇಳಿದೆ.

ಅವಳು ತಲೆಯಲ್ಲಾಡಿಸಿದಳು.

'ನನ್ನೊಂದಿಗೆ ಏನಾದರೂ ಈ ವಿಷಯ ಅವರು ಮಾತನಾಡುತ್ತಾರೆ ಮಿ. ಆನಂದ್. ನನ್ನ ವಿಷಯ ಮನಶ್ಶಾಸ್ತ್ರ. ಮನಶ್ಶಾಸ್ತ್ರದ ಬಗ್ಗೆ ಅವರು, ನಾನು ಕೆಲವೊಮ್ಮೆ ಚರ್ಚಿಸುತ್ತಿದ್ದೆವು, ಅಷ್ಟೆ. ಅವರ ವಿಷಯ– ಅಣುವಿಜ್ಞಾನ– ಅದರ ತಲೆಬುಡ ನನಗೆ ಗೊತ್ತಾಗುತ್ತಿರಲಿಲ್ಲ' ಎಂದಳು ಅವಳು.

'ಯಾತಕ್ಕೆ ವಿಳಂಬವಾಗುತ್ತಿತ್ತು ಎಂದೇ ನಾದರೂ ಹೇಳುತ್ತಿದ್ದನೇ?'

'ಇಲ್ಲ. ಕೆಲಸ ಎಂದುಬಿಡುತ್ತಿದ್ದರು. ತಲೆಯ ಮೇಲೆ ಆಕಾಶವೇ ಕಳಚಿಬಿದ್ದವರಂತೆ ಯಾವಾಗಲೂ ಚಿಂತಿಸುತ್ತಿದ್ದರು.'

'ಅವನ ಯೋಚಿಸುವ ರೀತಿಯಲ್ಲಿ, ದೇಹದ ಆರೋಗ್ಯದಲ್ಲಿ ಏನಾದರೂ ವ್ಯತ್ಯಾಸವಾಗಿದ್ದು ಕಂಡು ಬಂತೇನು?'

ಈ ಮಾತಿಗೆ ಏನು ಹೇಳುವುದು ಎಂದು ರಾಧ ಒಂದು ಕ್ಷಣ ಯೋಚಿಸಿದ ಹಾಗೆ ಕಂಡಿತು. ಅವಳ ಕಣ್ಣುಗಳು ಅತ್ತಿಂದಿತ್ತ ಓಡಾಡಿದವು. ನಂತರ ಏನೋ ನಿರ್ಧಾರ ಮಾಡಿದವಳಂತೆ,

'ಇಲ್ಲ. ಅಂತಹ ವ್ಯತ್ಯಾಸ ನನಗೆ ಗೊತ್ತಾಗಲಿಲ್ಲ. ನಿಮಗೇ ಗೊತ್ತಿರುವಂತೆ ಅವರು ಹಾಸ್ಯಜೀವಿ. ಎಲ್ಲರ ಜೊತೆ ನಗುತ್ತ ಮಾತಾಡುತ್ತಿರುತ್ತಾರೆ. ಆದರೆ ಈಗ ಕೆಲವು ದಿವಸಗಳಿಂದ ಸ್ವಲ್ಪ ಗಂಭೀರವಾಗಿದ್ದರು. ಕೆಲಸದ ಒತ್ತಡ ಎಂದುಕೊಂಡುಬಿಟ್ಟೆ. ಆರೋಗ್ಯದ ವಿಷಯದಲ್ಲಿ... ಉಹುಂ... ನನಗೆ ಅಂತಹ ವ್ಯತ್ಯಾಸ ಏನೂ ಕಂಡುಬರಲಿಲ್ಲ...'

ಇನ್ನೇನು ಪ್ರಶ್ನೆಗಳನ್ನು ಕೇಳುವುದು? ರಾಧಾಳಿಗೆ ಏನೂ ಗೊತ್ತಿಲ್ಲವಲ್ಲ. ವಿಜಯ ಅವಳ ಹತ್ತಿರ ಚರ್ಚಿಸುತ್ತಿರಲಿಲ್ಲ. ಹಾಗಾಗಿ ಅವಳಿಗೆ ಏನೂ ಗೊತ್ತಿಲ್ಲ. ಇಲ್ಲಿಯವರೆಗೆ ಅವಳು ಹೇಳಿದ್ದು ಸಹ ತೀರಾ ಅಸ್ಪಷ್ಟವಾಗಿತ್ತು. ಕೆಲವು ಕಡೆ– ಅವನ ಆರೋಗ್ಯದ ಪ್ರಶ್ನೆ ಬಂದಾಗ– ಅವಳು ಉತ್ತರಿಸಲು ಹಿಂದೆ ಮುಂದೆ ನೋಡಿದ್ದಳು. ಅವಳ ಪ್ರಕಾರ ಅವನು ಮಾನಸಿಕವಾಗಿ, ದೈಹಿಕವಾಗಿ ಆರೋಗ್ಯ ವಾಗಿದ್ದ.

ಹಾಗಿದ್ದರೆ ಸಮಸ್ಯೆ ಎಲ್ಲಿರಬಹುದು? ನಾನು ಅಶೋಕನ ಕಡೆ ನೋಡಿದೆ. ಅವನ ಮುಖದ ಮೇಲೂ ಪ್ರಶ್ನೆಯ ಗೆರೆಗಳು ಮೂಡಿದ್ದು

## ಮುಟ್ಟಿದರೆ ಮುನಿ

'ನಾಚಿಕೆ ಮುಳ್ಳು'
'ಮುಟ್ಟಿದರೆ ಮುನಿ'
ಎಂದೆಲ್ಲ ಕರೆಸಿಕೊಳ್ಳುವ
ನೀನು
ಮುಟ್ಟಿದರೆ ಮುದುಡುತ್ತಿ,
ನಾಚುತ್ತಿ –
ನಿನಗೆ ಪ್ರೀತಿಯೇ ಇಲ್ಲ
ವೆಂದು
ನಿನ್ನ ಬಿಟ್ಟಾಗ
ಪುನಃ ಅರಳುತ್ತಿ
ಮತ್ತೆ ಚಿಗುರುತ್ತಿ!
ಯಾಕೆ?

● ಚಂದ್ರಶೇಖರ ಪಾತೂರು

ಸ್ಪಷ್ಟವಾಗಿ ಕಂಡಿತು. ಅವನು ಯೋಚಿಸುತ್ತಿದ್ದವನು,

'ಮಿಸೆಸ್ ಕುಮಾರ್, ನೀವು ನಿಮ್ಮ ಫೋಟೋ ಆಲ್ಬಮ್ ತೋರಿಸ್ತೀರಾ? ನೋಡೋಣ ಅನ್ನಿಸ್ತಿದೆ' ಎಂದ.

'ಓಹೋ, ಖಂಡಿತ... ತರ್ತೀನಿ' ಎಂದವಳೇ ಆಲ್ಬಮ್ ತರಲು ಒಳಗೆ ಹೋದಳು.

ನಾನು ಅವನ ಕಡೆ ಪ್ರಶ್ನಾರ್ಥಕವಾಗಿ ನೋಡಿದೆ.

'ಆನಂದ, ನಾನು ಏನೂ ಹೇಳೋದಿಲ್ಲ. ನೀನೇ ಗಮನಿಸು... ಫೋಟೋಗಳನ್ನು ಸ್ವಲ್ಪ ಹುಷಾರಾಗಿ ಗಮನಿಸು... ಯಾಕೆಂದರೆ, ನಾನು ಮೊದಲು ನೋಡಿದ್ದ ವಿಜಯನಿಗೂ ಈಗಿನ ವಿಜಯನಿಗೂ ಸ್ವಲ್ಪ ವ್ಯತ್ಯಾಸ ಗಮನಿಸಿದ್ದೆ... ಅದಕ್ಕೆ...'

ಅಷ್ಟರಲ್ಲಿ ರಾಧಾ ಬರುತ್ತಿರುವ ಸೂಚನೆ ಸಿಕ್ಕಿ, ಅವನು ಮಾತನ್ನು ನಿಲ್ಲಿಸಿದ. ರಾಧಾ ಬಂದವಳೇ ಅಶೋಕನ ಕೈಗೆ ಆಲ್ಬಮನ್ನು ಕೊಟ್ಟಳು. ಆಲ್ಬಮ್ ಗಾತ್ರದಲ್ಲಿ ಸಾಕಷ್ಟು ದೊಡ್ಡದಾಗಿತ್ತು. ಅನೇಕ ದಿನಗಳ– ವರ್ಷಗಳದೇ ಇರಬೇಕು– ಫೋಟೋಗಳನ್ನು ಸೇರಿಸಿಟ್ಟಿದ್ದರು, ಎಂದುಕೊಂಡೆ. ಅಶೋಕ ಒಮ್ಮೆ ವೇಗವಾಗಿ ಅದನ್ನು ತಿರುವಿ ಹಾಕಿ, ನನ್ನ ಕೈಗೆ ಹಸ್ತಾಂತರಿಸಿದ.

ನಾನು ಆಲ್ಬಮನ್ನು ಗಮನಿಸಿದೆ. ಫೋಟೋಗಳ ಜೋಡಣೆಯಲ್ಲಿ ವಿಜಯ ಮತ್ತು ರಾಧಾ ನಿಯಮಬದ್ಧರಾಗಿದ್ದುದು ಕಂಡಿತು. ಪ್ರತಿಯೊಂದು ಫೋಟೋ ಕೆಳಗೆ, ಅದು ತೆಗೆದ ಸ್ಥಳ, ತಾರೀಖು, ಇತ್ಯಾದಿ ವಿವರವನ್ನು ದಾಖಲಿಸಲಾಗಿತ್ತು. ನಾನು ಅಶೋಕ ಹೇಳಿದ ಮಾತನ್ನು ಮನಸ್ಸಿನಲ್ಲಿಟ್ಟುಕೊಂಡು ಗಮನಿಸ ತೊಡಗಿದೆ. ಹೌದು, ಏನೋ ವ್ಯತ್ಯಾಸ ಕಾಣಿಸುತ್ತಿದೆ ಎನ್ನಿಸಿತು. ಆದರೆ ಇಂತಹದೇ ಸ್ಪಷ್ಟ ವ್ಯತ್ಯಾಸ ಎಂದು ಹೇಳಲಾಗುತ್ತಿರಲಿಲ್ಲ. ಎಲ್ಲಾ ಬಣ್ಣದ ಫೋಟೋಗಳಾದ್ದರಿಂದ, ಎಲ್ಲವನ್ನೂ ಒಂದೇ ಮಾದರಿಯಲ್ಲಿ ಪರಿಷ್ಕರಿಸಲಾಗಿತ್ತು. ಹಾಗಾಗಿ ಐದು ವರ್ಷದ ಕೆಳಗೆ ತೆಗೆದ ಫೋಟೋ, ಈ ವರ್ಷ ತೆಗೆದ ಫೋಟೋ– ಬಣ್ಣದ ದೃಷ್ಟಿಯಿಂದ ಒಂದೇ ಗುಣಮಟ್ಟದ್ದಾಗಿತ್ತು. ಐದು ವರ್ಷವಾದ್ದರಿಂದ ಹಳೆಯದರಲ್ಲಿ ಸ್ವಲ್ಪ ವ್ಯತ್ಯಾಸ ಕಾಣಿಸುತ್ತಿತ್ತು.

ಕೇವಲ ವಿಜಯನನ್ನು ಹೋಲಿಸುವುದಕ್ಕಿಂತ, ವಿಜಯನ ಜೊತೆಯಾಗಿ ನಿಂತು ಫೋಟೋ ತೆಗೆಸಿಕೊಂಡವರನ್ನು ಗಮನಿಸಿ– ಉದಾಹರಣೆಗೆ ರಾಧಾಳ ಜೊತೆ– ಹೋಲಿಕೆಯನ್ನು ನೋಡಿದೆ. ರಾಧಾಳಿಗೆ ನಾನು ಏನು ಮಾಡುತ್ತಿದ್ದೇನೆ ಎಂದು ಗೊತ್ತಾಗದಿರಲಿ ಎಂದು, 'ಇದೆಲ್ಲಿಯದು', 'ಅದೆಲ್ಲಿಯದು', 'ಇವರು ಯಾರು?', 'ಇವರನ್ನು ಎಲ್ಲೋ ನೋಡಿದ ಹಾಗಿದೆಯಲ್ಲಾ' ಎಂದು ಸಂಭಾಷಣೆಗೆ ಎಳೆದುಕೊಂಡಿದ್ದೆ.

ಅಷ್ಟು ಹೊತ್ತು ನೋಡಿದ ಮೇಲೆ ನನಗೆ ನಿಶ್ಚಯವಾಯಿತು. ವಿಜಯನ ಬಣ್ಣದಲ್ಲಿ ಏನೋ ವ್ಯತ್ಯಾಸವಾಗಿದೆ. ಆದರೆ ಇಷ್ಟರಿಂದಲೇ ಯಾವುದೇ ನಿರ್ಧಾರಕ್ಕೆ ಬರುವುದು ಸರಿಯಲ್ಲ ಎನ್ನಿಸಿತು.

'ರಾಧಾ ನಾನು ನಿನ್ನೆ ತಾನೇ ನಗರಕ್ಕೆ ಬಂದೆ. ಹತ್ತಿರ ಹತ್ತಿರ ಒಂದು ತಿಂಗಳವರೆಗೆ ಇಲ್ಲಿರುತ್ತೇನೆ. ನಾನು ಆಗಾಗ್ಗೆ ಬಂದು ನೋಡುತ್ತಿರುತ್ತೇನೆ. ನೀವುಗಳು ಗಾಭರಿಯಾಗಬೇಡಿ. ವಿಜಯನನ್ನು ನಾನು ನೋಡಿ ಮಾತನಾಡಿಸಿಯೇ ಊರಿಂದ ವಾಪಸ್ಸಾಗುತ್ತೇನೆ ಅನ್ನೋ ವಿಶ್ವಾಸ ನನಗಿದೆ' ಎಂದೆ ಅವಳಿಗೆ ಧೈರ್ಯ ತುಂಬಲು.

ಆದರೆ ಆ ಮಾತಿನಲ್ಲಿ ನನಗೇ ವಿಶ್ವಾಸ ವಿದ್ದಂತಿರಲಿಲ್ಲ.

* * *

ಅಲ್ಲಿಂದ ವಾಪಸ್ಸು ಹೊರಟಾಗ, ಕಾರಿನಲ್ಲಿ ಕುಳಿತು ಅಶೋಕನ ಜೊತೆ ಉದ್ದಕ್ಕೂ ವಿಚಾರ ವಿನಿಮಯ ಮಾಡುತ್ತಾ ನಡೆದೆ. ನನ್ನನ್ನು ಹೋಟೇಲ್ ಬಳಿ ಇಳಿಸಿ ಅಶೋಕ ಹೊರಟು ಹೋದ.

ನನಗೆ ಆ ರಾತ್ರಿ ನಿದ್ರೆ ಬರಲಿಲ್ಲ. ವಿಜಯನ ಚಿತ್ರ ಕಣ್ಣ ಮುಂದೆ ಬಂದು ನಿಂತು ಬಿಡುತ್ತಿತ್ತು. ಅವನಿಗೆ ಏನಾಗಿರಬಹುದು? ಒಂದು ವಾರ ಕಾಲ ಅವನು ಮನೆಗೇ ಬರದೆ ಇರುವು

ದೆಂದರೇನು? ಅಂತಹ ಘನ ಕಾರ್ಯವೇನಿರಬಹುದು? ಅವನ ಪ್ರಯೋಗಾಲಯದವರು ಸರಿಯಾದ ಉತ್ತರ ಕೊಡುತ್ತಿಲ್ಲ ಎಂದರೇನು? 'ಮಿಸೆಸ್ ಕುಮಾರ್, ಗಾಬರಿಯಾಗಬೇಡಿ, ಅವರು ವಾಪಸ್ಸು ಬರುತ್ತಾರೆ' ಎಂಬ ಮಾತಿನ ಅರ್ಥವೇನು? ಅವನ ಬಾಸ್‌ಗೆ, ವಿಜಯ ಎಲ್ಲಿದ್ದಾನೆ ಎಂದು ಗೊತ್ತಿದೆಯೇ? ಅವನನ್ನೇನಾದರೂ ತೀರಾ ಗೂಢವಾದ ಕೆಲಸಕ್ಕೆ ಗೊತ್ತು ಹಚ್ಚಿದ್ದಾರೋ? ಹಾಗಿದ್ದರೆ, ಅದನ್ನು ಸ್ಪಷ್ಟವಾಗಿ ಹೇಳಿ, ಮನೆಯವರ ಮನಸ್ಸನ್ನು ಹಗುರಗೊಳಿಸಬಹುದಲ್ಲ? ಈ ರೀತಿ ಸಂಶಯದಲ್ಲಿ ಸಿಲುಕಿಸುವುದು ತರವೇ? ಇನ್ನು ಅಶೋಕನನ್ನು ನೋಡಿದರೆ, ಅವನು ಹೊಸ ಸಂಶಯವನ್ನು ಮನಸ್ಸಿನಲ್ಲಿ ಚಿತ್ರಿದ್ದಾನೆ, ವಿಜಯನಲ್ಲೇ ಬದಲಾವಣೆ ಆಗಿದೆ ಎಂದಿದ್ದಾನೆ. ಅವನ ಫೋಟೋ ನೋಡಿದರೆ ಏನೋ ವ್ಯತ್ಯಾಸವಾದ ಹಾಗಿದೆ? ಏನಿದರ ಅರ್ಥ?

ಈ ಯೋಚನೆಗಳಲ್ಲಿ ಮುಳುಗಿದ್ದ ನನಗೆ ನಿದ್ರೆ ಬರುವುದು ಅಸಾಧ್ಯವೇ ಆಗಿತ್ತು. ಹಾಸಿಗೆಯಲ್ಲಿ ಅತ್ತ ಕಡೆಯಿಂದ ಇತ್ತ ಕಡೆಗೆ, ಇತ್ತ ಕಡೆಯಿಂದ ಅತ್ತ ಕಡೆಗೆ ಹೊರಳಾಡುತ್ತಿದ್ದೆ, ವಿಜಯನ ಬಗ್ಗೆ ವಿಚಾರಿಸದಿದ್ದರೆ ನನಗೆ ನೆಮ್ಮದಿ ಸಿಕ್ಕುವುದಿಲ್ಲ ಎಂದು ಖಾತರಿಯಾಗಿತ್ತು. ಅದೂ ಅಲ್ಲದೆ ಅವನಿಂದ ಅಷ್ಟು ಸುಲಭದಲ್ಲಿ ವಿಮುಖನಾಗುವುದು ನನಗೆ ಸಾಧ್ಯವಿರಲಿಲ್ಲ. ನನ್ನ ಚಡ್ಡಿದೋಸ್ತ್ ಅವನು. ಅವನಿಗೆ ಏನಾದರೂ, ಅದು ನನ್ನ ಮನಸ್ಸನ್ನು ಇರಿಯುತ್ತಿತ್ತು.

ಮಾರನೇ ದಿನ ಬೆಳಗ್ಗೆ ಎದ್ದಾಗ ಒಂದು ನಿರ್ಧಾರವನ್ನಂತೂ ಮಾಡಿದೆ. ಹೇಗಾದರೂ ಸಮಯ ಮಾಡಿಕೊಂಡು, ವಿಜಯನ ಪ್ರಯೋಗಾಲಯಕ್ಕೆ ಭೇಟಿ ಕೊಡಬೇಕು.

ನನಗೆ ಅದಕ್ಕೆ ಅವಕಾಶ ಎರಡು ದಿನಗಳ ಕಾಲ ದೊರಕಲಿಲ್ಲ. ಆ ಎರಡು ದಿನಗಳ ಕಾಲ ವಿಲವಿಲನೆ ಒದ್ದಾಡಿದೆ. ಸಂಜೆ ಅಶೋಕನ

---

## ಅಬ್ಬೂರು ಶಿವಲಿಂಗ

ಪವಿತ್ರ ನದಿ ಎಂದು ಹೆಸರು ಪಡೆದಿರುವ ಕಾವೇರಿಯ ಬಲ ತೋಳಿನ ಮೇಲಿದೆ ಮೈಸೂರು ಜಿಲ್ಲೆ ಕೃಷ್ಣರಾಜ ನಗರ ತಾಲೂಕಿನ ಅಬ್ಬೂರು ಕುಗ್ರಾಮ. ಈ ಪುಟ್ಟ ಹಳ್ಳಿಯಲ್ಲಿ ಬಡವನ ಮಗನಾಗಿ ಕಾವೇರಿ ದೇವಿಯ ಬಲತೋಳಿನ ಮೇಲೆ ವಾಸಿಸುವುದೊಂದೆ ನನಗೆ ಭಾಗ್ಯ, ಹೆಮ್ಮೆ. ಇಲ್ಲಿ ಪುರಾತನವಾದ ನೆನಪನ್ನು ಕೆಣಕುವ ದೃಶ್ಯ ಒಂದಿದೆ ಅಂದರೆ ಕಾವೇರಿಯ ಗರ್ಭದಲ್ಲಿ ಉದಯಿಸಿರುವನೇನೋ ಎಂಬಂತೆ ನದಿಯ ಮಧ್ಯದಲ್ಲಿ ಶಿವಲಿಂಗ, ಸರಕಾರವೇ ಸಂಬಳ ಕೊಟ್ಟು ನೇಮಿಸಿರುವಂತೆ, ಮುಜರಾಯಿ ಸಂಬಳಿಗ ಅರ್ಚಕರು ಬೆಳಿಗ್ಗೆ ಆರು ಘಂಟೆಯ ಸುಮಾರಿಗೆ ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವುದನ್ನು ನನಗೆ ಬುದ್ಧಿ ಬಂದಂದಿನ ದಿವಸದಿಂದಲೂ ನೋಡುತ್ತಿದ್ದೇನೆ. ಕೊರೆವ ಚಳಿಯಲ್ಲಿಯೂ ಕೂಡ ಪೂಜೆ ನಡೆದಿದೆ. ಮಹಾ ಶಿವರಾತ್ರಿ ದಿವಸ ಮಾತ್ರ ನಮಗೆ ಹೆಚ್ಚಿನ ಸಡಗರ. ಅಂದು ನೆಂಟರಿಷ್ಟರೆಲ್ಲಾ ಬಂದು ನದಿಯಲ್ಲಿ ಮಿಂದು ಭಕ್ತಿಯಿಂದ ಶಿವಲಿಂಗಕ್ಕೆ ಪೂಜೆ ಸಲ್ಲಿಸಿ ಹೋಗುತ್ತಾರೆ.

ನದಿಯ ಬಲ ಭಾಗದಲ್ಲಿ ಸದಾ ಹಸಿರು ಕಂಗೊಳಿಸುವಂತೆ ಸಿರಿತನ– ಭತ್ತದ ಗದ್ದೆಯ, ರೇಷ್ಮೆ ಬೆಳೆಯ, ತೆಂಗಿನ ತೋಟದ ಮೈದಾನ ಕಣ್ಣಿಗೆ ಎಟಕದು. ಅದನ್ನು ನೋಡುತ್ತಾ ನಡೆವುದಂತು ನನಗೆ ತುಂಬಾ ಇಷ್ಟ. ಇನ್ನು ನನ್ನೂರಿನ ಜನಕ್ಕೆ ಇದರ ಅರಿವಿಲ್ಲವೆಂಬಂತಿದೆ. ಕಾರಣವಿಷ್ಟೆ ''ಬಿಲದಲ್ಲಿ ಇಲಿಯೆ ರಾಜ, ಹೆಗ್ಗಣನೇ ಸಾರ್ವಭೌಮ'' ಎಂಬಂತೆ ನಮ್ಮೂರೆ ಪ್ರಪಂಚ ಎಂದುಕೊಂಡಿರುವ ಎಷ್ಟೋ ಜನ ಸೋಂಬೇರಿಗಳಿಗೆ ಆ ಒಂದು ಪ್ರಕೃತಿಯ ಅರಿವು ಬರಲಾರದು.

● ಮಹದೇವ್, ಅಬ್ಬೂರ್

ಜೊತೆ, ರಾಧೆಯ ಜೊತೆ ಫೋನಿನಲ್ಲಿ ಮಾತನಾಡಿದೆ.

ಮೂರನೆಯ ದಿನ ಬೆಳಗ್ಗೆ ನನ್ನ ಕಾರ್ಯಕ್ರಮದಲ್ಲಿ ಉಂಟಾದ ಬದಲಾವಣೆಯಿಂದಾಗಿ, ನನಗೆ ಐದು ಘಂಟೆಗಳ ಬಿಡುವು ಸಿಕ್ಕಿತು. ನಾನು ತಕ್ಷಣ ಆ ಸಮಯವನ್ನು ಉಪಯೋಗಿಸಿಕೊಂಡು ಅಣುವಿಜ್ಞಾನದ ಕೇಂದ್ರ ಪ್ರಯೋಗಾಲಯಕ್ಕೆ ಧಾವಿಸಿದೆ. ಪುಣ್ಯಕ್ಕೆ ನಾನು ಓಡಾಡುತ್ತಿದ್ದ ಸ್ಥಳಕ್ಕೂ ಅಲ್ಲಿಗೂ ಕೇವಲ ಹತ್ತು ನಿಮಿಷದ ದೂರ ಮಾತ್ರವಿತ್ತು.

ಹತ್ತು ನಿಮಿಷದ ನಂತರ ರಾಕ್ಷಸಾಕಾರದ ದೊಡ್ಡ ಕಾಂಪೌಂಡ್ ಇದ್ದ, ಎಷ್ಟೋ ನೂರು ಎಕರೆ ವಿಸ್ತೀರ್ಣದ ಮೇಲೆ ನಿಂತ ಪ್ರಯೋಗಾಲಯದ ಮುಖ್ಯದ್ವಾರದ ಬಳಿ ಇದ್ದ 'ಸೆಕ್ಯುರಿಟಿ'ಯ ಭವನವನ್ನು ಹೊಕ್ಕೆ.

ಹೌದು, ಬೇರೆ ಕಡೆ ಸೆಕ್ಯುರಿಟಿ ಎಂಬ ಸ್ವಾಗತಕಾರರನ್ನು ಕುಳ್ಳಿರಿಸುವ ಸ್ಥಳ ಇಲ್ಲಿ ಒಂದು ದೊಡ್ಡ ಭವನದಂತೆಯೇ ಇತ್ತು! ನಾನು ನನ್ನ ಪರಿಚಯವನ್ನು ಹೇಳಿಕೊಂಡು, ಪ್ರೊ। ರಿಚರ್ಡ್‌ಸನ್ ಅವರನ್ನು ಕಾಣಬೇಕು ಎಂದು ಹೇಳಿದೆ. ನನ್ನನ್ನು ಮೇಲಿಂದ ಕೆಳಗಿನವರೆಗೆ ನೋಡಿದ ವ್ಯಕ್ತಿ.

'ನಿಮಗೆ ಸಂದರ್ಶನಕ್ಕೆ ಅವರಿಂದ ಅನುಮತಿ ದೊರಕಿದೆಯೇ?' ಎಂದು ಕೇಳಿದ. 'ಇಲ್ಲ, ಅನುಮತಿ ದೊರಕಿಸಿಕೊಳ್ಳುವಷ್ಟು ಸಮಯಾವಕಾಶವಿರಲಿಲ್ಲ. ಹಾಗಾಗಿ ನೇರವಾಗಿ ಅವರನ್ನು ನೋಡಲು ಬಂದೆ. ಅಗತ್ಯವಾದ ಕೆಲಸವಿತ್ತು' ಎಂದೆ.

ನಾನು ನನ್ನ ಜೇಬಿನಿಂದ ವಿಸಿಟಿಂಗ್ ಕಾರ್ಡ್ ತೆಗೆದು ಕೈಗಿತ್ತೆ. ಅದರ ಮೇಲೆ ಇದ್ದುದು ನನ್ನ ಭಾರತದ ಪ್ರಯೋಗಾಲಯದ ವಿಳಾಸ, ಮತ್ತೆ ನನ್ನ ಕ್ಷೇತ್ರವೇ ಬೇರೆ. ಅದನ್ನು ಓದಿ, ಅವನಿಗೆ ಏನು ಮಾಡಬೇಕೆಂದು ತೋಚಲಿಲ್ಲವೆಂದು ಕಾಣುತ್ತದೆ. ಅವನು ತನ್ನ ಹಿರಿಯ ಅಧಿಕಾರಿಯ ಬಳಿ ಹೋಗಿ, ವರದಿ ಒಪ್ಪಿಸಿ ಬಂದ. ನಂತರ ನನಗೆ ಅವರನ್ನು ಹೋಗಿ ನೋಡಲು ಹೇಳಿದ. ಅವರನ್ನು ನೋಡಲು ಅವರಿದ್ದ ಕೊಠಡಿಯೊಳಗೆ ಹೋದೆ. ಅದೊಂದು ವಿಶಾಲವಾದ, ಭವ್ಯವಾದ ಕೊಠಡಿ.

'ದಯವಿಟ್ಟು ಕುಳಿತುಕೊಳ್ಳಿ ಮಿ. ಆನಂದಕುಮಾರ್. ನೀವು ಪ್ರೊ। ರಿಚರ್ಡ್‌ಸನ್ ಅವರನ್ನು ಕಾಣಬೇಕು ಎಂದು ಹೇಳಿದರಂತೆ. ಕಾರಣ ಕೇಳಬಹುದೆ?' ಎಂದು ಆ ಅಧಿಕಾರಿ ಕೇಳಿದ.

'ನೀವು ತಪ್ಪು ತಿಳಿದುಕೊಳ್ಳದಿದ್ದರೆ, ನಾನು ಪ್ರೊ। ಅವರಿಗೇ ಕಾರಣ ತಿಳಿಸುತ್ತೇನೆ' ಎಂದೆ. ಅದಕ್ಕೆ ಅವನು,

'ಕ್ಷಮಿಸಿ ಮಿ. ಕುಮಾರ್, ಕಾರಣ ತಿಳಿಯದೇ ಒಳಗೆ ಬಿಡಲಾಗುವುದಿಲ್ಲ' ಎಂದು ತನ್ನ ಅಸಹಾಯಕತೆಯನ್ನು ಸೂಚಿಸಿದ.

'ಅದು ತಮ್ಮ ಇಷ್ಟ ಆಫೀಸರ್. ಆದರೆ ನಿಮಗೆ ಕಾರಣ ತಿಳಿಸುವುದು ನನಗೆ ಕಷ್ಟವಾಗುತ್ತದೆ. ಅದನ್ನು ಪ್ರೊ। ರಿಚರ್ಡ್‌ಸನ್ ಅವರ ಎದುರಿಗೆ ಮಾತ್ರ ಹೇಳಬಲ್ಲೆ' ಎಂದೆ ಹಠದ ಧ್ವನಿಯಲ್ಲಿ.

'ಪೂರ್ವಾಪರ ತಿಳಿಯದೆ ಅವರ ಬಳಿ ಕಳಿಸಿದರೆ, ಅವರು ಸಿಟ್ಟಿಗೇಳುತ್ತಾರೆ ಮಿ. ಆನಂದಕುಮಾರ್' ಎಂದ ಅವನೂ ಅದೇ ಹಠದ ಧ್ವನಿಯಲ್ಲಿ.

'ಹಾಗಾದರೆ ನೀವು ಅವರ ಜೊತೆ ಮಾತನಾಡಿ, ನಾನು ಡಾ। ವಿಜಯಕುಮಾರ್ ಅವರ ಬಂಧು ಎಂದು ಹೇಳಿ. ಅವರಿಗೆ ಅರ್ಥವಾಗುತ್ತದೆ' ಎಂದೆ.

ನನ್ನ ಮಾತು ಕೇಳಿ, ಅವನ ಮುಖದ ಮೇಲೆ ಸ್ವಲ್ಪ ಬದಲಾವಣೆಯಾಯಿತು. ಅವನು ಸಣ್ಣಗೆ ಉಗುಳುನುಂಗಿದ. ಕೈಗೆ ಫೋನನ್ನು ಎತ್ತಿಕೊಂಡು, ಸಂಖ್ಯೆಯೊಂದನ್ನು ತಿರುಗಿಸಿ,

'ಪ್ರೊಫೆಸರ್ ಕ್ಷಮಿಸಿ, ನಿಮಗೆ ತೊಂದರೆ ಕೊಡುತ್ತಿರುವುದಕ್ಕೆ ಕ್ಷಮಿಸಿ... ನಿಮ್ಮನ್ನು ಭೇಟಿಯಾಗುವುದಕ್ಕೆ ಒಬ್ಬರು ಬಂದಿದ್ದಾರೆ... ಇಲ್ಲ, ಅಪಾಯಿಂಟ್‌ಮೆಂಟ್ ತೆಗೆದುಕೊಂಡಿಲ್ಲ... ನಾನು ಕೇಳಿದೆ... ಆದರೆ ನಿಮ್ಮ ಬಳಿ ಮಾತ್ರ ಹೇಳುತ್ತೇನೆ ಎಂದರು... ಹುಂ... ಹುಂ...' ಎಂದು ನಂತರ ರಿಸೀವರ್ ಮೇಲೆ

ಕೈಯಿಟ್ಟುಕೊಂಡು 'ಪ್ರೊಫೆಸರ್ ನಿಮ್ಮ ಜೊತೆ ಮಾತನಾಡಬೇಕೆನ್ನುತ್ತಾರೆ... ಮಾತನಾಡಿ' ಎಂದು ರಿಸೀವರನ್ನು ನನಗೆ ಹಸ್ತಾಂತರಿಸಿದ.

'ಹಲೋ ಪ್ರೊಫೆಸರ್, ಗುಡ್‌ಮಾರ್ನಿಂಗ್' ಎಂದೆ.

'ಗುಡ್ ಮಾರ್ನಿಂಗ್. ತಾವು ನನ್ನ ಕಾಣಬೇಕು ಎಂದಿರಂತೆ? ಏನು ಸಮಾಚಾರ?'

'ನಾನು ಅಲ್ಲಿ ನಿಮ್ಮ ಬಳಿ ಬಂದಾಗಲಷ್ಟೇ ವಿವರವಾಗಿ ಹೇಳಬಲ್ಲೆ.'

'ನೋಡಿ ಮಿಸ್ಟರ್...?'

'ನನ್ನ ಹೆಸರು ಆನಂದಕುಮಾರ್'

'ನೋಡಿ ಮಿ. ಆನಂದಕುಮಾರ್, ಇದು ತುಂಬಾ ರಹಸ್ಯ ಕೆಲಸಗಳಲ್ಲಿ ತೊಡಗಿರುವ ಸಂಸ್ಥೆ. ಹಾಗಾಗಿ ಪ್ರತಿಯೊಬ್ಬರನ್ನೂ ಸರಿಯಾಗಿ ವಿಚಾರಿಸದೆ ಒಳಗೆ ಬಿಡಲು ಸಾಧ್ಯವಿಲ್ಲ. ಅದರಲ್ಲೂ ಪ್ರಬಲವಾದ ಕಾರಣವಿರಬೇಕು. ಅದರಲ್ಲೂ ನನ್ನನ್ನೇ ನೋಡಬೇಕು ಎನ್ನ ಬೇಕಾದರೆ...'

'ನಾನು ಹೇಳುವ ಎರಡು ಮಾತುಗಳು ನಿಮಗೆ ಹೇಳಬೇಕಾದ್ದನ್ನೆಲ್ಲ ಹೇಳುತ್ತದೆ ಎಂದುಕೊಳ್ಳುತ್ತೇನೆ. ನಾನು ಎರಡು ದಿನಗಳ ಹಿಂದೆಯಷ್ಟೇ ಭಾರತದಿಂದ ಬಂದೆ. ನಾನು ಡಾ। ವಿಜಯಕುಮಾರನ ಬಂಧು' ಎಂದೆ ಗಂಭೀರ ಧ್ವನಿಯಲ್ಲಿ.

ಅತ್ತಕಡೆ ನನ್ನ ಮಾತುಕೇಳಿ ಪ್ರೊಫೆಸರ್ ದೀರ್ಘವಾದ ಉಸಿರು ಎಳೆದುಕೊಂಡಿದ್ದು ಕೇಳಿಸಿತು. ಒಂದು ಕ್ಷಣ ಅವರಿಂದ ಉತ್ತರ ಬರಲಿಲ್ಲ. ನಂತರ,

'ಓ.ಕೆ. ನೀವು ಸೆಕ್ಯೂರಿಟಿ ಆಫೀಸರ್ ಕೈಗೆ ಫೋನ್ ಕೊಡಿ' ಎಂದರು.

ಹೀಗಾಗಿ ಐದು ನಿಮಿಷಗಳ ನಂತರ ಪ್ರೊ। ರಿಚರ್ಡ್‌ಸನ್ ಅವರ ಕೋಣೆಯ ಎದುರಿಗೆ ನಾನು ನಿಂತಿದ್ದೆ. ಅಲ್ಲಿಯವರೆಗೆ ನನ್ನನ್ನು ಬಿಡಲು ನನ್ನ ಜೊತೆಗೆ ಒಬ್ಬ ಸೆಕ್ಯುರಿಟಿ ಪರ್ಸನಲ್ ಬಂದು, ನಾನು ಬೇರೆ ಕಡೆ ಅಲೆದಾಡುವುದಿಲ್ಲ ಎಂಬುದನ್ನು ಖಾತರಿ ಮಾಡಿಕೊಂಡು, ಅವರ ಆಫೀಸಿನ ಎದುರಿಗೆ ನಿಲ್ಲಿಸಿ, ಅವರ ಕೋಣೆಯ ಬಾಗಿಲು ತೆರೆದು,

ಸೆಲ್ಯೂಟ್ ಹೊಡೆದು, ನಾನು ಬಂದಿರು ವುದನ್ನು ತಿಳಿಸಿ, ನಂತರ ವಾಪಸ್ಸು ಹೋದ.

'ಬನ್ನಿ ಮಿಸ್ಟರ್...' ಮತ್ತೆ ನನ್ನ ಹೆಸರಿಗೆ ಅವರು ತಡಕಾಡಿದಂತೆ ಕಂಡಿತು.

'ಆನಂದಕುಮಾರ್' ಎನ್ನುತ್ತ ನನ್ನ ವಿಸಿಟಿಂಗ್ ಕಾರ್ಡನ್ನು ಅವರ ಕೈಗಿತ್ತೆ.

'ಯಸ್, ಮಿ. ಆನಂದ್‌ಕುಮಾರ್. ನನಗೆ ಅನೇಕ ಭಾರತೀಯರು ಸ್ನೇಹಿತರಿದ್ದಾರೆ, ನಿಜ. ಆದರೆ ಈಗಲೂ ಹೆಸರುಗಳನ್ನು ನೆನಪಿನಲ್ಲಿಟ್ಟು ಕೊಳ್ಳುವುದು ಸ್ವಲ್ಪ ಕಷ್ಟವೇ ಆಗುತ್ತದೆ.'

'ನನಗೂ ಅಷ್ಟೆ' ಎಂದೆ ನಾನು ನಗುತ್ತ.

'ಹಾಂ!' ಅವರಿಗೆ ನನ್ನ ಮಾತು ಅರ್ಥ ವಾಗಿರಲಿಲ್ಲ.

'ನಿಮಗೆ ಹೇಗೆ ನಮ್ಮ ಹೆಸರು ನೆನಪಿನಲ್ಲಿ ಉಳಿಯುವುದಿಲ್ಲವೋ, ನಮಗೂ ನಿಮ್ಮ ಹೆಸರು ನೆನಪಿನಲ್ಲಿ ಉಳಿಯುವುದು ಕಷ್ಟ' ಎಂದೆ ಮುಗುಳು ನಗುತ್ತ, ನನ್ನ ಧಾಷ್ಟ್ಯದ ಉತ್ತರಕ್ಕೆ ಅವರು ನಕ್ಕರು.

ಅವರ ಎದುರಿಗೆ ಕುಳಿತೆ. ಅವರು ಕುಳಿತವರು ನನ್ನ ಮುಖವನ್ನು ನೋಡುತ್ತಿದ್ದರು. ನಾನಾ ದರೋ ಅವರ ಮುಖವನ್ನು ಓದಲು ಪ್ರಯತ್ನಿಸುತ್ತಿದ್ದೆ. ಅವರು ನಾನು ಮಾತು ಆರಂಭಿಸುವುದಕ್ಕೆ 'ಕಾಯ್ದಂತಿತ್ತು. ಒಂದು ಕ್ಷಣದ ಹಿಂದೆಯಷ್ಟೇ ನಕ್ಕ ಮುಖ ಈಗ ಗಂಭೀರವಾಗಿತ್ತು. ಅದರ ಮೇಲೆ ಒಂದು ಮುಖವಾಡ ಬಂದು ಕುಳಿತಂತೆ ಕಾಣಿಸಿತು.

'ಪ್ರೊಫೆಸರ್, ಆಗಲೇ ನಿಮಗೆ ಹೇಳಿದಂತೆ ನಾನು ಡಾ। ವಿಜಯಕುಮಾರನ ಬಂಧು, ಭಾರತದಿಂದ ಮೊನ್ನೆಯಷ್ಟೆ ಬಂದೆ' ಎಂದು ಹೇಳಿ ಮಾತು ನಿಲ್ಲಿಸಿ ಅವರ ಕಡೆ ನೋಡಿದೆ. ಅವರು ನಾನಿತ್ತಿದ್ದ ವಿಸಿಟಿಂಗ್ ಕಾರ್ಡ್ ಕಡೆ ನೋಡುತ್ತ,

'ಅದು ಸರಿ ಮಿ. ಆನಂದಕುಮಾರ್, ನೀವು ಡಾ। ಕುಮಾರ್ ಅವರನ್ನು ಭೇಟಿಯಾಗ ಬೇಕಾಗಿದ್ದರೆ, ಅವರ ಮನೆಗೆ ಹೋಗಿದ್ದರೆ ಸಾಕಾಗಿತ್ತು. ಅವರ ವಿಳಾಸ ಬೇಕಿದ್ದರೆ...' ಎಂದು ವಿಜಯನ ವಿಳಾಸವನ್ನು ಹುಡುಕಲು ತೊಡಗಿದರು.

'ಬೇಡಿ ಪ್ರೊಫೆಸರ್. ಅವನ ವಿಳಾಸ ನನ್ನ ಬಳಿ ಇದೆ. ಅಷ್ಟೇ ಇಲ್ಲ, ಅವನ ಮನೆಗೆ ನಾನು ಹೋಗಿ ಬಂದಾಯಿತು'

'ಓಹೋ' ಎಂದು ಉದ್ಗರಿಸಿದರು. ಹಾಗೆ ತಮ್ಮ ಹುಡುಕುವಿಕೆಯನ್ನು ನಿಲ್ಲಿಸಿದರು. ನಾನು ಅವರ ಉದ್ಗಾರಕ್ಕೆ ಉತ್ತರಿಸಲಿಲ್ಲ. ಅವರ ಮುಖವನ್ನು ನೋಡುತ್ತಾ ಕುಳಿತೆ. ಮತ್ತೆ ಅವರು 'ಓಹೋ' ಎಂದರು.

'ನಿಮ್ಮ ಉದ್ಗಾರ ನನಗೆ ಅರ್ಥವಾಗಲಿಲ್ಲ ಪ್ರೊಫೆಸರ್' ಎಂದೆ.

ಆ ಮಾತಿಗೆ ಅವರು ನನ್ನ ಕಡೆ ದಿಟ್ಟಿಸಿ ನೋಡಿದರು.

'ಅದರ ಅರ್ಥ ವಿಶೇಷವೇನಿಲ್ಲ. ನೀವು ಡಾ। ಕುಮಾರರ ಪತ್ನಿಯನ್ನು ಭೇಟಿ ಮಾಡುತ್ತೀರಿ. ಅವರಿಂದ ನಿಮಗೆ ಅರ್ಥಂಬರ್ಥ ಸಮಾಚಾರ...'

'ಕ್ಷಮಿಸಿ ಪ್ರೊಫೆಸರ್. ನನಗೆ ಅರ್ಥಂಬರ್ಥ ಸಮಾಚಾರ ತಿಳಿದಿಲ್ಲ. ತಿಳಿಯಬೇಕಾದ ಪೂರ್ಣ ಸಮಾಚಾರ ತಿಳಿದಿದೆ. ನಿಮಗೆ ಏನು ಗೊತ್ತಿ ದೆಯೋ ಅದು ನನಗೆ ಗೊತ್ತಿಲ್ಲದಿರಬಹುದು. ಆದರೆ ಹೊರ ಪ್ರಪಂಚಕ್ಕೆ ಗೊತ್ತಿರಬೇಕಾದ್ದೆಲ್ಲ ಗೊತ್ತಿದೆ.'

'ಹುಂ'

'ಇನ್ನೂ ಒಂದು ಮುಖ್ಯ ವಿಷಯ'.

ಅವರು ಪ್ರಶ್ನಾರ್ಥಕವಾಗಿ ನನ್ನ ಕಡೆ ನೋಡಿದರು. ನನಗೆ ಅವರ ಜೊತೆ ಎಳೆದು ಮಾತನಾಡುವುದು ಇಷ್ಟವೆನಿಸಲಿಲ್ಲ.

'ನಾನು ಡಾ। ವಿಜಯಕುಮಾರನ ತಂದೆಯನ್ನು ಭೇಟಿ ಮಾಡಿ ಬಂದಿದ್ದೇನೆ- ಭಾರತದಿಂದ ಬರುವಾಗ'

ಅವರು ಮಾತನಾಡದೆ ನನ್ನ ಕಡೆ ನೋಡಿದರು.

'ಒಬ್ಬ ತಂದೆ ತನ್ನ ಮಗನ ಬಗ್ಗೆ ಎಷ್ಟು ಕಾಳಜಿ ವಹಿಸಿರುತ್ತಾರೆ ಎಂಬುದನ್ನು ನಾನು ನಿಮಗೆ ಹೇಳಬೇಕಾದ್ದಿಲ್ಲ. ಡಾ। ವಿಜಯಕುಮಾರ ನಂತಹ ಮಗ ಇರುವಾಗ, ಅಂತಹವನ ತಂದೆಗೆ ಮಗನ ಬಗ್ಗೆ ಇದು ಇನ್ನೂ ಹೆಚ್ಚಿರುತ್ತದೆ.

ಅವನು ಒಂದು ವಾರದಿಂದ ಕಾಣೆಯಾಗಿದ್ದಾನೆ ಎಂದು ಕೇಳಿ ಅವರು ಸಜೀವ ಶವವಾಗಿದ್ದಾರೆ' ಎಂದೆ ಭಾವ ತುಂಬಿದ ಧ್ವನಿಯಲ್ಲಿ.

ಪ್ರೊ। ರಿಚರ್ಡ್‌ಸನ್ ಒಂದು ಬಾರಿ ಎಂಜಲನ್ನು ನುಂಗಿಕೊಂಡರು. ನಂತರ ಮಾತನಾಡಲು ನಿರ್ಧರಿಸಿ,

'ಮಿ. ಆನಂದಕುಮಾರ್, ನೀವು ವೃಥಾ ಗಾಬರಿಯಾಗುತ್ತಿದ್ದೀರಿ. ನಾನು ಮಿಸೆಸ್ ಕುಮಾರ್‌ಗೆ ಸಹ ಹೇಳಿದ್ದೆ. ಗಾಬರಿ ಪಡಬೇಡಿ, ಸಹನೆ ಇರಲಿ ಎಂದಿದ್ದೆ. ಅವರು ವ್ಯರ್ಥವಾಗಿ ಭಾರತದಲ್ಲಿರುವ ಕುಮಾರ್ ಅವರ ತಂದೆಯವರ ಜೊತೆ ಮಾತನಾಡಿದ್ದಾರೆ... ಹುಂ... ನಾನೇನು ಹೇಳಲಿ!'

'ನೋಡಿ ಪ್ರೊಫೆಸರ್, ನನಗನ್ನಿಸುತ್ತದೆ, ನಿಮಗೆ ನಮ್ಮೆಲ್ಲರಿಗಿಂತ ಹೆಚ್ಚಿಗೆ ಗೊತ್ತಿದೆ ಎಂದು. ಪ್ಲೀಸ್... ನಮಗೆ ಹೆಚ್ಚು ಶಿಕ್ಷೆ ಕೊಡಬೇಡಿ. ನಮ್ಮನ್ನು ಕಾಯಿಸಿ, ನಮ್ಮ ಮನಸ್ಸನ್ನು ನರಕಯಾತನೆಗೆ ಗುರಿಪಡಿಸಬೇಡಿ... ದಯವಿಟ್ಟು ಹೇಳಿ ಬಿಡಿ... ವಿಜಯ ಎಲ್ಲಿದ್ದಾನೆ?'

ನಾನು ಭಾವಾತಿರೇಕದಿಂದ ಹೀಗೆ ನುಡಿದಾಗ, ಪ್ರೊಫೆಸರ್ ಬೆಚ್ಚಿ ಕುಳಿತರು.

'ಅರೆ, ಇದೇನು ನೀವು ಹೀಗೆ ಮಾತಾಡ್ತಿದ್ದೀರಿ... ಛೆ... ನಾನು ಎಲ್ಲಿ ಹೇಳಿದೆ... ಡಾ। ಕುಮಾರ್ ಎಲ್ಲಿದ್ದಾರೆ ಎಂದು ನನಗೆ ಗೊತ್ತಿದೆ ಎಂದು ಎಲ್ಲಿ ಹೇಳಿದೆ?'

'ಹಾಗೆ ಹೇಳಿಲ್ಲದಿರಬಹುದು ಪ್ರೊಫೆಸರ್. ಆದರೆ ನಿಮ್ಮ ಮಾತಿನಿಂದ ಯಾರಿಗಾದರೂ ಸ್ಪಷ್ಟವಾಗುತ್ತದೆ. ನೀವು 'ಗಾಬರಿಯಾಗುವುದಕ್ಕೆ ಕಾರಣವಿಲ್ಲ' ಎಂದು ಆಶ್ವಾಸನೆ ನೀಡಬೇಕಾದರೆ, ಅದು ಸುಳ್ಳು ಆಶ್ವಾಸನೆಯಲ್ಲ, ಖಂಡಿತ ನಿಮಗೆ ಹೆಚ್ಚಿನ ಮಾಹಿತಿ ಗೊತ್ತಿರಬೇಕು...'

ನನ್ನ ತರ್ಕಕ್ಕೆ ಒಂದು ಕ್ಷಣ ಅವರಿಗೆ ಏನು ಹೇಳಲೂ ತೋಚಲಿಲ್ಲ.

'ನಾನು... ನಾನು ಆ ಅರ್ಥದಲ್ಲಿ ಹೇಳಲಿಲ್ಲ ಮಿ. ಆನಂದಕುಮಾರ್... ನಾನು



ಹೇಳಿದ್ದು ಹೀಗೆ... ಜನರಲ್ ಆಗಿ... ಸಾಂತ್ವನ ಕೊಡಲು...'

ನನಗೆ ಸಿಟ್ಟೇ ಬಂದಿತು.

'ಪ್ರೊಫೆಸರ್, ನೀವು ದಯವಿಟ್ಟು ನನ್ನ ಸಹನೆಯನ್ನು ಪರೀಕ್ಷಿಸಬೇಡಿ. ನಾನು ಹಾಗೂ ವಿಜಯ–ಬಂಧುಗಳು ಮಾತ್ರವಲ್ಲ, ಒಡ ಹುಟ್ಟಿದ ಸೋದರರರಿಗಿಂತ ಹೆಚ್ಚಾಗಿದ್ದೇವೆ. ಚಿಕ್ಕ ವಯಸ್ಸಿನಿಂದ ಒಟ್ಟಿಗೆ ಓದಿದವರು. ಒಟ್ಟಿಗೆ ಬೆಳೆದವರು... ಅವನು ಕಾಣೆಯಾಗಿದ್ದಾನೆ ಎಂದು ಕೇಳಿಕೊಂಡು, ನಿಮ್ಮ ಸಾಂತ್ವನದ 'ಜನರಲ್' ಮಾತನ್ನು ಕೇಳಿಕೊಂಡು ನಾನು ಸುಮ್ಮನಿರಲು ಬಂದಿಲ್ಲ' ಎಂದು ಸಿಡುಕಿದೆ.

'ಏನಿದು ಮಿ. ಆನಂದಕುಮಾರ್! ನೀವು ನನ್ನ ಮೇಲೆಯೇ ಜಬರಿಸಿ ಮಾತನಾಡುತ್ತಿದ್ದೀರಿ... ಇದು ಅಸಭ್ಯತನ...'

'ಕ್ಷಮಿಸಿ ಪ್ರೊಫೆಸರ್, ನಾನು ಆದಷ್ಟು ಸಭ್ಯನ ಹಾಗೆ ವರ್ತಿಸಲು ಪ್ರಯತ್ನಿಸುತ್ತಿದ್ದೇನೆ. ಆದರೆ ನೀವು ಅವಕಾಶ ಕೊಡುತ್ತಿಲ್ಲ. ರಾಧಾ ನಿಮಗೆ ಫೋನ್ ಮಾಡಿದಾಗ, ನೀವು ಹೇಳಿದ 'ಜನರಲ್' ಸಾಂತ್ವನ ನೀಡಿದಿರೇ ಹೊರತು, ವಿಜಯ ಒಂದು ವೇಳೆ ಕಾಣೆಯಾಗಿದ್ದರೆ, ಪೊಲೀಸ್ ಖಾತೆಯಲ್ಲಿ ದೂರನ್ನೂ ದಾಖಲೆ ಮಾಡಲು ಯಾಕೆ ಅವಳಿಗೆ ಸಲಹೆ ಕೊಡಲಿಲ್ಲ? ಹೋಗಲಿ, ನೀವೇ ಆ ಕೆಲಸ ಮಾಡಬಹುದಾಗಿತ್ತಲ್ಲ? ನೀವು ಅವನ ಡಿಪಾರ್ಟ್‌ಮೆಂಟಿನ ಚೀಫ್ ಅಲ್ಲವೇ? ನಿಮಗೆ ಅಷ್ಟು ಬಾಧ್ಯತೆ ಇಲ್ಲವೇ? ನೀವು ಯಾವ ಸಭ್ಯತನ ತೋರಿಸುತ್ತಿದ್ದೀರಿ, ಪ್ರೊಫೆಸರ್... ಹೇಳಿ... ನಾನು ನಿಮ್ಮ ಜೊತೆ ಹೆಚ್ಚು ಮಾತನಾಡಲು ಬಂದಿಲ್ಲ. ನಿಮ್ಮಿಂದ ಸಕಾರಾತ್ಮಕವಾದ ಉತ್ತರ ಸಿಗದಿದ್ದರೆ, ನಾಳೆ ನಾನು ಎಬ್ಬಿಸುವ ಬಿರುಗಾಳಿಗೆ, ಉಂಟುಮಾಡುವ ದಾಂಧಲೆಗೆ ನಾನು ಹೊಣೆಗಾರನಲ್ಲ... ಇಡೀ ಅಮೆರಿಕೆಯೇ ಏಳುವಂತೆ ಕಿರಿಚುತ್ತೇನೆ, ನೆನಪಿರಲಿ... ಹಾಗೆ ಕಿರಿಚಿದಾಗ, ಏನಾಗುತ್ತದೆ ಎಂದು ಮಾತ್ರ ಕೇಳಬೇಡಿ' ಎಂದೆ ಎದ್ದು ನಿಲ್ಲುತ್ತ. ನನ್ನ ಮುಖ ಕೆಂಪಾಗಿತ್ತು, ಕಣ್ಣುಗಳು ಬೆಂಕಿಯನ್ನು ಉಗುಳುತ್ತಿದ್ದವು.

ಪ್ರೊಫೆಸರ್ ನನ್ನ ರೂಪವನ್ನು ಕಂಡು ದಿಗ್ಭ್ರಾಂತರಾಗಿ ಕುಳಿತಿದ್ದರು. ನಂತರ ಸಾವರಿಸಿಕೊಂಡು,

'ಮಿಸ್ಟರ್... ಮಿಸ್ಟರ್ ಆನಂದಕುಮಾರ್, ಪ್ಲೀಸ್... ಕುಳಿತುಕೊಳ್ಳಿ... ಸಮಾಧಾನ ಮಾಡಿಕೊಳ್ಳಿ...!'

'ಏನಂತ ಸಮಾಧಾನ ಮಾಡಿಕೊಳ್ಳಲಿ ಪ್ರೊಫೆಸರ್?'

ಅಷ್ಟರಲ್ಲಿ ತಾರಕಕ್ಕೆ ಏರಿದ್ದ ನನ್ನ ಸ್ವರವನ್ನು ಕೇಳಿದ್ದ ಕೊಠಡಿಯ ಹೊರಗಿದ್ದ ಕೆಲವರು ಬಾಗಿಲು ತೆಗೆದು ಒಳಗೆ ಇಣುಕಿ ನೋಡಿದರು. ಪ್ರೊಫೆಸರ್ ಅವರ ಕಡೆ ನೋಡಿ,

'ಪ್ಲೀಸ್, ನೀವು ನಿಮ್ಮ ಕೆಲಸ ನೋಡಿಕೊಳ್ಳಿ. ಇತ್ತ ಕಡೆ ಗಮನ ಕೊಡಬೇಡಿ' ಎಂದರು.

ಬಾಗಿಲು ಹಾಕಿದ ಮೇಲೆ,

'ಮಿ. ಆನಂದಕುಮಾರ್, ಕುಳಿತುಕೊಳ್ಳಿ, ನಾನು ಹೇಳುವ ಮಾತನ್ನು ಸಮಾಧಾನವಾಗಿ ಕೇಳಿ... ಪ್ಲೀಸ್' ಎಂದರು ತಗ್ಗಿದ ದನಿಯಲ್ಲಿ.

ನಾನು ಅವರ ಮುಖವನ್ನು ದಿಟ್ಟಿಸುತ್ತ ಕುಳಿತೆ.

'ಹೇಳಿ ಪ್ರೊಫೆಸರ್' ಎಂದೆ.

'ನಾನು ಕೇಳಿಕೊಳ್ಳುವುದಿಷ್ಟು... ನೀವು ನಿಮ್ಮ ಬಂಧುವಿನ ಒಳಿತಿಗಾಗಿ ಒಂದು ವಾರ ಕಾಯಬೇಕು... ಅಷ್ಟು ಸಾಧ್ಯವಿಲ್ಲವೇ?' ಬಹಳ ವಿನಯದಿಂದ ಕೇಳಿದರು.

ನಾನೇನು ಹೇಳಲಿ. ವಿಜಯನಿಗೆ ಒಳ್ಳೆಯದಾಗಲಿ ಎಂದರೆ ಏನು ಮಾಡಲೂ ನಾನು ಸಿದ್ಧ.

* * *

ನಾನು ಅಲ್ಲಿಂದ ಸುಮ್ಮನೆ ಮಾತನಾಡದೆ ಬಂದರೂ ನನ್ನ ಮನಸ್ಸು ನನ್ನನ್ನು ಸುಮ್ಮನಿರಲು ಬಿಡಲಿಲ್ಲ. ಇಷ್ಟಂತೂ ಖಾತರಿಯಾಗಿತ್ತು. ನಮಗೆಲ್ಲರಿಗಿಂತ ಪ್ರೊ। ರಿಚರ್ಡ್‌ಸನ್ ಅವರಿಗೆ ವಿಜಯನ ವಿಷಯದಲ್ಲಿ ಹೆಚ್ಚಿಗೆ ತಿಳಿದಿತ್ತು. ಅವರು ಒಂದು ವಾರ ಕಾಯಲು ನನಗೆ ಹೇಳಿರುವುದರ ಅರ್ಥವೇನು? ಅಷ್ಟರಲ್ಲಿ ಅವನು ವಾಪಸ್ಸು ಬರುತ್ತಾನೆಂದೇ?

ಎಲ್ಲಿಗೆ ಹೋಗಿರಬಹುದು ಅವನು? ಸದ್ಯ ಎಲ್ಲಿಗಾದರೂ ಹೋಗಿರಲಿ, ಅವನು ವಾಪಸ್ಸು ಬಂದರೆ ಸಾಕು... ಕ್ಷೇಮವಾಗಿ ವಾಪಸ್ಸು ಬಂದರೆ ಸಾಕು. ನಾನು ಹೇಗೂ ಒಂದು ತಿಂಗಳ ಅವಧಿಗೆ ಎಂದು ಇಲ್ಲಿಗೆ ಬಂದಿರುವವನು. ಈಗ ಐದು ದಿನಗಳು ಮಾತ್ರ ಕಳೆದಿವೆ. ಆ ಲೆಕ್ಕದಲ್ಲಿ ಇನ್ನೂ ಸಾಕಷ್ಟು ದಿನವಿದೆ... ಆದರೂ ಪ್ರೊಫೆಸರ್ ಅವರ ಬೆಂಬಿಡದೆ, ಅವರನ್ನು ಪದೇ ಪದೇ ವಿಚಾರಿಸುತ್ತಿರಬೇಕು... ಇನ್ನು, ರಾಧಾ, ಅವಳಿಗೆ ಏನು ಹೇಳುವುದು? ಅವಳಿಗೆ ತಾನು ಪ್ರೊಫೆಸರ್ ಅವರನ್ನು ಕಂಡು ಮಾತನಾಡಿದ್ದನ್ನು, ಅವರು ಹೇಳಿದ ಮಾತನ್ನು ಹೇಳುವುದು ಸೂಕ್ತವೇ? ಸೂಕ್ತ ಎನ್ನಿಸುತ್ತದೆ. ಈಗ ಅವಳ ಮನಸ್ಸು ವಿಹ್ವಲಗೊಂಡಿದೆ. ಅಷ್ಟರಮಟ್ಟಿಗೆ ಅವಳಿಗೆ ಸಮಾಧಾನವಾಗುತ್ತದೆ. ನಾನು ಹೇಳುವ ಮಾತಿನಿಂದ ಅವಳಿಗೆ ಧೈರ್ಯ ಬಂದರೂ ಬರಬಹುದು.

ಆದರೆ... ಆದರೆ... ಯೋಚಿಸುತ್ತಾ ಯೋಚಿಸುತ್ತಾ ಹೋದಂತೆ ನನ್ನ ಮನಸ್ಸು ತಡೆ ಹಾಕಿದ ರೈಲಿನಂತೆ ನಿಂತಿತು. ಪ್ರೊಫೆಸರ್ ಹೇಳಿದ್ದು ಯಾವುದೂ ಸಾಧ್ಯವಾಗದೇ ಹೋದರೆ? ಅದೊಂದು ಕೇವಲ ಆಶ್ವಾಸನೆಯೇ ಆದರೆ? ನಾನು ನಿರಾಶನಾಗಬೇಕಾದ ಪರಿಸ್ಥಿತಿ ಬಂದರೆ? ರಾಧಾಳಿಗೆ ಆವಾಗ ಏನು ಉತ್ತರ ಕೊಡುವುದು? ಈಗೊಂದು ಆಗೊಂದು ಹೇಳುವುದೇ? ನಾಳೆ ವಾಪಸ್ಸು ಊರಿಗೆ ಹೋದಾಗ ನಿಜವಾಗಿ ವಿಜಯನ ತಂದೆಯನ್ನು ಭೇಟಿ ಮಾಡಿದಾಗ, ಅವರಿಗೆ ಏನೆಂದು ಉತ್ತರ ಕೊಡಲಿ?

ಅಂದರೆ... ಅಂದರೆ... ನಾನೂ ಪ್ರಯತ್ನ ವನ್ನು ಮಾಡುತ್ತಿರಬೇಕು... ಆದರೆ ಹೇಗೆ?

ಯೋಚಿಸುತ್ತಾ ಕುಳಿತೆ. ಯಾವುದೋ ಒಂದು ಎಳೆ ಕಾಣಿಸಿತು.

ಸಂಜೆ ಅಶೋಕನಿಗೆ ಫೋನ್ ಮಾಡಿದೆ. ಅವನಿಗೆ ಸಂಕ್ಷೇಪವಾಗಿ ನಡೆದಿದ್ದನ್ನು ಹೇಳಿದೆ. ನಂತರ,

'ನನಗೊಂದು ವಿಷಯ ತಿಳಿಯಬೇಕಿತ್ತು' ಎಂದೆ.

> ## ನಿರಾಶೆ
>
> ಮನಸ್ಸಿನಂಗಳದ ತುಂಬಾ
> ಚಿತ್ತಾರದ ರಂಗೋಲಿ ಇಟ್ಟು,
> ಸುಪ್ರಭಾತ ಹಾಡಿ ಹೋದ,
> ನನ್ನಿನಿಯಾ!
> ಹೊತ್ತು ಕಂತಿ ದೀಪ
> ಹಚ್ಚುವ ಹೊತ್ತಾದರೂ
> ಬಾರದೆ ಹೋದನಲ್ಲ!!
>
> ● ನೀಲಮ್ಮ ಕಟ್ಟೀಮನಿ

'ಕೇಳು' ಎಂದ ಅವನು.

'ವಿಜಯನ ಸೆಕ್ಷನ್‌ನಲ್ಲಿ ಅಲ್ಲದಿದ್ದರೂ, ಆಸುಪಾಸಿನ ಸೆಕ್ಷನ್‌ನಲ್ಲಿ ಕೆಲಸ ಮಾಡುವ ಯಾರಾದರೂ ಭಾರತೀಯರು ನಿನಗೆ ಗೊತ್ತೇ?... ಅವರ ಫೋನ್ ನಂಬರ್ ಇದ್ದರೆ ಕೊಡು'

'ಓಹೋ ಅದಕ್ಕೇನಂತೆ. ವಿಜಯನ ಜೊತೆಯೇ ಅವನ ಭೇಟಿಯಾಗಿತ್ತು. ಅವನ ಹೆಸರು ಸಂಜಯ್... ಸಂಜಯ ಸಿಂಗ್'

ಸಂಜಯ, ವಿಜಯನ ಪಕ್ಕದ ಡಿಪಾರ್ಟ್‌ಮೆಂಟ್‌ನಲ್ಲಿ ಕೆಲಸ ಮಾಡುವವನೇ. ಇಬ್ಬರೂ ಒಂದೇ ವಯಸ್ಸಿನವರು. ಅವನೂ ಸಹ ಅದೇ ಸುಮಾರಿಗೆ ಪ್ರಯೋಗಾಲಯಕ್ಕೆ ಬಂದು ಸೇರಿದ್ದ. ಸಂಜಯ ಸಿಂಗ್ ತುಂಬಾ ಮಾತುಗಾರ ಎಂದು ಹೇಳಿದ ಅಶೋಕ.

ಒಳ್ಳೆಯದೇ ಆಯಿತು ಎಂದುಕೊಂಡು ಅವನು ಕೊಟ್ಟ ನಂಬರಿಗೆ ಫೋನ್ ಮಾಡಿದೆ. ಅತ್ತ ಕಡೆಯಿಂದ ಉತ್ತರ ಬಂದಮೇಲೆ, ನಾನು ನನ್ನ ಪರಿಚಯವನ್ನು ಮಾಡಿಕೊಂಡೆ.

'ಓಹೋ ಭಾರತದಿಂದ ಬಂದಿದ್ದೀರಾ? ಹಾಗಾದರೆ ಇಲ್ಲಿ ಬರದೇ ಹೋಗಲು ಸಾಧ್ಯವೇ ಇಲ್ಲ. ಈಗಲೇ ಬನ್ನಿ. ಭರ್ಜರಿ ಊಟ ಸಿದ್ಧ ಪಡಿಸುವಂತೆ ನನ್ನಾಕೆಗೆ ಹೇಳುತ್ತೇನೆ.'

'ತುಂಬಾ ಧನ್ಯವಾದಗಳು ಮಿ. ಸಂಜಯ ಸಿಂಗ್. ಆದರೆ ಈ ವೇಳೆಯಲ್ಲಿ ಮನೆಯವರಿಗೆ ತೊಂದರೆ ಯಾಕೆ ಕೊಡುತ್ತೀರಿ.'

'ಛೆ, ಏನು ಮಾತಾಡ್ತೀರಿ. ನೀವು ನಮ್ಮ ಮನೆಗೆ ಬರೋದು ಹೆಚ್ಚೋ, ನನ್ನ ಹೆಂಡತಿ ನಿಮಗೆ ಅಡುಗೆ ಮಾಡೋದು ಹೆಚ್ಚೋ. ಅದೂ ಅಲ್ಲದೆ ಇದು ಮೈಕ್ರೋವೇವ್ ಓವನ್ ಜಮಾನಾ ಸ್ವಾಮಿ... ನಿಮಿಷದಲ್ಲಿ ಅಡುಗೆ ಆಗುತ್ತೆ... ಹಿಂದಿನಕಾಲದ ಹಾಗಲ್ಲ... ಮಿ. ಆನಂದ್, ನೀವು ನಿಸ್ಸಂಕೋಚವಾಗಿ ಬನ್ನಿ' ಎಂದ ಸಂಜಯ.

ಅವನು ಕೊಟ್ಟ ನಿರ್ದೇಶನದ ಮೇಲೆ, ಅವನ ಮನೆಯ ವಿಳಾಸವನ್ನು ಹುಡುಕಿಕೊಂಡು ಹೊರಟೆ. ನಾಲ್ಕನೇ ಅಂತಸ್ತಿನಲ್ಲಿದ್ದ ಫ್ಲಾಟ್‌ನ ಬಾಗಿಲ ಬಳಿ ನಿಂತು, ಕಾಲಿಂಗ್ ಬೆಲ್ ಒತ್ತಿದಾಗ, ಬಾಗಿಲ ಹಿಂದೆಯೇ ಕಾಯುತ್ತಾ ನಿಂತಿದ್ದವನಂತೆ, ತಕ್ಷಣ ಬಾಗಿಲು ತೆಗೆದು,

'ಆಹ್ ! ಸ್ವಾಗತ... ಸುಸ್ವಾಗತ... ಬನ್ನಿ...' ಎಂದು ತನ್ನೆರಡು ಬಾಹುಗಳನ್ನು ಅಗಲವಾಗಿ ಚಾಚಿ, ಕಳೆದುಹೋದ ಆತ್ಮೀಯ ಗೆಳೆಯನನ್ನು ಭೇಟಿಯಾಗುತ್ತಿರುವಂತೆ ಸ್ವಾಗತಿಸಿದ. ಸಂಜಯ ಫೋನಿನಲ್ಲಿ ಮಾತನಾಡಿದಾಗ, ನೀವು ನನ್ನನ್ನು ಏಕೆ ಭೇಟಿ ಮಾಡಲು ಬಯಸುತ್ತೀರಿ ಎಂಬ ಪ್ರಶ್ನೆಯನ್ನು ಮಾಡಿರಲಿಲ್ಲ. ನಾನೂ ಅದರ ಬಗ್ಗೆ ಹೆಚ್ಚು ತಲೆಕೆಡಿಸಿಕೊಂಡಿರಲಿಲ್ಲ. ಇಲ್ಲಿ ನೆಲಸಿರುವ ಭಾರತೀಯನ ಮನೆಯಲ್ಲಿ ಕಾಲಿಡಲು ಭಾರತೀಯ ಎನ್ನುವ ಕಾರಣವೇ ಸಾಕಾಗುತ್ತಿತ್ತು. ಜೊತೆಗೆ ಸೇರಿ ಮಾತನಾಡಲು ಇದು ಒಂದು ನೆಪವಾಗುತ್ತಿತ್ತು. ಇನ್ನು ಭಾರತದಿಂದ ಬಂದಿದ್ದೇನೆ ಎಂದರಂತೂ ಮುಗಿಯಿತು, ಅತಿಥಿಯ ಡಿಮ್ಯಾಂಡ್ ಜಾಸ್ತಿಯಾಗುತ್ತಿತ್ತು.

ನಾನು ಕುಳಿತುಕೊಳ್ಳುತ್ತಿದ್ದಂತೆ, ಅವನ ಪತ್ನಿ ಬಂದು ನಮಸ್ಕರಿಸಿ, ನನ್ನನ್ನು ಮಾತನಾಡಿಸುತ್ತ ಕುಳಿತಳು. ಅವಳು ಉತ್ತರ ಭಾರತದಿಂದ ಬಂದವಳು. ನಾನು ಹಿಂದಿಯಲ್ಲಿ ಮಾತನಾಡುತ್ತಿದ್ದುದು ಅವಳಿಗೆ ಸಾಕಾಗಿತ್ತು. ತನ್ನ ಬಂಧುವೇ ಬಂದಿದ್ದಾನೆ ಎಂಬ ಸಂಭ್ರಮದಿಂದ ಮಾತಾಡುತ್ತ ಕುಳಿತುಬಿಟ್ಟಳು. ತನ್ನ ತಂದೆ ತಾಯಿ ಬಂದುಹೋಗಿ ಎರಡು ವರ್ಷವೇ ಆಯಿತು ಎಂದು ವಿವರಿಸಿದಳು. ತನಗೆ ಈ ಅವಧಿಯಲ್ಲಿ ಭಾರತಕ್ಕೆ ಹೋಗಲಾಗಲಿಲ್ಲ ಎಂದೂ ಹೇಳಿದಳು.

'ಹಹ್ಹಹ್ಹ... ನೋಡಿದಿರಾ, ಇವಳಿಗೆ ಭಾರತದ ವಿಷಯ ಎತ್ತಿದರೆ ಸಾಕು ಮೈಯೆಲ್ಲಾ ಕಿವಿಯಾಗುತ್ತದೆ. ಇನ್ನು ತಾಯಿಮನೆ ಸಮಾಚಾರವೆಂದರಂತೂ...'

'ಸುಮ್ಮನಿರೀಂದರೆ, ಕೇಳಿದವರು ನಕ್ಕಾರು... ನೀವಿನ್ನೇನು ಮಹಾ... ಭಾರತದಿಂದ ಯಾರಾದರೂ ಬಂದಿದ್ದಾರೆ ಅಂದ ತಕ್ಷಣ ಮನೆಗೆ ಕರೆಯೋದಿಲ್ಲವೇ ? ಅವರ ಜೊತೆ ಗಂಟೆಗಟ್ಟಲೆ ಮಾತನಾಡೋದಿಲ್ಲವೇ ?' ಎಂದಳು ಅವಳು.

ನಾನು ಅವರಿಬ್ಬರ ಪ್ರೇಮ ಕಲಹವನ್ನು ನೋಡುತ್ತಾ ನಗುತ್ತ ಕುಳಿತೆ.

'ಹೌದಲ್ಲವೇ. ಅವಳು ಹೇಳಿದ್ದು ಸರಿ... ನಾನು ನಿಮ್ಮ ಜೊತೆ ತುಂಬಾ ಮಾತನಾಡಬೇಕು ಅಂತ ನಿಮ್ಮನ್ನು ಬರಹೇಳಿದೆ ಮಿ. ಆನಂದ ಕುಮಾರ್...'

ಸಂಜಯ ಸಿಂಗ್ ಮಾತು ಮುಂದುವರೆಸುವುದಕ್ಕೆ ಮೊದಲೇ, ನಾನು

'ಆದರೆ ಮಿ. ಸಿಂಗ್, ನಾನು ಇಲ್ಲಿ ಬಂದಿದ್ದು ಒಂದು ವಿಶೇಷ ಕೆಲಸಕ್ಕಾಗಿ' ಎಂದೆ ಮುಗಮ್ಮಾಗಿ. ಹಾಗೆ ಅರ್ಥಗರ್ಭಿತವಾಗಿ ಅವನ ಹೆಂಡತಿಯ ಕಡೆ ನೋಡಿದೆ.

ಅವಳು ನನ್ನ ನೋಟದ ಅರ್ಥವನ್ನು ಮಾಡಿಕೊಂಡಳೇನೋ.

'ನೀವು ಮಾತಾಡ್ತಾ ಇರಿ. ನಾನು ಸ್ವಲ್ಪ ಅಡುಗೆಗೆ ಇಟ್ಟು ಬರ್ತೀನಿ' ಎಂದು ಒಳಗೆ ಎದ್ದು ಹೋದಳು.

ಸಂಜಯ ಸಿಂಗ್ ನನ್ನ ಕಡೆ ಪ್ರಶ್ನಾರ್ಥಕವಾಗಿ ನೋಡಿದ.

'ಮಿ. ಸಿಂಗ್, ನಾನು ನಿಮಗೆ ಫೋನಿನಲ್ಲಿ ಹೇಳುವುದನ್ನು ಮರೆತೆ. ನಾನು ಡಾ। ವಿಜಯಕುಮಾರನ ಗೆಳೆಯ... ಆತ್ಮೀಯ ಗೆಳೆಯ' ಎಂದೆ 'ಆತ್ಮೀಯ ಗೆಳೆಯ' ಎಂಬ ಪದಕ್ಕೆ ಒತ್ತು ಕೊಡುತ್ತಾ. ನನ್ನ ಮಾತನ್ನು ಕೇಳಿ ಅವನ ಮುಖದ ಮೇಲೆ ಸಣ್ಣದಾದ ಗೆರೆಯೊಂದು ಮೂಡಿತು.

'ನಿಮಗೆ ಈ ವೇಳೆಗೆ ಗೊತ್ತಾಗಿರಬಹುದು. ವಿಜಯನ ಬಗ್ಗೆ ಅವನ ಮನೆಯಲ್ಲಿ ತುಂಬಾ ಆತಂಕ ಹುಟ್ಟಿಕೊಂಡಿದೆ. ನಿಮ್ಮ ಪ್ರಯೋಗಾಲಯದ ಅಧಿಕಾರಿಗಳಿಂದಲೂ ಸರಿಯಾದ ಉತ್ತರ ಸಿಗ್ತಿಲ್ಲ. ಪ್ರೊ। ರಿಚರ್ಡ್‌ಸನ್ ಅವರನ್ನು ಭೇಟಿಮಾಡಲು ನಾನು ಸ್ವತಃ ಬಂದಿದ್ದೆ' ಎಂದು ಸಂಕ್ಷೇಪವಾಗಿ ನಡೆದಿದ್ದನ್ನು ಹೇಳಿದೆ. ಹೇಳಿದ ನಂತರ ಮೌನ ವಹಿಸಿ ಕ್ಷಣಕಾಲ ಹಾಗೆ ಕುಳಿತೆ.

ಅವನು ಏನೂ ಉತ್ತರಿಸಲಿಲ್ಲ. ನನ್ನ ಕಡೆ ದಿಟ್ಟಿಸಿ ನೋಡುತ್ತಿದ್ದ.

'ಮಿ. ಸಿಂಗ್, ನಾನು ನಿಮ್ಮ ಬಳಿ ಬರುವುದಕ್ಕೆ ಒಂದು ಕಾರಣವಿದೆ. ನಿಮ್ಮಿಂದ ಒಂದು ಕೆಲಸವಾಗಬೇಕಿತ್ತು' ಎಂದೆ ನಾನು.

ಸಂಜಯ ಸಿಂಗ್ ಮಾತನಾಡಲಿಲ್ಲ. ಅವನ ಮೌನವೇ ಸಮ್ಮತಿ ಎಂದುಕೊಂಡೆ.

'ನಾವಿಬ್ಬರೂ ಕೇವಲ ಆತ್ಮೀಯ ಸ್ನೇಹಿತರು ಮಾತ್ರವಲ್ಲ, ಒಡಹುಟ್ಟಿದವರಿಗಿಂತ ಹೆಚ್ಚಾಗಿ ಇದ್ದೇವೆ. ನಾವು ಒಟ್ಟಿಗೆ ಬೆಳೆದೆವು. ಅವನ ಬಗ್ಗೆ ಕೇಳಿದಾಗಿನಿಂದ, ನನಗೆ ಇಲ್ಲಿ ಒಂದೊಂದು ಕ್ಷಣವೂ ಒಂದೊಂದು ಯುಗದಂತೆ ಭಾಸವಾಗುತ್ತಿದೆ. ಈಗ ನೀವು ಕೃಪೆಯಿಟ್ಟು ನನಗಾಗಿ ಈ ಕೆಲಸ ಮಾಡಿದರೆ, ನಾನು ಎಂದೆಂದಿಗೂ ನಿಮಗೆ ಉಪಕೃತನಾಗಿರುತ್ತೇನೆ' ಎಂದೆ ಭಾವುಕನಾಗಿ.

'ಹೇಳಿ... ನನ್ನ ಕೈಲಿ ಆಗುವುದಾದರೆ ಮಾಡುತ್ತೇನೆ' ಎಂದ ಮೊದಲ ಬಾರಿಗೆ ಬಾಯಿ ತೆರೆಯುತ್ತಾ ಸಂಜಯ.

'ನಾನೊಂದು ಸಣ್ಣ ಕಾಗದ ಬರೆದುಕೊಡುತ್ತೇನೆ. ಅವನಿಗೆ ತಲುಪಿಸಲು ಪ್ರಯತ್ನಿಸಿ. ಅವಕಾಶವಾಗದಿದ್ದರೆ, ಅವನ ಮೇಜಿನ ಮೇಲಾದರು ಇಟ್ಟುಬಿಡಿ... ಅಷ್ಟು ಸಾಕು.'

'ವಿಜಯನ ಟೇಬಲ್ ಮೇಲೆ! ಅವನ ಟೇಬಲ್ ಮೇಲೆ! ಈಗ ವಿಜಯನ ಕೆಲಸ ಏನು ಎಂಬುದಾದರೂ ಗೊತ್ತೇನು ನಿಮಗೆ?'

ನನ್ನೂರು ನನ್ನ ಜನ

## ಶ್ರಾವಣ ಬೆಟ್ಟ

ನನ್ನೂರು ಮೈಸೂರು ಜಿಲ್ಲೆಗೆ ಸೇರಿದ ಕೊಳ್ಳೇಗಾಲ ತಾಲೂಕಿನ ಬೈಲೂರು. ಇದು ಕರ್ನಾಟಕದ ಕೊನೆಯಲ್ಲಿದೆ (ತಮಿಳುನಾಡು ಹತ್ತಿರ). ಈ ಊರಿನ ಬಗ್ಗೆ ಅಷ್ಟೇನು ಹೇಳಿಕೊಳ್ಳುವ ವಿಶೇಷತೆ ಇಲ್ಲವಾದರೂ ಇದೇ ಊರಿನ ಪಕ್ಕದಲ್ಲಿರುವ ಶ್ರಾವಣ ಬೆಟ್ಟದ ಬಗ್ಗೆ ಒಂದು ವಿಶೇಷವಾದ ಪೌರಾಣಿಕ ಕಾಲದ ಕತೆ ಇದೆಯಂತೆ. ಅದೇನೆಂದರೆ ನೂರಾರು ವರುಷಗಳ ಹಿಂದೆ ಶ್ರಾವಣ ಎಂಬ ರಾಕ್ಷಸ ಆ ಬೆಟ್ಟದಲ್ಲಿ ವಾಸಿಸುತ್ತಿದ್ದ. ಇದರಿಂದ ಅಲ್ಲಿನ ಪ್ರಾಣಿಗಳು ಮತ್ತು ಸುತ್ತಮುತ್ತಲಿನ ಜನರಿಗೆ ನೆಮ್ಮದಿ ಇರಲಿಲ್ಲ.

ಹೀಗಿರುವಾಗ ಒಂದು ದಿನ ಮಹಾದೇಶ್ವರ ಸ್ವಾಮಿಗಳು (ಈಗ ಮಹಾದೇಶ್ವರ ಬೆಟ್ಟದಲ್ಲಿ ಐಕ್ಯವಾಗಿರುವ) ಈ ಬೆಟ್ಟದ ಮುಖಾಂತರ ಬರುತ್ತಿರಲು ಅಲ್ಲಿದ್ದ ಶ್ರಾವಣನ ಕಣ್ಣಿಗೆ ಬಿದ್ದರು. ಕೂಡಲೇ ಅವನು ಅವರ ಮೇಲೆ ಎರಗಿದನು. ಇಬ್ಬರಿಗೂ ಘೋರವಾದ ಯುದ್ಧ ನಡೆಯಿತು. ಕೊನೆಗೆ ಶ್ರಾವಣನು ಸೋತನು. ಅಷ್ಟೇ ಅಲ್ಲದೆ ಈ ರಾಕ್ಷಸನಿಂದ ಇಲ್ಲಿ ಬಹಳ ತೊಂದರೆ ಇದೆಯೆಂದು ತಿಳಿದು ಅವನನ್ನು ಅಲ್ಲಿಯೇ ಇದ್ದ ಬಂಡೆಯ ಮೇಲೆ ಹಾಕಿ ತುಳಿದು ಸಾಯಿಸಿದರು. ಆಮೇಲೆ ಮಹಾದೇಶ್ವರ ಸ್ವಾಮಿಗಳು ಮುಂದಿನ ಪ್ರಯಾಣವನ್ನು ಬೆಳೆಸಿದರಂತೆ.

ಇದರಿಂದ ಆ ಬೆಟ್ಟವು ಶ್ರಾವಣ ಬೆಟ್ಟವೆಂದೇ ಹೆಸರಾಯಿತು. ಈಗಲೂ ಕೂಡ ಆ ಬೆಟ್ಟಕ್ಕೆ ಹೋದರೆ ಶ್ರಾವಣ ಹಾಗೂ ಮಹಾದೇಶ್ವರ ಸ್ವಾಮಿಗಳಿಗೂ ಯುದ್ಧ ನಡೆದಾಗ ಶ್ರಾವಣನನ್ನು ಬಂಡೆಯ ಮೇಲೆ ಹಾಕಿ ತುಳಿದಾಗ ಆದ ಗುರುತುಗಳು ಇವೆ.

● ಬಿ. ಎಸ್. ಗೀತ ಷಡಾಕ್ಷರ ಸ್ವಾಮಿ, ಬೈಲೂರು

'ನನಗೇನು ಗೊತ್ತು. ರಾಧಾಳನ್ನು ಕೇಳಿದ್ದೆ, ಅವಳಿಗೆ ಏನೂ ತಿಳಿದಿಲ್ಲ.'

'ಅವನು ಈಗ ತೀರಾ ರಹಸ್ಯದ ಒಂದು ಪ್ರಾಜೆಕ್ಟ್ ಮೇಲೆ ಕೆಲಸ ಮಾಡುತ್ತಿದ್ದಾನೆ. ಅವನ ಮೇಜಿನ ಬಳಿ ಹೋಗುವ ಪ್ರಯತ್ನ ಮಾಡುವುದಕ್ಕೆ ಯಾರಿಗೂ ಧೈರ್ಯವಿಲ್ಲ.'

'ನೀವು ಹೇಳುವುದು ನೋಡಿದರೆ, ಅವನು ಈ ರಹಸ್ಯದ ಯೋಜನೆಯ ಕೆಲಸ ಆರಂಭಿಸಿದ ಮೇಲೆ ಒಳಗೆ ಸೇರಿಕೊಂಡಿದ್ದಾನೆ ಎಂದಾಯಿತು. ತನ್ನ ಮನೆಗೂ ಬರ್ತಿಲ್ಲ ಎಂದರೆ...'

'ಅಷ್ಟು ಸ್ಪಷ್ಟವಾಗಿ ಏನನ್ನೂ ಹೇಳಲಾರೆ ಮಿ. ಆನಂದಕುಮಾರ್... ಅಂದ ಹಾಗೆ, ನಾವು ಇನ್ನು ಬೇರೆ ಭಾರತೀಯರು ಬಹಳ ಬೇಗ ಒಬ್ಬರಿಗೊಬ್ಬರು ಹೊಂದಿಕೊಳ್ಳುವ ಹಾಗೆ, ನನ್ನ ಹಾಗೂ ವಿಜಯನ ವಿಷಯದಲ್ಲೂ ಆಯಿತು. ನಾವಿಬ್ಬರೂ ಒಳ್ಳೆಯ ಸ್ನೇಹಿತರಾದೆವು. ಪ್ರತಿದಿನವೂ ಒಮ್ಮೆಯಾದರೂ ಭೇಟಿಯಾಗುತ್ತಿದ್ದೆವು. ವಾರಾಂತ್ಯಗಳಲ್ಲಿ ಒಟ್ಟಿಗೆ ಸೇರುವ ಕಾರ್ಯಕ್ರಮ ಹಾಕಿಕೊಳ್ಳುತ್ತಿದ್ದೆವು. ಇನ್ನು ನಾನೋ ಅಥವಾ ಅವನೋ ನಮ್ಮ ನಮ್ಮ ಸೆಕ್ಷನ್‌ನಿಂದ ಫೋನ್ ಮೂಲಕ ಆಗಾಗ್ಗೆ ಮಾತನಾಡುತ್ತಿದ್ದೆವು. ಆದರೆ...'

'ಆದರೆ?'

'ಆದರೆ ಈಗ ವಾರದ ಕೆಳಗೆ... ಅಥವಾ ಇನ್ನೊಂದೆರಡು ದಿನ ಜಾಸ್ತಿ ಇರಬಹುದು... ನಾನು ಫೋನ್ ಮಾಡಿದಾಗ, ಪ್ರೊ। ರಿಚರ್ಡ್‌ಸನ್ ಫೋನ್ ಕೈಗೆತ್ತಿಕೊಂಡು, ಮಿ. ಸಿಂಗ್, ನೀವು ಡಾ। ವಿಜಯಕುಮಾರ್‌ಗೆ ತೊಂದರೆ ಕೊಡಬೇಡಿ. ಅವರು ಕೆಲಸ ಮುಗಿಯುವವರೆಗೆ ನಿಮ್ಮನ್ನು ನೋಡುವ ಸಾಧ್ಯತೆಯಿಲ್ಲ– ಯಾವುದೋ ವಿಶೇಷವಾದ ಕೆಲಸದಲ್ಲಿ ಮಗ್ನರಾಗಿದ್ದಾರೆ– ನಿಮ್ಮ ಜೊತೆ ಮಾತನಾಡುವ ಸಾಧ್ಯತೆಯಿಲ್ಲ ಎಂದರು. ಅಂದಿನಿಂದ ನಾನೇನೂ ಮಾಡಲು ತೋಚದೆ, ಸುಮ್ಮನೆ ಮನಸ್ಸಿನಲ್ಲೇ ವ್ಯಥೆಪಟ್ಟುಕೊಂಡೆ. ನಾವುಗಳೇ ಕೆಲವರು ಗೆಳೆಯರು ಮಾತನಾಡಿಕೊಂಡೆವು. ಇದೆಂತಹ ಪ್ರಾಜೆಕ್ಟ್? ನಮಗೆ ಮಾತನಾಡಲೂ ಅವಕಾಶ ಕೊಡುತ್ತಿಲ್ಲ ಎಂದರೆ ಏನರ್ಥ, ಎಂದೆಲ್ಲಾ ಚರ್ಚಿಸಿಕೊಂಡೆವು.'

'ಆಮೇಲೆ?'

'ಆಮೇಲೇನು... ನಂತರ ಏನೂ ಸಮಾಚಾರ ಸಿಕ್ಕಲಿಲ್ಲ – ಅಂದರೆ ವಿಜಯನ ಬಗ್ಗೆ... ಏನೇನೂ ಸಮಾಚಾರ ಸಿಕ್ಕಲಿಲ್ಲ...' ಎಂದು ಮತ್ತೆ ಮತ್ತೆ ಅದೇ ಮಾತನ್ನಾಡಿದ ಸಂಜಯ ಸಿಂಗ್.

'ಅಲ್ಲಿಗೆ ನಾನು ಕೊಡುವ ಕಾಗದ ನೀವು ತಲುಪಿಸಲು ಸಾಧ್ಯವಿಲ್ಲ ಎಂದಾಯಿತು' ಎಂದೆ ನಿರಾಶೆಯ ದನಿಯಲ್ಲಿ.

ಸಂಜಯ ಸಿಂಗ್ ತಲೆತಗ್ಗಿಸಿ ಕುಳಿತ. ಅವನು ತಲೆಯಾಡಿಸಲೂ ಹಿಂಜರಿಯುತ್ತಿದ್ದ.



'ತಾಳಿ ಮಿ. ಆನಂದಕುಮಾರ್, ನೀವು ಅಷ್ಟು ನಿರಾಶರಾಗಬೇಡಿ. ನಾನು ಏನಾದರೂ ಮಾಡುತ್ತೇನೆ. ಆದರೆ... ಆದರೆ...

ಆದರೆ ಅವನ ಹೊಸ ಸ್ಥಳದ ಬಗ್ಗೆ, ಹೊಸ ಕೊಠಡಿಯ ಬಗ್ಗೆ, ಹೊಸ ಟೇಬಲಿನ ಬಗ್ಗೆ ಮಾಹಿತಿ ಸಂಗ್ರಹಿಸಬೇಕು... ಇರಲಿ ಬಿಡಿ. ಅದನ್ನು ನನಗೆ ಬಿಡಿ. ಈ ರಜಪೂತನ ರಕ್ತದಲ್ಲಿ ಅಷ್ಟಂತೂ ಹೋರಾಟ ನಡೆಸುವ ತಾಕತ್ತಿದೆ' ಎಂದ. ಹಾಗೆಂದು ನನ್ನ ಕಡೆ ನೋಡಿ ನಕ್ಕ. ಮೊದಲ ಬಾರಿಗೆ ನನಗೂ ನಗುವ ಮನಸ್ಸಾಯಿತು.

ಆಮೇಲೆ, ನಾನು ಈಗಾಗಲೇ ಹೋಟೇಲಿನಲ್ಲಿ ಕುಳಿತು ಬರೆದಿದ್ದ ಕಾಗದವನ್ನು ಅವನ ಕೈಗಿತ್ತೆ.

'ನಿಮ್ಮ ಯತ್ನದಲ್ಲಿ ನನಗೆ ವಿಶ್ವಾಸವಿದೆ, ಮಿ. ಸಿಂಗ್' ಎಂದೆ.

* * *

ಸಂಜಯ ಸಿಂಗ್‌ನ ಹೆಂಡತಿ ಮಾಡಿ ಹಾಕಿದ ಸೊಗಸಾದ ಅಡುಗೆಯನ್ನು ತಿಂದು ತೃಪ್ತನಾಗಿ ಹೊಟೇಲಿಗೆ ಹಿಂತಿರುಗಿದೆ. ಅಂದು ರಾತ್ರಿ ನನಗೆ ಮೊದಲಬಾರಿಗೆ ಒಳ್ಳೆಯ ನಿದ್ರೆ ಬಂದಿತು. ಮೂರು ದಿನದಿಂದ ಪೀಡಿಸುತ್ತಿದ್ದ ಯಾತನೆ, ಇಂದಿಗೆ ತೀರುತ್ತದೆ ಎಂಬ ಆಶಾವಾದಿ ಭಾವನೆ ನನ್ನ ಮನಸ್ಸಿನ ಮೇಲೆ ಸೊಗಸಾದ ಪರಿಣಾಮವನ್ನು ಮಾಡಿರಬೇಕು.

ಮಾರನೇ ದಿನ ಬೆಳಗ್ಗೆ ಎದ್ದಾಗ ಬಹಳ ಖುಷಿಯಾಗಿದ್ದೆ.

ಆ ದಿನದ ಕಾರ್ಯಕ್ರಮ ಮೊದಲೇ ನಿಶ್ಚಯವಾಗಿದ್ದರೂ, ಹೋಗುವುದೋ ಬೇಡವೋ ಎಂದು ಮನಸ್ಸು ಡೋಲಾಯಮಾನವಾಗಿತ್ತು. ಅದಕ್ಕೆ ಕಾರಣವೂ ಇತ್ತು.

ನಾನು ಸಿಂಗ್‌ನ ಮೂಲಕ ವಿಜಯನಿಗೆ ಕಳಿಸಿದ್ದ ಪತ್ರದಲ್ಲಿ, ಅವನಿಗೆ ನಾನು ಬಂದಿರುವ ಸಮಾಚಾರ, ಇಳಿದುಕೊಂಡಿರುವ ಹೊಟೇಲ್ ಹಾಗೂ ಅದರ ಫೋನ್ ನಂಬರ್ ಇಷ್ಟನ್ನೂ ಬರೆದಿದ್ದೆ. ಅವನು ಮುಖ್ಯವಾದ ಯೋಜನೆಯೊಂದರಲ್ಲಿ ನಿರತನಾಗಿರುವುದು ತಿಳಿದಿದೆ ಎಂದು ಬರೆದು, 'ಅದಕ್ಕಾಗಿ ನಿನಗೆ ತೊಂದರೆ ಪಡಿಸಲು ಇಚ್ಛಿಸುವುದಿಲ್ಲ. ಅವಕಾಶ ಮಾಡಿಕೊಂಡು, ಬೆಳಗ್ಗೆ ಅಥವಾ ಸಂಜೆ ನನಗೆ ಒಮ್ಮೆ ಖಂಡಿತ ಫೋನ್ ಮಾಡು. ನಿನ್ನ ಫೋನ್ ಕರೆಗೆ ಜಾತಕ ಪಕ್ಷಿಯಂತೆ ಕಾದಿರುತ್ತೇನೆ. ನಮ್ಮ ಹಳೆಯ ಸಂಬಂಧವನ್ನೂ ನೆನಪಿಸಿಕೊಂಡು ನೀನು ಖಂಡಿತ ಈ ನನ್ನ ಬಿನ್ನಹವನ್ನು ನಡೆಸುತ್ತೀಯ ಎಂದುಕೊಂಡಿದ್ದೇನೆ' ಎಂದು ಪತ್ರದಲ್ಲಿ ಒಕ್ಕಣಿಸಿದ್ದೆ.

ಹಾಗಾಗಿ, ವಿಜಯ ಬೆಳಗ್ಗೆ ಅಥವಾ ಸಂಜೆ ಫೋನ್ ಮಾಡಬಹುದು. ನಾನು ನನ್ನ ಕೊಠಡಿಯನ್ನು ಬಿಟ್ಟು ಹೋಗುವುದು ಈ ಸಮಯಗಳಲ್ಲಿ ಒಳ್ಳೆಯದಲ್ಲ ಎಂದು ನಿರ್ಧರಿಸಿದ್ದೆ. ಹಾಗಾಗಿ ಅಂದಿನ ಕಾರ್ಯಕ್ರಮಕ್ಕೆ ಸಹ ಸ್ವಲ್ಪ ನಿಧಾನವಾಗಿಯೇ ಹೋದೆ. ನನಗೇ ಈ ಬಗ್ಗೆ ಯೋಚಿಸಿ ಆಮೇಲೆ ನಗು ಬಂದಿತು.

ಸಂಜಯ ಸಿಂಗ್ ಒಂದು ವೇಳೆ ತನ್ನ ಯತ್ನದಲ್ಲಿ ಯಶಸ್ವಿಯಾದರೂ ಇಂದು ವಿಜಯನನ್ನು ಸಂಪರ್ಕಿಸಲೋ ಅಥವಾ ಅವನ ಮೇಜಿನ ಮೇಲೆ ಪತ್ರವನ್ನು ಇಡುವುದಕ್ಕೋ ಆಗಬಹುದು. ಹಾಗಾಗಿ ಆ ಪತ್ರವನ್ನು ಓದಿ, ವಿಜಯ ನನ್ನ ಜೊತೆ ಸಂಪರ್ಕ ಸಾಧಿಸಿದರೂ ಅದು ಇಂದು ಸಂಜೆಗೆ ಮಾತ್ರ ಸಾಧ್ಯ. ಹಾಗಿರುವಾಗ, ನಾನು ಈ ಬೆಳಗ್ಗೆ ಅವನು ಫೋನ್ ಮಾಡಬಹುದು ಎಂದು ಎಣಿಸಿದ್ದು ಹೇಗೆ?

ಆದರೂ ಸಂಜೆ ಮಾತ್ರ ಬೇಗನೇ ಬಂದೆ. ಅಲ್ಲಿ ಇಲ್ಲಿ ಹೋಗಲಿಲ್ಲ. ನೇರ ಹೊಟೇಲಿಗೆ ಬಂದಿಳಿದೆ. ಸ್ವಾಗತಕಾರಿಣಿಯನ್ನು ವಿಚಾರಿಸಿದೆ, 'ಯಾರಾದರೂ ನನಗೆ ಮೆಸೇಜ್ ಇಟ್ಟಿದ್ದಾರಾ?' ನಾನು ಇಲ್ಲದಾಗ ವಿಜಯ ಒಂದು ವೇಳೆ ಫೋನ್ ಮಾಡಿದ್ದರೆ.

'ಹೌದು ಸರ್' ಎಂದಳು.

ನನ್ನ ಎದೆ ಒಂದು ಹೊಡೆತವನ್ನು ತಪ್ಪಿಸಿಕೊಂಡಿತು. ಅವಳು ಕೊಠಡಿಯ ಬೀಗದ ಕೈ ಜೊತೆ ಸಿಕ್ಕಿಸಿದ್ದ ಮೆಸೇಜನ್ನು ಕೈಗಿತ್ತಳು. ಅಶೋಕ ನನಗೆ ಫೋನ್ ಮಾಡಿದ್ದ. ಸಂಜೆ ಅವನ ಮನೆಗೆ ಫೋನ್ ಮಾಡಲು ಹೇಳಿದ್ದ!

ನಾನು ಮೇಲೆ ನನ್ನ ಕೊಠಡಿಗೆ ಹೋಗಿ, ಬಟ್ಟೆ ಬದಲಾಯಿಸಿಕೊಂಡು ಹಾಸಿಗೆಯ ಮೇಲೆ ಕಾಲು ಚಾಚಿಕೊಂಡು ಆರಾಮವಾಗಿ ಕುಳಿತೆ. ಅಶೋಕನ ಜೊತೆ ಮಾತನಾಡಲೂ ಹೆದರಿಕೆ. ಆ ಸಮಯದಲ್ಲೇ ವಿಜಯನ ಫೋನ್ ಬಂದರೆ? ಒಂದು ಕ್ಷಣ ಯೋಚಿಸಿ, ನಂತರ ನಿರ್ಧಾರ ಮಾಡಿ, ಟೆಲಿಫೋನ್ ಆಪರೇಟರ್‌ಗೆ,

'ಮಿಸ್, ನಾನು ಅರ್ಜೆಂಟ್ ಕಾಲೊಂದರ ನಿರೀಕ್ಷೆಯಲ್ಲಿದ್ದೇನೆ. ಒಂದು ವೇಳೆ ಬೇರೆ ಕಡೆ ಮಾತನಾಡುತ್ತಿದ್ದರೂ, ಅದನ್ನು ತುಂಡರಿಸಿ, ಈ ಕಾಲ್ ಅನ್ನು ಕೊಡಿ' ಎಂದು ಹೇಳಿದೆ.

'ಯಸ್ ಸರ್' ಎಂದಳು ಆಕೆ.

ಈಗ ನೆಮ್ಮದಿಯಿಂದ ಅಶೋಕನಿಗೆ ಫೋನ್ ಮಾಡಿದೆ. ನನ್ನ ಧ್ವನಿ ಕೇಳಿದವನೇ ಅಶೋಕ,

'ಎಲ್ಲಿ ಹಾಳಾಗಿ ಹೋಗಿದ್ದೆಯೋ ಆನಂದ. ನಿನ್ನೆಯೆಲ್ಲ ನಿನಗೆ ಪ್ರಯತ್ನಿಸಿ ಸುಸ್ತಾದೆ, ಎಲ್ಲಿ ಹೋಗಿದ್ದೆ' ಎಂದು ದೂರಿನ ಮಾತಾಡಿದ ಅಶೋಕ.

'ಎಲ್ಲಾ ಹೇಳ್ತೀನಿ. ನೀನೇ ಇಲ್ಲಿ ಬಾ. ನಾನು ಇಲ್ಲಿಂದ ಕದಲುವ ಹಾಗಿಲ್ಲ' ಎಂದೆ.

ಅರ್ಧ ಘಂಟೆಯ ನಂತರ ಅಶೋಕ ಬಂದ. ಅವನಿಗೆ ಸಂಕ್ಷೇಪವಾಗಿ ಎಲ್ಲವನ್ನೂ ಹೇಳಿದೆ.

'ಅಲ್ಲವೋ, ಇದೇನೋ ನಿನ್ನ ಹುಚ್ಚುತನ! ಪಾಪ, ಹೋಗಿ ಹೋಗಿ ನೀನು ಆ ಸಿಂಗ್‌ನನ್ನು ಸಿಕ್ಕಿಸುತ್ತೀಯ ಅಂತ ಕಾಣುತ್ತೆ. ನಿನಗೆ ಇಲ್ಲಿಯ ವಿಷಯಗಳು ಗೊತ್ತಿಲ್ಲ ಅಂತ ಕಾಣುತ್ತೆ. ಇವರು ರಹಸ್ಯ ಎಂದರೆ ತೀರಿತು. ಸತ್ತ ಹೆಣ ನಾರುತ್ತಾ ಬಿದ್ದಿದ್ದರೂ ರಹಸ್ಯಾನ ಬಿಟ್ಟುಕೊಡೊಲ್ಲ. ಈಗ ಏನಾದರೂ ನಿಯಮಕ್ಕೆ ವಿರೋಧವಾಗಿ ಸಿಂಗ್ ವ್ಯವಹರಿಸಿ, ಸುಳಿಬಾರದ ಕಡೆ ಸುಳಿಯಲು ಹೋಗಿ, ವಿಜಯನನ್ನು ನೋಡೊದಕ್ಕೋ ಕಾಗದ ಕೊಡೋದಕ್ಕೋ ಪ್ರಯತ್ನಿಸಿದ ಅಂದರೆ, ಎಂಥ ತೊಂದರೆಗೆ ಸಿಕ್ಕಿ ಹಾಕಿಕೋತಾನೆ ಗೊತ್ತ... ಅವನನ್ನ ಡಿಸ್‌ಮಿಸ್ ಮಾಡಿದರೂ ಮಾಡಿದರೆ!' ಎಂದ.

ನನಗೆ ಗಾಬರಿಯೇ ಆಯಿತು. ಅಂತಹದೊಂದು ಅಪವಾದ ಹೊರುವುದಕ್ಕೆ ನಾನು ಸಿದ್ಧನಿರಲಿಲ್ಲ. ಹಾಗಾಗಿ ಫೋನ್ ಮಾಡಲು ನಿರ್ಧರಿಸಿ, ನೇರವಾಗಿ ಸಿಂಗ್‌ಗೆ ಡಯಲ್ ಮಾಡಿದೆ.

'ಹಲೋ ಮಿ. ಸಿಂಗ್'

'ಯಾರು... ಮಿ. ಆನಂದಕುಮಾರ್?'

'ಅರೆ, ಕ್ಷಣದಲ್ಲಿ ನನ್ನ ಧ್ವನಿಯನ್ನು ಗುರುತಿಸಿದರಲ್ಲ!'

'ಏನು ಮಿ. ಕುಮಾರ್, ನಿನ್ನೆ ನೀವು ನನ್ನ ಜೊತೆ ನಾಲ್ಕು ಘಂಟೆ ಕಳೆಯಲಿಲ್ಲವೇ? ನಿಮ್ಮ ಧ್ವನಿ ಪರಿಚಯವಾಗಲು ಅಷ್ಟಕ್ಕಿಂತ ಹೆಚ್ಚಿನ ಸಮಯ ಬೇಕೆ?'

ನನಗೆ ಸಂಜಯ ಸಿಂಗ್‌ನ ವ್ಯಕ್ತಿತ್ವ ಮನಸ್ಸಿಗೆ ಬಹಳ ಹಿಡಿಸಿತ್ತು.

'ನಾನು ಆಮೇಲೆ ತುಂಬಾ ಯೋಚಿಸಿದೆ ಮಿ. ಸಿಂಗ್.'

'ಏನು ವಿಷಯ ಮಿ. ಕುಮಾರ್?'

'ನನಗನ್ನಿಸಿತು ಮಿ. ಸಿಂಗ್... ನಿಮ್ಮ ಕೆರಿಯರ್‌ಗೆ ಇದರಿಂದ ತೊಂದರೆಯಾಗಬಹುದು ಅಂತ... ಹಾಗಾಗಿ...'

'ಅಷ್ಟೆಲ್ಲ ಸುಲಭದಲ್ಲಿ ಸಿಕ್ಕಿ ಬೀಳೋದಿಲ್ಲ. ಮಿ. ಕುಮಾರ್, ನಾನು... ಯಾರು ನಿಮಗೆ ಹೆದರಿಕೆ ಹುಟ್ಟಿಸಿದ್ದು.... ಆ ಹೆದರುಪುಕ್ಕಲ ಅಶೋಕನೇ?'

ನಾನು ಅಶೋಕನ ಕಡೆ ನೋಡಿದೆ. ಈ ಸಂಭಾಷಣೆಯನ್ನು ಅವನಿಗೆ ಹೇಗೆ ಹೇಳುವುದು?

'ಹಾಗೇನಿಲ್ಲ ಮಿ. ಸಿಂಗ್...'

'ನನಗೆಲ್ಲ ಗೊತ್ತಿದೆ ಮಿ. ಕುಮಾರ್, ಇಂತಹ ಮಾತೆಲ್ಲ ಆತನಿಗೆ ಹೊಳೆಯುವುದು.'

'ಇರಬಹುದು... ಆದರೆ ನೀವು ಈ ಮಾತನ್ನು ವಾಪಸ್ಸು ತೆಗೆದುಕೊಂಡರೆ ಒಳ್ಳೇದು ಅನ್ನಿಸುತ್ತೆ. ಅವನ ಗುಣ ನನಗೆ ಗೊತ್ತು.'

'ಹಾಂ... ಹಾಂ... ಎಲ್ಲಾ ಢೋಂಗಿ... ನಿಮ್ಮ ಹತ್ತಿರ ಹಾಗೆ ಮಾತಾಡಬಹುದು... ಅಲ್ಲೇ ಕೂತಿದಾನೆ ತಾನೆ... ಅವನಿಗೆ ಫೋನ್ ಕೊಡಿ' ಎಂದ ನಗುವ ಧ್ವನಿಯಲ್ಲೇ.

ಫೋನನ್ನು ಅಶೋಕನ ಕೈಗೆ ಕೊಡುವುದೇ?

'ಅದಿರಲಿ ಮಿ. ಸಿಂಗ್, ನೀವು ನಿಮ್ಮ ಯತ್ನದಲ್ಲಿ ಎಷ್ಟು ಸಫಲರಾದಿರಿ. ಅದನ್ನು ಹೇಳಲಿಲ್ಲವಲ್ಲ?'

'ಹೌದು... ಅದನ್ನು ಹೇಳಲು ಮರೆತೆ... ಅರ್ಧ ದೂರ ಬಂದಿದ್ದೇನೆ ಎನ್ನಬಹುದು, ಮುಂಚೆ ವಿಜಯ ನನಗೆ ಹತ್ತಿರದಲ್ಲೇ ಕುಳಿತುಕೊಳ್ಳುತ್ತಿದ್ದ. ಈಗ ದೂರ ಹೋಗಿದ್ದಾನೆ... ಅಂತೂ ಇಂತೂ ಈವತ್ತು ಅವನು ಇರೋ ಜಾಗ ಕಂಡು ಹಿಡಿದೆ.'

'ಹುಂ?'

'ಇನ್ನು ಮಿಕ್ಕಿದ್ದು ನಾಳೆ... ಅಪರೇಷನ್ ಗ್ರೇಟ್ ಕಾಂಟಾಕ್ಟ್... ಹಹ್ಹ. .'

'ಅವನು ಇರೋ ಜಾಗ ಹೇಗೆ ಕಂಡು ಹಿಡಿದಿರಿ?'

'ಅದೊಂದು ಸ್ವಲ್ಪ ಕಷ್ಟವೇ ಆಯಿತು. ನೇರವಾಗಿ ಕೇಳೋ ಹಾಗಿರಲಿಲ್ಲ. ಹಾಗಾಗಿ ಪರೋಕ್ಷವಾಗಿ ಪ್ರಯತ್ನ ಪಡಬೇಕಾಯಿತು.'

'ಆದರೂ...'

'ನಿಜ, ಯಾರೂ ಸುಲಭದಲ್ಲಿ ಬಾಯಿ ಬಿಡೋದಿಲ್ಲ. ಅದಕ್ಕಾಗಿ, ಆ ರಹಸ್ಯದ ಯೋಜನೆಯಲ್ಲಿ ನಿರತನಾಗಿದ್ದಾನೆ ಎಂದು ತಿಳಿದಿದ್ದ ಇನ್ನೊಬ್ಬನನ್ನು ಹಿಡಿದುಕೊಂಡೆ. ಪ್ರೊ। ರಿಚರ್ಡ್‌ಸನ್ ಅಲ್ಲಿಗೆ ಬರಹೇಳಿದ್ದಾರೆ ಅಂತ ಹೇಳಿದೆ...'

'ಅವನಿಗೆ ಅನುಮಾನ ಬರಲಿಲ್ಲವೇ?'

'ಬಂದಿರಬೇಕು. ಅದಕ್ಕೆ ಕೇಳಿದ, ಪ್ರೊಫೆಸರ್ ಹೇಳಬಹುದಾಗಿತ್ತಲ್ಲ, ಯಾವ ರೂಮಿಗೆ ಬರಬೇಕು ಅಂತ, ಅಂತಲೇ ಹೇಳಿದ, ಅದಕ್ಕೆ ನಾನು, ಬಹುಶಃ ನನಗೆ ಗೊತ್ತಿದೆ ಅಂತ ಅವರು ತಿಳಿದುಕೊಂಡಿದ್ದಾರೆ. ನನಗಾದರೋ ಅವರನ್ನು ಕೇಳೋದು ಹೇಗೆ ಅನ್ನೋ ಸಂಕೋಚ ಎಂದೆ.'

'ಹೂಂ!' ಪರವಾಗಿಲ್ಲ. ಸಂಜಯ್ ಸಿಂಗ್ ಬುದ್ಧಿವಂತಿಕೆ ಉಪಯೋಗಿಸಿದ್ದಾನೆ ಎಂದುಕೊಂಡೆ.

'ಹಾಗಾಗಿ ಕೊಠಡಿಯನ್ನು ಹೇಳಿದ'

'ಅದೇನು ಒಂದು ಕೊಠಡಿಯೇ?'

## ದರ್ಶನ

ಯಾರು ಹೇಳಿದ್ದು<br>
ಕಣ್ಣು ಮುಚ್ಚಿದಾಗ<br>
ಏನೂ ಕಾಣುವುದಿಲ್ಲವೆಂದು<br>
ನನಗಂತೂ ಕಾಣುತ್ತದೆ<br>
ಹೊಂಗನಸು!

● ಚಂದ್ರಶೇಖರ್

* * *

## ಕಠಿಣ ಹೃದಯಿ

ಬೀಜ ಕಾಯಾಯಿತು<br>
ಕಾಯಿ ಹಣ್ಣಾಯಿತು<br>
ಹಣ್ಣು ಮೊಗ್ಗಾಯಿತು<br>
ಮೊಗ್ಗು ಹೂವಾಯಿತು<br>
ಆದರೂ ನಿನ್ನೀ ಹೃದಯ<br>
ಕಲ್ಲಾಗಿಯೇ ಉಳಿಯಿತು.

● ಆರ್. ಕೆ. ನೀರಜ

'ಕೊಠಡಿ ಎಂದರೆ ಅದೊಂದು ಸಂಖ್ಯೆ. ಆ ಸಂಖ್ಯೆಗೆ ತಗುಲಿದ ಹಾಗೆ ಒಂದು ಕಾರಿಡಾರ್ ಇತ್ತು. ಅಲ್ಲಿ ನಾನು ಇಣುಕಿ ಹಾಕಿದೆ. ಅಲ್ಲೊಬ್ಬ ಸೆಕ್ಯುರಿಟಿ ಮನುಷ್ಯ ನಿಂತಿದ್ದ. ಅವನು ಒಳಗೆ ಹೋಗಿ ಬರುವವರನ್ನು ತನಿಖೆ ಮಾಡುತ್ತಿದ್ದ. ಪರಿಚಯದ ಪತ್ರ ಕೇಳುತ್ತಿದ್ದ.'

'ಅಲ್ಲಿ ಓಡಾಡುವುದಕ್ಕೆ ನಿಮ್ಮ ಬಳಿ ಪರಿಚಯದ ಪತ್ರವಿಲ್ಲವಲ್ಲ?'

'ನಿಜ. ಇಲ್ಲ. ಆದರೆ, ಹಾಗಂತ ಸುಮ್ಮನೆ ಕುಳಿತರೆ ಆಗುತ್ತದೆಯೇ? ಪ್ರಯೋಗಾಲಯದಲ್ಲಿ ಬೇರೆ ಕಡೆ ಕೆಲಸ ಮಾಡುವವರಿಗೆ, ಇಲ್ಲಿ ಪ್ರವೇಶ ದೊರಕಿಸಲು ಬೇರೊಂದು ಚಿಕ್ಕ ಪರಿಚಯ ಪತ್ರ ಕೊಡುತ್ತಿದ್ದರು ಎಂದು ಕೇಳಿದ್ದೆ. ಅದನ್ನು ಹುಡುಕುವ ಪ್ರಯತ್ನ ಮಾಡಿದೆ... ಅಂತೂ ಕೈಗೆ ಸಿಕ್ಕಿತು'

'ಹಾಂ!'

'ಹೌದು, ಸೆಕ್ಯುರಿಟಿ ಸೆಕ್ಷನ್‌ಗೆ ಹೋಗಿದ್ದೆ. ಅಲ್ಲಿ ಕುಳಿತು, ಆಫೀಸರ್ ಜೊತೆ ಮಾತನಾಡುತ್ತಾ, ನನ್ನ ಪರಿಚಯದ ಪತ್ರ ಹಳೆಯದಾಗಿದೆ ಎಂದು ಹೇಳಿದೆ. ಅವನು ಎಲ್ಲಿ ತೋರಿಸಿ ಎಂದು ಕೇಳಿದ. ನಾನು ನನ್ನ ಕಾರ್ಡ್ ಕೊಟ್ಟೆ. ಹಾಗೆ ಕೊಡುವಾಗ 'ಹಸಿರು ಬಣ್ಣದ ಕಾರ್ಡ್ ಒಂದನ್ನು ಕೊಡುತ್ತೀರಲ್ಲ, ಅದ್ಯಾವುದು' ಎಂದು ಕೇಳಿದೆ. ಆದಕ್ಕೆ ಅವನು, 'ಹಸಿರು ಕಾರ್ಡ್? ಅದು ಸ್ಪೆಷಲ್ ಸೆಕ್ಷನ್‌ಗೆ ಹೋಗುವ ಕಾರ್ಡ್' ಎಂದ. ನಾನು ನೋಡ ಬಹುದೇ ಎಂದು ಕೇಳಿದೆ. ಅವನು 'ಓಹೋ ಧಾರಾಳವಾಗಿ' ಎಂದ. ಹಾಗೆನ್ನುತ್ತಾ ಮೇಜಿನೊಳಗಿಂದ, ಕಾರ್ಡ್ ತೆಗೆದುಕೊಟ್ಟ. ಅದನ್ನು ನೋಡಿದೆ. ಹೌದು, ಅದೇ ಆಗಿತ್ತು. ನನ್ನ ಪುಣ್ಯಕ್ಕೆ ಕೈಗೆ ಕೊಡುವಾಗ, ಅವನ ಕೈಯಿಂದ ಒಂದಕ್ಕೊಂದು ಅಂಟಿಕೊಂಡು ಎರಡು ಬಂದಿದ್ದವು. ನಾನು ಟೇಬಲ್ ಕೆಳಗೆ, ನನಗೆ ಹತ್ತಿರದಲ್ಲಿ ಹಿಡಿದು ನೋಡುವವನಂತೆ, ಮೆಲ್ಲಗೆ ಒಂದನ್ನು ಬಿಡಿಸಿಕೊಂಡು, 'ಓಹೋ ಇದೇನಾ' ಎನ್ನುತ್ತಾ ಒಂದನ್ನು ವಾಪಸ್ ಕೊಟ್ಟೆ. ಅವನು ಅದನ್ನು ತಿರುಗಿ ಮೇಜಿನಲ್ಲಿ ಇಡುವುದ ರಲ್ಲಿ ಮಗ್ನನಾಗಿದ್ದಾಗ, ನಾನು ಇದನ್ನು ಜೇಬಿಗೆ ಸೇರಿಸಿದೆ.'

'ಅಬ್ಬಾ!'

'ನನಗೂ ಹಾಗೇ ಅನ್ನಿಸಿತ್ತು. ನನ್ನ ಕೈಗೆ ಜೋಡಿ ಕಾರ್ಡ್ ಸಿಕ್ಕಾಗ ಕೈ ಲಘುವಾಗಿ ನಡುಗುತ್ತಿತ್ತು. ಮುಖದ ಮೇಲೆ ಬೆವರಿನ ಹನಿ ಮೂಡಿತ್ತು. ಆದರೆ ಧೈರ್ಯ ವಹಿಸಿ, ಆ ಕಾರ್ಡನ್ನು ಜೇಬಿಗೆ ಸೇರಿಸಿದ್ದೆ.'

'ಈಗ?'

'ಈಗ ಮುಂದಿನದು ಸುಲಭ. ನನ್ನ ಹೆಂಡತಿಯ ಒಂದು ವಿಶೇಷ ಗುಣದ ಬಗ್ಗೆ ನಿಮಗೆ ಹೇಳಲಿಲ್ಲ. ಅವಳು ಬೇರೊಬ್ಬರ ಅಕ್ಷರವನ್ನು ನೋಡಿಕೊಂಡು ಹಾಗೆಯೇ ನಕಲು ಇಳಿಸಬಲ್ಲಳು – ರುಜುವನ್ನೂ ಕೂಡ! ಅವಳೇನಾದರೂ ಕಳ್ಳತನಕ್ಕೆ ಇಳಿದಿದ್ದರೆ, ಈ ವೇಳೆಗೆ ದೊಡ್ಡ ಫೋರ್ಜರ್ ಆಗಿ, ಕೋಟ್ಯಂತರ ಸಂಪಾದಿಸಬಹುದಾಗಿತ್ತು... ಪೆದ್ದು ಮುಂಡೇದು, ನನ್ನ ಮದುವೆ ಮಾಡಿಕೊಂಡು, ನನ್ನ ಮನೆಯಲ್ಲಿ ಪಾಪ ಜೀವವನ್ನು ಸವೆಸು ತ್ತಿದೆ... ಹುಂ...' ಎಂದ ಪರಿತಪಿಸುತ್ತ.

ನಾನು ಮಾತನಾಡಲಿಲ್ಲ. ಅವನು ಏನು ಹೇಳುತ್ತಾನೆಂದು ತಿಳಿದುಹೋಗಿತ್ತು.

'ಮಿ. ಸಿಂಗ್, ಈಗಲೂ ನಾನು ಹೇಳುತ್ತೇನೆ. ನಿಮ್ಮ ಪ್ರಾಣಕ್ಕೆ ಅಪಾಯವಾಗುವ ಪರಿಸ್ಥಿತಿ ಇದೆ ಎಂದು ನನಗನಿಸುತ್ತಿದೆ. ನೀವು ನನಗೋಸ್ಕರ ಈ ಕೆಲಸಕ್ಕೆ ಇಳಿಯುವುದು ನನಗೆ ಸಮ್ಮತವಾಗು ತ್ತಿಲ್ಲ. ಇಷ್ಟೆಲ್ಲ ನಿಮ್ಮ ಮಾತನ್ನು ಕೇಳಿದ ಮೇಲೆ ನಾನು ನಿಮ್ಮನ್ನು ಇಲ್ಲಿಯ ವರೆಗೆ ಎಳೆದುತಂದು ತಪ್ಪು ಮಾಡಿದೆನೇನೋ ಎಂದನ್ನಿಸುತ್ತಿದೆ.'

'ಯಾಕೆ ಯೋಚಿಸುತ್ತಿದ್ದೀರಿ ಮಿ. ಆನಂದ ಕುಮಾರ್. ನೀವು ಆ ಅಶೋಕನ ಹಾಗೆ ಹೆದರಿ ಕೊಂಡು ಮಾತನಾಡುತ್ತಿದ್ದೀರಿ... ಯೋಚನೆ ಮಾಡಬೇಡಿ. ನಾಳೆ ನೋಡುವಿರಂತೆ' ಎಂದು ಹೇಳಿ ನನಗೆ ಮುಂದಕ್ಕೆ ಮಾತನಾಡಲು ಅವಕಾಶ ಕೊಡದೆ, ಫೋನನ್ನು ಕೆಳಗಿಟ್ಟ.

ನಾನು ಕೆಲವು ಕ್ಷಣಗಳ ಕಾಲ ಕೈಯಲ್ಲಿ ಫೋನನ್ನು ಹಿಡಿದುಕೊಂಡು ಏನು ಮಾಡುವುದು ಎಂದು ಯೋಚಿಸುತ್ತಿದ್ದು, ನಂತರ ನಿಟ್ಟುಸಿರು ಬಿಡುತ್ತಾ ರಿಸೀವರನ್ನು ಕೆಳಗಿಟ್ಟೆ.

* * *

ಅಶೋಕ್ ಹೇಳಿದ್ದು ನನಗೆ ಸರಿ ಎನಿಸಿತ್ತು. ಒಂದು ವೇಳೆ ಅಪಾಯದ ಕೆಲಸವೇ ಆದರೆ, ಅದಕ್ಕೆ ಕೈಹಾಕುವುದಾದರೆ ನಾನು ಹಾಕ ಬೇಕಾಗಿತ್ತು; ನಾನು ಅದರ ಪರಿಣಾಮವನ್ನು ಅನುಭವಿಸಬೇಕಾಗಿತ್ತು. ಸಂಜಯ ಸಿಂಗ್‌ನನ್ನು ಉದ್ರೇಕಿಸಿ ಅವನನ್ನು ಸಿಲುಕಿಸುವುದು ಯಾವ ನ್ಯಾಯ? ಅವನಿಗೆ ಬೇರೆ ಈಗ ರಜಪೂತರ ರಕ್ತದ ಭೂತ ತಲೆಯ ಮೇಲೆ ಸವಾರಿ ಮಾಡುತ್ತಿದೆ. ಅವನಂತೂ ಸುಲಭದಲ್ಲಿ ಹಿಂಜರಿಯುವವನಲ್ಲ. ಏನಾದರೂ ಹೆಚ್ಚು ಕಡಿಮೆಯಾದರೆ?!

ಮಾರನೇ ದಿನವೆಲ್ಲ ಆತಂಕದಲ್ಲೆ ಕಳೆದೆ. ಸಂಜೆ ಬೇಗ ಹೊಟೇಲ್‌ಗೆ ಬಂದು ತಲುಪಿದೆ. ನನಗಾಗಿ ಮೆಸೇಜ್ ಕಾಯ್ದುಕೂತಿತ್ತು –

ಸಂಜಯ ಸಿಂಗ್‌ನಿಂದ, ಬರುತ್ತಿದ್ದಂತೆ ಮನೆಗೆ ಫೋನ್ ಮಾಡಬೇಕು ಎಂದು.

ನಾನು ಫೋನ್ ಮಾಡಿದೆ. ಅವನು ಅದಕ್ಕೆ ಕಾಯುತ್ತಾ ಕುಳಿತಂತೆ ಕಂಡಿತು. ಒಂದು ರಿಂಗ್ ಆಗುವುದಕ್ಕಿಲ್ಲ ರಿಸೀವರ್ ಎತ್ತಿಕೊಂಡಿದ್ದ.

'ನಾನು ಹೇಳಲಿಲ್ಲವೇ ಮಿ. ಆನಂದ ಕುಮಾರ್, ನೀವು ವೃಥಾ ಗಾಬರಿಗೊಂಡಿರಿ. ನನ್ನ ಹೆಂಡತಿಯ ಫೋರ್ಜರಿಯನ್ನು ಕಂಡುಹಿಡಿಯು ವುದು ಅಷ್ಟು ಸುಲಭವಲ್ಲ... ಅದೂ ಅಲ್ಲದೇ ನನ್ನ ಕೆಲಸ ಎಷ್ಟು ನಿಮಿಷಗಳದ್ದು? ಐದು ನಿಮಿಷಗಳದ್ದು! ಹೀಗೆ ಹೋದೆ ಹಾಗೆ ಬಂದೆ. ವಿಜಯನ ಮೇಜು ಕಂಡುಹಿಡಿಯುವುದು ಕಷ್ಟವಾಗಲಿಲ್ಲ. ವಾಸ್ತವವಾಗಿ ಅದೊಂದು ಸಣ್ಣ ಕ್ಯೂಬಿಕಲ್. ಅದರ ಹೊರಗಡೆ ಅವನ ಹೆಸರಿನ ಬೋರ್ಡ್ ನೇತಾಡುತ್ತಿತ್ತು. ಅಲ್ಲಿ ಮೇಜಿನ ಮೇಲೆ ನಿಮ್ಮ ಪತ್ರ ಇಟ್ಟು, ಅದರ ಮೇಲೆ ಪೇಪರ್‌ವೇಯ್ಟ್ ಇಟ್ಟು ಬಂದೆ. ಒಂದೇ ಒಂದು ನನಗೆ ಸಂತೋಷ ತರದ ಸಮಾಚಾರ ಎಂದರೆ, ವಿಜಯನನ್ನು ಮುಖತಃ ಭೇಟಿ ಮಾಡಲಾಗ ಲಿಲ್ಲ...' ಎಂದ ಅರೆ ಸಂತೋಷದ ಧ್ವನಿಯಲ್ಲಿ.

ಏನು ಹೇಳುವುದು? ಕೇಳಿ ಸಂತೋಷ ವ್ಯಕ್ತಪಡಿಸಬೇಕಾಗಿತ್ತು. ಆದರೆ ಅದೇಕೋ ಸಂತೋಷವಾಗಿರಲಿಲ್ಲ. ಆದರೂ ಸುಮ್ಮನೆ ಇರುವುದು ಸರಿಯಲ್ಲ.

'ತುಂಬಾ ಥ್ಯಾಂಕ್ಸ್ ಮಿ. ಸಂಜಯ ಸಿಂಗ್, ನೀವು ನನ್ನ ಕೆಲಸ ಬಹಳ ಹಗುರ ಮಾಡಿದಿರಿ... ನಿಮಗೆ... ನಿಮಗೆ...'

'ಹೇಳಿ ಮಿ. ಆನಂದಕುಮಾರ್'

'ನಿಮಗೆ ನಿಜವಾಗಿಯೂ ಅಲ್ಲೆಲ್ಲೂ ವಿಜಯ ಕಾಣಿಸಲಿಲ್ಲವೇ?'

'ಇಲ್ಲ'

'ಮತ್ತೆ ಇನ್ನೇನಾದರೂ ವಿಶೇಷವನ್ನು ಗಮನಿಸಿದಿರಾ?'

ಕೆಲವು ಕ್ಷಣಗಳ ಕಾಲ ಸಂಜಯ ಸಿಂಗ್ ಮೌನವಾಗಿದ್ದ.

'ನೀವು ಕೇಳಿದ ಮೇಲೆ ನನಗೆ ಕೆಲವು ವಿಷಯ ಗಳು – ಆಗ ವಿಶೇಷ ಅನ್ನಿಸಿರಲಿಲ್ಲ – ಈಗ ವಿಶೇಷ ಅನ್ನಿಸುತ್ತಿದೆ.'

ನಾನು ಪ್ರಶ್ನಿಸಲು ಹೋಗಲಿಲ್ಲ. ಅವನೇ ಮಾತನಾಡಲಿ ಎಂದು ಸುಮ್ಮನಿದ್ದೆ.

'ನಿಜ... ವಿಜಯನ ಮೇಜು ಬಹಳ ಸ್ವಚ್ಛ ವಾಗಿತ್ತು... ಬಹಳ ಸ್ವಚ್ಛ ಅಂದರೆ ಬಹಳ ಸ್ವಚ್ಛ... ಅಂದರೆ ಅವನು ಮೇಜಿನ ಮೇಲೆ ಕುಳಿತುಕೊಂಡಿದ್ದರ ಚಿಹ್ನೆ, ಕೆಲಸ ಮಾಡಿದ್ದರ ಚಿಹ್ನೆ ಕಾಣಿಸುತ್ತಿರಲಿಲ್ಲ... ಅರ್ಥವಾಯಿ ತಲ್ಲ?'

'ಅರ್ಥವಾಯಿತು'

'ಅಕ್ಕಪಕ್ಕದ ಕ್ಯಾಬಿನ್‌ಗಳಲ್ಲಿ ಯಾರಾದರೂ ಇದ್ದರೆ ಅವರ ಜೊತೆ ನಾನು ಮಾತನಾಡ ಬೇಕಿತ್ತು. ಆದರೆ ನಾನೇ ಕಳ್ಳತನದಿಂದ ಹೋಗಿದ್ದರಿಂದ, ನನ್ನ ಮನಸ್ಸಿನಲ್ಲಿ ದುಗುಡವಿದ್ದುದರಿಂದ, ಯಾರಿಗೂ ನನ್ನ



ಮನಸ್ಸನ್ನು ತೋರಿಸುವ ಇಚ್ಛೆಯಿರಲಿಲ್ಲ. ಆದರೆ... ಆದರೆ... ಈಗನ್ನಿಸುತ್ತದೆ... ಅಲ್ಲಿ ಕೂಡ ಅನೇಕರು ಇರಲಿಲ್ಲ...'

'ಹುಂ...'

'ಇನ್ನು ಪ್ರೊ। ರಿಚರ್ಡ್‌ಸನ್ ಹೆಸರು ಎಲ್ಲಾದರೂ ಕಾಣಬೇಕಾಗಿತ್ತು. ಅದೂ ಕಾಣ ಲಿಲ್ಲ.'

'ಮಿ. ಸಿಂಗ್' ಎಂದೆ ನಾನು ತಡೆಯಲಾಗದೆ.

'ಹೇಳಿ ಮಿ. ಆನಂದಕುಮಾರ್.'

'ನೀವು ಮಿಕ್ಕಿದ್ದನ್ನು ನನಗೆ ಬಿಡಿ, ಇದು ಬರಬರುತ್ತಾ ನಿಗೂಢವಾಗುತ್ತಿದೆ' ಎಂದೆ.

'ನೀವೇನು ಮಾಡಬಲ್ಲಿರಿ?' ಎಂದು ಅವನು ಅಚ್ಚರಿಯ ದನಿಯಲ್ಲಿ ಕೇಳಿದ.

'ನೋಡುವಿರಂತೆ' ಎಂದೆ ಹುಚ್ಚು ಧೈರ್ಯ ದಿಂದ.

* * *

ಆಗೇನೋ ಹುಚ್ಚು ಧೈರ್ಯ ತೋರಿಸಿದ್ದೆ. ಅದನ್ನೇ ಈಗ ಮುಂದುವರಿಸಬೇಕಿತ್ತು. ನಾನು ನೇರವಾಗಿ ಭಾರತೀಯ ರಾಯಭಾರಿ ಕಚೇರಿಯ ಜೊತೆ ಸಂಪರ್ಕ ಸಾಧಿಸುವ ನಿರ್ಧಾರ ಮಾಡಿದೆ. ಆದರೆ, ಅದಕ್ಕೆ ಮುನ್ನ, ನನ್ನಂತಹ ಸಾಮಾನ್ಯನನ್ನು 'ಕ್ಯಾರೇ' ಎಂದು, ಕೇಳುವವರಿಲ್ಲ ಎಂದು ಚೆನ್ನಾಗಿ ಗೊತ್ತಿದ್ದ ನನಗೆ, ಸ್ವಲ್ಪ ವಶೀಲಿ ಉಪಯೋಗಿಸ ಬೇಕಾಯಿತು.

ನೇರ ದಿಲ್ಲಿಗೆ ಫೋನ್ ಮಾಡಿದೆ. ವಿದೇಶಾಂಗ ಖಾತೆಯ ಕಾರ್ಯದರ್ಶಿ ನನ್ನ ಖಾಸಾ ದೊಡ್ಡಪ್ಪ.

'ಏನೋ ಇದು ಆನಂದ? ಎಲ್ಲಿಂದ ಮಾತಾಡ್ತಿದ್ದೀಯ? ಏನು ಸಮಾಚಾರ?'

ನನಗೆ ವಿವರವಾಗಿ ಹೇಳುವುದಕ್ಕೆ ಇಷ್ಟವಿರ ಲಿಲ್ಲ. ಅದೂ ಅಲ್ಲದೆ, ಅಷ್ಟು ಮಾತನಾಡಿದರ ಟೆಲಿಫೋನ್ ಬಿಲ್ ಏನಾಗುತ್ತದೆ!

'ದೊಡ್ಡಪ್ಪ, ಇಲ್ಲಿ ನನ್ನ ಗೆಳೆಯನಿಗೆ ಪ್ರಾಣಾಪಾಯ ಸಂಭವಿಸುವ ಸ್ಥಿತಿ ಇದೆ. ನೀನು ಈಗಲೇ ರಾಯಭಾರಿ ಕಚೇರಿಗೆ ಫೋನು ಮಾಡು. ನಾನು ಅಲ್ಲಿಗೆ ಹೋಗುತ್ತಿದ್ದೇನೆ. ನನಗೆ ಅವರ ನೆರವು ಬೇಕು' ಎಂದೆ.

ನಾನು ಪ್ರಯಾಣ ಮಾಡಿ, ಒಂದು ಕಡೆಯಿಂದ ಇನ್ನೊಂದು ಕಡೆಗೆ ವಾಹನಗಳನ್ನು ಬದಲಾಯಿಸಿ, ಭಾರತೀಯ ಕಚೇರಿಯ ಬಾಗಿಲಲ್ಲಿ ನಿಲ್ಲುವ ವೇಳೆಗೆ ಬೆಳಗ್ಗೆ ಆಗಿತ್ತು. ನನ್ನ ಪರಿಚಯ ಕೊಡುತ್ತಿದ್ದಂತೆ, ನನಗೆ ಮರ್ಯಾದೆಯಿಂದ ಒಳಗೆ ಕರೆದುಕೊಂಡು ಹೋದರು. ಓಹೋ, ನಮ್ಮ ದೊಡ್ಡಪ್ಪ ತಮ್ಮ ಮಾತಿನಂತೆ ಈಗಾಗಲೇ ಫೋನ್ ಮಾಡಿದ್ದಾರೆ ಎಂದುಕೊಂಡೆ.

ಅಂತೂ ನನಗೆ ರಾಯಭಾರ ಕಚೇರಿಯಲ್ಲಿ ವಿಶೇಷವಾದ ಸ್ವಾಗತ ಸಿಕ್ಕಿತು.

- ಅಲ್ಲಿಂದ ತಿರುಗಿ ಹೋಗುವಾಗ ಒಂದು ಮಹತ್ವದ ಪತ್ರವನ್ನು ನನ್ನ ಜೇಬಿನಲ್ಲಿ ಮಡಚಿಟ್ಟುಕೊಂಡಿದ್ದೆ.

* * *

ಒಂದು ವಾರದ ಗಡುವಿನವರೆಗೆ ಕಾಯುವು ದಕ್ಕೆ ಹೋಗಲಿಲ್ಲ. ಹೇಗೂ ಆವತ್ತಿನ ಕಾರ್ಯ ಕ್ರಮಕ್ಕೆ ತಿಲಾಂಜಲಿ ಇತ್ತಾಗಿತ್ತು. ಹಾಗಾಗಿ ಮಧ್ಯಾಹ್ನದ ವೇಳೆಗೆ ನಾನು ಪ್ರಯೋಗಾಲಯದ ಕಡೆ ಧಾವಿಸಿದ್ದೆ.

ಸೆಕ್ಯುರಿಟಿಯಲ್ಲಿ ಮತ್ತೆ ಅವೇ ಪ್ರಶ್ನೆಗಳ ಸುರಿಮಳೆಯಾದವು. ನಾನು ಈಗ ಮೊದಲಿ ಗಿಂತ ಹೆಚ್ಚು ಗಟ್ಟಿಯಾಗಿದ್ದೆ. ಅಂತೂ ಪ್ರೊ। ರಿಚರ್ಡ್‌ಸನ್ ನನ್ನನ್ನು ತಮ್ಮ ಬಳಿ ಕರೆಸಿಕೊಳ್ಳುವುದು ಅನಿವಾರ್ಯವಾಯಿತು.

'ಮಿ। ಆನಂದಕುಮಾರ್, ನಾನು ನಿಮಗೆ ಹೇಳಿದ್ದೆನಲ್ಲ, ಒಂದು ವಾರದ ವರೆಗೆ ತಾಳ್ಮೆ ಯಿಂದ ಇರಿ ಅಂತ. ಹೀಗೆ ನೀವು ಪದೇ ಪದೇ ಬಂದರೆ, ನಮ್ಮ ಕೆಲಸಕ್ಕೆ ಅಡ್ಡಿಯಾಗುತ್ತದೆ' ಎಂದರು ಆಕ್ಷೇಪಿಸುವ ಧ್ವನಿಯಲ್ಲಿ.

'ಪ್ರೊಫೆಸರ್, ನಾನು ಈಗ ಮೊದಲಿನಂತೆ ಕೇವಲ ಊಹಾಪೋಹದ ಆಧಾರದ ಮೇಲೆ ಮಾತನಾಡಲು ಬಂದಿಲ್ಲ. ನನ್ನ ಮುಂದೆ ಕೆಲವು ವಿಶಿಷ್ಟವಾದ ತಥ್ಯಗಳು ಕಾಣಿಸಿಕೊಂಡಿವೆ. ಹಾಗಾಗಿ...'

'ತಥ್ಯಗಳು ? !'

'ಹೌದು ಪ್ರೊಫೆಸರ್... ಉದಾಹರಣೆಗೆ, ನೀವು ಈಗ ಡಾ। ವಿಜಯಕುಮಾರನ ಮೇಲಧಿಕಾರಿಯಲ್ಲವಂತೆ... ಇದು ನಿಜವೇ ?'

ಒಂದು ಕ್ಷಣ ಗಾಭರಿಯಾದವರಂತೆ ಅವರು ಕುಳಿತರು.

'ಯಾರು ಹೇಳಿದರು ನಿಮಗೆ ?'

'ಪ್ರೊಫೆಸರ್, ನೀವು ನನಗೆ ಕೆಲವು ಆಶ್ವಾಸನೆಗಳನ್ನು ಕೊಟ್ಟಿದ್ದೀರಿ. ಒಂದು ವಾರ ಕಾಲ ತಾಳ್ಮೆಯಿಂದ ಇರಲು ಹೇಳಿದ್ದೀರಿ. ಅವನ ಜೀವದ ಭದ್ರತೆಯ ಬಗ್ಗೆ ಏನು ಆಶ್ವಾಸನೆ ಕೊಡಬಲ್ಲಿರಿ ?'

ನನ್ನ ಕಡೆ ಬಿಟ್ಟಬಾಯಿಯಿಂದ ನೋಡುತ್ತಿದ್ದರು ಪ್ರೊ। ರಿಚರ್ಡ್‌ಸನ್.

'ಯಾವಾಗ ಡಾ। ವಿಜಯಕುಮಾರ್ ನಿಮ್ಮ ಬಳಿ ಕೆಲಸವನ್ನೇ ಮಾಡುತ್ತಿಲ್ಲವೋ, ಅಂತಹ ವ್ಯಕ್ತಿಯ ಬಗ್ಗೆ ನೀವೇನು ಆಶ್ವಾಸನೆ ನೀಡಬಲ್ಲಿರಿ ?'

ನಿಧಾನವಾಗಿ ಅವರ ಮುಖದ ಮೇಲೆ ಕಳೆದು ಹೋಗಿದ್ದ ಬಣ್ಣ ತಿರುಗಿ ಬಂದಿತು. ಅವರು ಮಾತನಾಡಲು ನಿರ್ಧರಿಸಿದರು.

'ಮಿ। ಆನಂದಕುಮಾರ್... ನೀವು ಕೇಳಿರುವ ಮಾತು ಸುಳ್ಳು... ಅವರ ಮೇಲಧಿಕಾರಿ ಈಗಲೂ ನಾನೇ... ಯಾರೋ ನಿಮಗೆ ಸುಳ್ಳು ಹೇಳಿದ್ದಾರೆ...'

'ಹಾಗೇನು ? ಹಾಗಾದರೆ, ನಿಮ್ಮ ರಹಸ್ಯ ಪ್ರಾಜೆಕ್ಟ್‌ನಲ್ಲಿ ಕೆಲಸ ಮಾಡುವವರು ಯಾರು ? ಅವರ ಕೆಲಸದ ಅಂತಸ್ತೇನು ?' ಎಂದು ಕೇಳಿದೆ ಗಟ್ಟಿಸುವ ದನಿಯಲ್ಲಿ.

ಅವರಿಗೆ ಈ ಮಾತಿನಿಂದ ಸಿಟ್ಟು ಬಂದಿತು.

'ಈ ಮಾತು ಕೇಳಲು ನೀವಾರು ಮಿ. ಆನಂದಕುಮಾರ್ ? ನೀವು ನಿಮ್ಮ ಮಿತಿಯೊಳಗೆ ವ್ಯವಹರಿಸಿದರೆ ಮೇಲು. ಇದು ರಹಸ್ಯ ಪ್ರಾಜೆಕ್ಟ್ ಎಂದಮೇಲೆ ತೀರಿತು... ಇದರ ಬಗ್ಗೆ ಯಾರಿಗೂ ಏನೂ ಹೇಳಬೇಕಾದ ಅಗತ್ಯ ನನಗಿಲ್ಲ...' ಎಂದರು.

'ಹಾಗೇನು ? ಹಾಗಾದರೆ ಈ ಪತ್ರವನ್ನು ಓದಿ' ಎಂದು ಅವರಿಗೆ ಭಾರತದ ರಾಯಭಾರಿ ಕಚೇರಿಯವರು ಕೊಟ್ಟಿದ್ದ ಪತ್ರವನ್ನು ಕೊಟ್ಟೆ. ನಾನು ಈಗಾಗಲೇ ಈ ಪತ್ರದ ಪ್ರತಿಯನ್ನು ಮಾಡಿಟ್ಟಿದ್ದೆ. ಅಶೋಕನಿಗೆ ದೀರ್ಘವಾದ ಪತ್ರವನ್ನು ಬರೆದಿಟ್ಟಿದ್ದೆ – ಏನಾದರೂ ಹೆಚ್ಚು ಕಡಿಮೆಯಾದರೆ ಏನು ಮಾಡಬೇಕೆಂದು ಹೇಳಿ ಅವನಿಗೆ ನಿರ್ದೇಶನವಿತ್ತಿದ್ದೆ.

ಅವರು ಆ ಪತ್ರವನ್ನು ಓದಿದಾಗ ಅವರ ಮುಖ ಮತ್ತೆ ನಿರ್ವರ್ಣ್ಣವಾಯಿತು. ಆ ಪತ್ರದಲ್ಲಿ

---

**ನನ್ನೂರು ನನ್ನ ಜನ**

## ಬೆಳ್ಳಿತೆರೆಯ ಸಾಲಿಗ್ರಾಮ

ಸಾಲಿಗ್ರಾಮ ಎಂದಾಕ್ಷಣ ಶಿವರಾಮ ಕಾರಂತರು ನೆನಪಾಗಬಹುದು. ಆದರೆ ನಾನು ಹೇಳುತ್ತಿರುವುದು ಮೈಸೂರು ಜಿಲ್ಲೆ ಕೃಷ್ಣರಾಜ ನಗರ ತಾಲೂಕಿನ ಸಾಲಿಗ್ರಾಮ.

ದಕ್ಷಿಣ ಕನ್ನಡ ಜಿಲ್ಲೆಯ ಸಾಲಿಗ್ರಾಮ ಸಾಹಿತ್ಯ ದಿಗ್ಗಜನನ್ನು ಪಡೆದು ಪ್ರಸಿದ್ಧವಾದರೆ, ಈ ಸಾಲಿಗ್ರಾಮ ಕನ್ನಡ ಚಲನಚಿತ್ರರಂಗದ ಸೃಷ್ಟಿಕರ್ತರನ್ನು ಸೃಷ್ಟಿ ಮಾಡಿದ ಊರು. ವರನಟ ಡಾ। ರಾಜ್‌ಕುಮಾರ್ ಅವರ ಪತ್ನಿ ಪಾರ್ವತಮ್ಮ, ಎಸ್. ಎ. ಚಿನ್ನೇಗೌಡ, ಎಸ್. ಎ. ಗೋವಿಂದರಾಜ್, ಎ. ರಾಮೇಗೌಡ ಹೀಗೆ ಹಲವಾರು ದಿಗ್ಗಜಗಳನ್ನು ಪಡೆದಿದೆ.

ಇಲ್ಲಿ ಭಾಸ್ಕರ ದೇವಾಲಯ, ಯೋಗಾನರಸಿಂಹ ಸ್ವಾಮಿ ದೇವಾಲಯಗಳು ಧಾರ್ಮಿಕವಾಗಿ ಪ್ರಾಮುಖ್ಯ ಪಡೆದಿವೆ. ಭಾಸ್ಕರ ದೇವಾಲಯದ ಮುಂದೆ ಇರುವ ಕೊಳವು ಭಕ್ತಾದಿಗಳು ಹರಕೆ ಹೊತ್ತು ತುಂಬಿರುವ ಬಂಗಾರದಿಂದಲೇ ತುಂಬಿಹೋಗಿದೆ ಎಂಬ ಮಾತೂ ಇದೆ !

● ಅಶೋಕ್, ಬಸವನಹಳ್ಳಿ

## ಹೋಲಿಕೆ

ಪ್ರಿಯೆ,
ನಿನ್ನ ಮುಖವನು ನಾನು
ಕಮಲವೆನ್ನಲಾರೆ
ಅಲ್ಲಿ,
ಕೆಸರಿನ ಲವಲೇಶವೂ ಇಲ್ಲ
ಚಂದ್ರನೂ ಎನ್ನಲಾರೆ
ಅಲ್ಲಿ
ಕಲಂಕವೂ ಇಲ್ಲ.

● ಎಂ. ಟಿ. ಉಪಾಧ್ಯೆ

ಪ್ರಯೋಗಾಲಯದ ಅಧಿಕಾರಿಗಳಿಗೆ ನನ್ನ ಜೊತೆ ಸಹಕಾರ ನೀಡಲು ಸ್ಪಷ್ಟವಾಗಿ ಸೂಚಿಸಲಾಗಿತ್ತು. ಈ ಪ್ರಸಂಗ ಭಾರತ ಸರಕಾರದ ಗಮನಕ್ಕೆ ಬಂದಿದೆ ಎಂದೂ ಹೇಳಲಾಗಿತ್ತು. ಒಬ್ಬ ಭಾರತೀಯ ವಿಜ್ಞಾನಿಯ ಬಗ್ಗೆ ಬೇಜವಾಬ್ದಾರಿಯ ವರ್ತನೆ ಎರಡೂ ದೇಶಕ್ಕೆ ಒಳ್ಳೆಯದಲ್ಲ ಎಂದು ಅದರಲ್ಲಿ ಸೂಕ್ಷ್ಮವಾಗಿ ಎಚ್ಚರಿಕೆ ಕೊಡಲಾಗಿತ್ತು.

ನನಗೆ ಇಂತಹ ಪತ್ರದ ಮಹತ್ವ ಚೆನ್ನಾಗಿ ಗೊತ್ತಿತ್ತು. ಇಂತಹ ಪತ್ರವನ್ನು ವಿದೇಶಾಂಗ ಖಾತೆಯ ಮೂಲಕ ಕೊಟ್ಟಾಗ, ಅದನ್ನು ಸಂಬಂಧಪಟ್ಟ ಅಧಿಕಾರಿಗಳು ನಿರಾಕರಿಸುವ ಹಾಗಿರಲಿಲ್ಲ. ಹಾಗೊಂದು ವೇಳೆ ಮಾಡಿದರೆ, ರಾಯಭಾರಿ ಮಟ್ಟದ ಸಂಬಂಧಗಳಿಗೆ ಅದು ಘಾತವನ್ನುಂಟು ಮಾಡಬಹುದಾಗಿತ್ತು!

ಆ ಪತ್ರ ಓದಿದ ಮೇಲೆ ಅವರ ಕೈ ನಡುಗುತ್ತಿತ್ತು. ಬಹಳ ಹೊತ್ತು ಹಾಗೇ ಕುಳಿತಿದ್ದರು. ಏನು ಮಾಡುವುದು ಎಂದು ಅವರು ಆಲೋಚಿಸುತ್ತಿರಬೇಕು. ಕಡೆಗೆ,

'ನನಗೆ ಇನ್ನೊಂದು ದಿನದ ಮಟ್ಟಿಗೆ ಅವಕಾಶ ಕೊಡಿ, ಮಿ। ಆನಂದಕುಮಾರ್' ಎಂದು ತಗ್ಗಿದ ದನಿಯಲ್ಲಿ ಕೇಳಿಕೊಂಡರು.

ನಾನು ತಲೆಯಾಡಿಸಿದೆ.

* * *

ಅಂದು ಸಂಜೆ ಹೊಟೇಲಿನಲ್ಲಿ ಆರಾಮವಾಗಿ ಹಾಸಿಗೆಯ .ಮೇಲೆ ಕಾಲುಚಾಚಿಕೊಂಡು ಮಲಗಿದ್ದೆ. ಪ್ರಯೋಗಾಲಯದಿಂದ ವಾಪಸ್ಸು ಬಂದಮೇಲೆ ಅಶೋಕನ ಜೊತೆ ಮಾತನಾಡಲು ಪ್ರಯತ್ನಿಸಿರಲಿಲ್ಲ. ಅವನು ಕೆಲಸದ ಮಧ್ಯೆ ಸಿಕ್ಕಿಹಾಕಿಕೊಂಡಿರುತ್ತಾನೆ. ಹೊತ್ತಾದ ಮೇಲೆ ಅವನ ಮನೆಗೇ ಫೋನ್ ಮಾಡಿ ಮಾತನಾಡುವುದು ಎಂದು ನಿರ್ಧರಿಸಿದ್ದೆ.

ಹಾಗೆ ಕಾಲುಚಾಚಿ ಮಲಗಿದ್ದಾಗ ಫೋನಿನ ಗಂಟೆ ಬಾರಿಸಿತು. ಓಹೋ, ಅಶೋಕನೇ ಮಾತನಾಡಲು ಪ್ರಯತ್ನಿಸುತ್ತಿದ್ದಾನೆ ಎಂದುಕೊಂಡು ರಿಸೀವರನ್ನು ಕೈಗೆತ್ತಿಕೊಂಡೆ.

'ಹಲೋ' ಎಂದೆ.

'ಆನಂದ?' ಎಂದು ಪ್ರಶ್ನಿಸಿದ ಧ್ವನಿಯನ್ನು ಗುರುತಿಸುತ್ತಿದ್ದಂತೆ ನನಗೆ ಆನಂದದಿಂದ ಹುಚ್ಚು ಹಿಡಿಯುವುದೊಂದು ಬಾಕಿ.

'ವಿಜಯ!' ಎಂದು ಚೀರಿದೆ. ನನ್ನ ಚೀರುವಿಕೆಗೆ ಇಡಿ ಹೊಟೇಲ್ ಅದುರಿಹೋಗಿರಬೇಕು!

'ಅಷ್ಟು ಜೋರಾಗಿ ಚೀರಬೇಡವೊ. ನನಗಿನ್ನೂ ಅಷ್ಟು ಕಿವುಡು ಬಂದಿಲ್ಲ' ಎಂದ ನಗುವ ಧ್ವನಿಯಲ್ಲಿ. ನನಗೆ ಎಷ್ಟು ಸಂತೋಷವಾಗುತ್ತಿತ್ತು ಎಂದು ಅವನಿಗೆ ಹೇಗೆ ಹೇಳಲಿ?

'ವಿಜಯ, ಏನಿದೆಲ್ಲ? ಏನಾಗಿದೆ ನಿನಗೆ? ಏನು ಪ್ರಾಜೆಕ್ಟ್ ಅದು? ಯಾರಿಗೂ ನೀನು ಮುಖ ತೋರಿಸಬಾರದು ಎಂದರೆ ಏನರ್ಥ? ನಿನ್ನ ಹೆಂಡತಿ ಎಷ್ಟು ಗಾಬರಿಯಾಗಿದ್ದಾಳೆ ಗೊತ್ತೆ?...' ನಾನು ಉಸಿರಿಗೂ ಅವಕಾಶ ಕೊಡದೆ ಒದರುತ್ತಿದ್ದೆ.

'ನಿಧಾನ... ನಿಧಾನ... ಒಂದೊಂದಾಗಿ ಆಗಲಿ... ಹುಂ... ನಿನ್ನ ಕಾಗದಾನ ಪ್ರೊ। ರಿಚರ್ಡ್‌ಸನ್ ತಂದುಕೊಟ್ಟರು... ಈವತ್ತು'

'ಹೌದಾ, ಸರಿ'

ಹಾಗೆಂದೇನೋ ಅಂದೆ. ನಂತರ ಆ ಮಾತಿನ ಅರ್ಥ ನಿಧಾನವಾಗಿ ನನ್ನ ತಲೆಯಲ್ಲಿ ಇಳಿಯಿತು. ನನ್ನ ಕಾಗದ ನೇರವಾಗಿ ಅವನ ಕೈಗೆ ಸಿಕ್ಕಿಲ್ಲ. ವಿಜಯ ತನ್ನ ಮೇಜಿನ ಕಡೆಗೆ ಹೋಗಿಲ್ಲ. ಅದರ ಬದಲು ಅವನ ಮೇಜಿನ ಮೇಲಿದ್ದ ನನ್ನ ಕಾಗದ, ಪ್ರೊಫೆಸರ್ ಕೈ ತಲುಪಿದ್ದು, ಅಲ್ಲಿಂದ ಈವತ್ತು, ಇಷ್ಟೆಲ್ಲ ನಾನು ಮಾತನಾಡಿದ ಮೇಲೆ ಅವನ ಕೈಸೇರಿದೆ! ನಾನು ಈವತ್ತು ಮಾತಾಡದೆ ಹೋಗಿದ್ದರೆ, ಅವರು ಈ ಕಾಗದವನ್ನು ನಾಶಪಡಿಸಲುಬಹುದಿತ್ತು!

ಒಂದು ಕ್ಷಣ ಮೈನಡುಗಿತು.

'ಹಾಂ' ಎಂದೆ. ವಿಜಯ ಏನೋ ಹೇಳುತ್ತಿದ್ದ. ನನ್ನ ಮನಸ್ಸು ಕ್ಷಣಕಾಲ ಈ ಯೋಚನೆಗಳಲ್ಲಿ ಕಳೆದುಹೋಗಿ ಅವನ ಮಾತನ್ನು ಕೇಳಿಸಿಕೊಂಡಿರಲಿಲ್ಲ.

'ವಿಜಯ... ಅದೆಲ್ಲ ಇರಲಿ, ನಾನು ನಿನ್ನ ಯಾವಾಗ ನೋಡೋದು?' ಎಂದೆ.

ಅತ್ತ ಕಡೆಯಿಂದ ಕ್ಷಣಕಾಲ ಮೌನ ನೆಲಸಿತು.

'ಈ ಬಾರಿ... ಈ ಬಾರಿ...'

'ಏನು ಈ ಬಾರಿ?'

'ಈ ಬಾರಿ ನೋಡಲು ಆಗದಿದ್ದರೆ ಬೇಜಾರು ಮಾಡಿಕೊಳ್ಳೋದಿಲ್ಲ ತಾನೇ?'

'ಹುಚ್ಚು ಹಿಡಿದಿಲ್ಲ ತಾನೇ ನಿನಗೆ!... ನೋಡಲು ಆಗದಿದ್ದರೆ! ಹುಂ... ನೋಡಲು ಆಗದಿದ್ದರೆ! ಏನಿದರ ಅರ್ಥ?'

'ಏನಿಲ್ಲ... ಹೀಗೆ ಕೆಲಸದ ಒತ್ತಡ'

'ಏಯ್ ವಿಜಯ, ಇದು ನೀನು ಮಾತಾಡ್ತಿರೋದೋ ಅಥವಾ ನಿನ್ನ ಪ್ರೊಫೆಸರ್ರೋ? ಆ ವ್ಯಕ್ತಿ ನಿನ್ನ ಬ್ರೈನ್‌ವಾಷ್ ಮಾಡಿಲ್ಲ ತಾನೇ!'

'ಛೆ... ಛೆ... ಹಾಗೇನಿಲ್ಲ...'

'ನೋಡು ವಿಜಯ, ಅದೆಲ್ಲ ನನ್ನ ಹತ್ತಿರ ಹೇಳಲೇಬೇಡ. ನಿನ್ನ ನೋಡದೆ ನಾನು ಅಮೆರಿಕೆಯಿಂದ ಕಾಲು ಕೀಳೋವನೇ ಅಲ್ಲ... ಅದೆಂತಹ ಮನುಷ್ಯನಯ್ಯ ನೀನು! ಒಂದು ಫೋನ್ ಮಾಡೋದಿಕ್ಕಿಲ್ಲವೇನಯ್ಯ, ರಾಧಾಳಿಗೆ... ಅವಳನ್ನ ಮನುಷ್ಯಳು ಅಂತಂದ್ಕೊಂಡಿದ್ದೀಯೋ ಅಥವಾ...'

ಅತ್ತಕಡೆ ಮತ್ತೆ ಮೌನ ನೆಲಸಿತ್ತು. ವಿಜಯ ಮಾತನಾಡುವುದಕ್ಕೆ ಕಷ್ಟಪಡುತ್ತಿರುವಂತೆ ಕಂಡಿತು.

'ವಿಜಯ, ನಿನಗೆ ಬೇಕಾದರೆ ದಮ್ಮಯ್ಯ ಅಂತೀನಿ. ನನ್ನ ನೋಡೋದಿಲ್ಲ ಅಂತೀಯ. ಪರವಾಗಿಲ್ಲ. ನಾನು ನಿನ್ನ ಸ್ನೇಹಿತ. ನಿನ್ನ ತಪ್ಪನ್ನ, ನನ್ನ ತಪ್ಪನ್ನ ಹೊಟ್ಟೇಲಿ ಹಾಕ್ಕೋಬೇಕಾದವನು... ಆದರೆ ನೀನು ಆ ಹೆಣ್ಣುಮಗಳ ಮನಸ್ಸನ್ನು ಮಾತ್ರ ನೋಯಿಸಬೇಡ. ಅವಳಿಗೆ ಒಂದೇ ಒಂದು... ಒಂದೇ ಒಂದು ಫೋನ್ ಮಾಡು... ಕ್ಷೇಮ ಸಮಾಚಾರ ವಿಚಾರಿಸು...' ಎಂದೆ.

ಅತ್ತಕಡೆಯಿಂದ ಅಳುತ್ತಿರುವ ಧ್ವನಿ ಕೇಳಿಸಿತು.

'ಏ ವಿಜಯ, ಏನೋ ಇದು! ಅಳ್ತಾ ಇದ್ದೀಯೇನೋ! ನಾನು ಹೇಳಿದ್ದರಲ್ಲಿ ತಪ್ಪೇನಾದರೂ ಇತ್ತೇನೋ... ಯಾಕೋ ಅಳ್ತಿದ್ದೀಯಾ... ಲೋ ವಿಜಯ' ಎಂದು ಮತ್ತೆ ಕೂಗಿದೆ.

ಅವನು ಸಾವರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದ.

'ಇಲ್ಲ... ತಪ್ಪೇನಿಲ್ಲ... ಸರಿಯಾಗೇ ಹೇಳಿದೆ... ಏನೋ ಆಗಿಹೋಯಿತು...'

'ಏನು ಆಗಿಹೋಯಿತು?' ಎಂದೆ ಅವನ ಮಾತನ್ನು ಹಿಂಬಾಲಿಸಿ.

'ಏನು ಹೇಳಲಿ?... ಹುಂ... ನಾಳೆ ನೀನು ಬಾ... ಮಧ್ಯಾಹ್ನ... ನೀನು ಮಾತ್ರ ಬಾ... ಗೊತ್ತಾಯಿತಾ... ನೀನು ಮಾತ್ರ. ರಾಧಾಳನ್ನು ನೀನು ಕರ್ಕೊಂಡು ಬಂದಂತೆ ವಾಪಸ್ಸು ಹೋಗಬೇಕಾಗುತ್ತೆ... ಆಮೇಲೆ ಬೈದುಕೊಬೇಡ' ಎಂದವನೇ ಮಾತಿಗೆ ಅವಕಾಶ ಕೊಡದೆ ರಿಸೀವರನ್ನು ಕೆಳಗಿಟ್ಟ.

ನನಗೆ ಆ ರಾತ್ರಿ ನಿದ್ರೆ ಬರಲಿಲ್ಲ. ಯೋಚನೆ ಮಾಡಿ ಹುಚ್ಚುಹಿಡಿಯುತ್ತೇನೋ ಅನಿಸಿತ್ತು.

* * *

ರಾತ್ರಿ ಯೋಚಿಸಿ ತಲೆಶೂಲೆ ಬಂದಿತ್ತೆ ಹೊರತು, ಸಮಸ್ಯೆಗೆ ಪರಿಹಾರ ಸಿಕ್ಕಿರಲಿಲ್ಲ.

ವಿಜಯ ಯಾಕೆ ಹೀಗೆ ಹೇಳಿದ ಎಂಬುದರ ಬಗ್ಗೆ ಏನು ಊಹೆ ಮಾಡಿದರೂ ಸರಿಯಾದ ಉತ್ತರ ಸಿಗುತ್ತಿರಲಿಲ್ಲ. ರಾಧೆಯ ಜೊತೆ ಮಾತನಾಡಿದ್ದರಲ್ಲಿ ಅವರಿಬ್ಬರ ಮಧ್ಯೆ ಯಾವುದೇ ವೈವಾಹಿಕ ಅಸಾಮರಸ್ಯ ಬಂದಿರುವುದರ ಚಿಹ್ನೆ ಕಂಡು ಬಂದಿರಲಿಲ್ಲ. ಆದರೂ ವಿಜಯ ಸ್ಪಷ್ಟವಾದ ಮಾತುಗಳಲ್ಲಿ, ರಾಧಾಳ ಭೇಟಿ ಮಾಡುವುದಿರಲಿ, ಅವಳ ಜೊತೆ ಮಾತನಾಡುವುದಕ್ಕೂ ವಿರೋಧ ವ್ಯಕ್ತಪಡಿಸಿದ್ದ. ಅವನೆಂತಹ ಯೋಜನೆಯಲ್ಲಿ ತೊಡಗಿರಬಹುದು?

ವಿಜಯ ಮಾತನಾಡಿದ ಮೇಲೆ, ನನ್ನ ಮುಂದೆ ಮತ್ತೊಂದು ಸಮಸ್ಯೆ ಉದ್ಭವಿಸಿತ್ತು. ವಿಜಯನ ಜೊತೆ ಮಾತನಾಡಿದ್ದರ ಬಗ್ಗೆ ಅಶೋಕನಿಗೆ, ರಾಧಾಳಿಗೆ ಏನೆಂದು ಹೇಳುವುದು? ಅಶೋಕನಿಗಾದರೂ ಹೇಳಬಹುದು. ಯಾಕೆಂದರೆ ನಾನೊಂದು ರಕ್ಷಣಾತ್ಮಕ ಪದ್ಧತಿಯನ್ನು ಅನುಸರಿಸಲು ನಿರ್ಧರಿಸಿದ್ದೆ– ಏನಾದರೂ ಹೆಚ್ಚು ಕಡಿಮೆಯಾದರೆ, ಎಲ್ಲವನ್ನೂ ತಿಳಿದಿರುವ ಒಬ್ಬ ವ್ಯಕ್ತಿ ಇರಬೇಕು ಎಂದು. ಇದರಂತೆ, ಅಶೋಕನಿಗೆ ಫೋನ್ ಮಾಡಿ, ಅವನಿಗೆ ಸಂಕ್ಷೇಪವಾಗಿ ಎಲ್ಲವನ್ನೂ ಹೇಳಿ ಮಾರನೇ ದಿನ ಮಧ್ಯಾಹ್ನ ಭೇಟಿಯಾದ ಮೇಲೆ ಬಂದು ಹೇಳುತ್ತೇನೆ ಎಂದೆ.

ಇನ್ನು ರಾಧೆ? ಅವಳ ಮಾತೇ ಬೇರೆ. ಅವಳಿಗೆ ಹೇಗೆ ಹೇಳುವುದು– ವಿಜಯ ಸ್ಪಷ್ಟವಾಗಿ ನಿನ್ನನ್ನು ಕರೆದುಕೊಂಡು ಬರಬೇಡ ಎಂದು ಹೇಳಿದ್ದಾನೆ ಎಂದು. ಮತ್ತೆ ಅವಳು, 'ನನ್ನ ಜೊತೆ ಅವರು ಯಾಕೆ ಮಾತನಾಡಲಿಲ್ಲವಂತೆ' ಅಂತ ಪ್ರಶ್ನಿಸಿದರೆ ನಾನೇನು ಉತ್ತರಿಸಲಿ. ಹಾಗಾಗಿ ಎಲ್ಲದಕ್ಕೂ ಇನ್ನೊಂದು ದಿನ ಕಾಯುವುದೇ ಮೇಲು.

ಬೆಳಿಗ್ಗೆಯ ಕಾರ್ಯಕ್ರಮವನ್ನು ಹೇಗೆ ನಿರ್ವಹಿಸಿದೆನೋ ಗೊತ್ತಿಲ್ಲ. ನಿನ್ನೆಯ ಕಾರ್ಯಕ್ರಮದಂತೆ, ಎಲ್ಲೆಲ್ಲಿ ಹೋಗಬೇಕಾಗಿತ್ತೊ, ಅಲ್ಲೆಲ್ಲ ಹೋಗಲಾಗದ್ದಕ್ಕೆ, ಅವರೆಲ್ಲರ ಬಳಿ ಕ್ಷಮಾಯಾಚನ ಸಂದೇಶಗಳನ್ನು ಕಳಿಸಿದೆ. ಹಾಗೆ ಇಂದು ಮಧ್ಯಾಹ್ನ ಸಹ ಬರಲಾಗದು ಎಂದು ಹೇಳಿ ಇಂಕೆಲವರ ಕ್ಷಮೆಯಾಚನೆ ಕೇಳಿದೆ. ಈ ಔಪಚಾರಿಕತೆಯನ್ನು ಮುಗಿಸಿ ಮಧ್ಯಾಹ್ನ ನಿಗದಿಯಾದ ವೇಳೆಗೆ ಹತ್ತು ನಿಮಿಷ ಮುನ್ನವೇ ಸೆಕ್ಯುರಿಟಿ ಆಫೀಸರ್ ಎದುರಿಗೆ ಹೋಗಿ ಕುಳಿತೆ.

ಅವನಿಗೆ ಈಗಾಗಲೇ ನನ್ನ ಪರಿಚಯವಾಗಿತ್ತು. ಈವತ್ತು ಈ ಹೊತ್ತಿಗೆ ನಾನು ಬರುತ್ತೇನೆ ಎಂದು ತಿಳಿದಿತ್ತು ಅಂತ ತೋರುತ್ತದೆ. ಹಾಗಾಗಿ ಮುಗುಳ್ನಕ್ಕು, ನನಗೆ ಒಂದು ಸೀಟು ತೋರಿಸಿ ಕುಳಿತುಕೊಳ್ಳಲು ಹೇಳಿದ. ಹತ್ತು ನಿಮಿಷ ನನ್ನ ಕಡೆ ನೋಡಿದ. ನಂತರ ಗಡಿಯಾರ ನೋಡಿಕೊಂಡು ನನಗೆ ಪಾಸ್ ಬರೆದುಕೊಟ್ಟ. ಎಂದಿನಂತೆ ನನ್ನ ಜೊತೆ ಬರಲು ಒಬ್ಬ ರಕ್ಷಣಾದಳದವನನ್ನು ಕಳಿಸಿಕೊಟ್ಟ.

ಅವನು ನನ್ನನ್ನು ಪ್ರೊಫೆಸರ್ ಬಳಿ ಬಿಟ್ಟು ವಾಪಸ್ಸಾದ. ಪ್ರೊ। ರಿಚರ್ಡ್‌ಸನ್ ನನ್ನನ್ನು ನೋಡಿ ಪರಿಚಯದ ನಗೆ ನಕ್ಕರು. 'ಕುಳಿತುಕೊಳ್ಳಿ' ಎಂದರು. 'ಎರಡು ನಿಮಿಷ' ಎಂದರು.

ಎರಡು ನಿಮಿಷದ ನಂತರ ಎದ್ದು 'ಬನ್ನಿ' ಎಂದು ಕರೆದುಕೊಂಡು ಹೊರಟರು. ಸುಮಾರು ಇನ್ನೂರು ಮೀಟರ್ ನಡೆದ ನಂತರ ಮತ್ತೊಂದು ಕಾರಿಡಾರ್ ಸಿಕ್ಕಿತು. ಅಲ್ಲಿಯ ಪ್ರಧಾನದ್ವಾರದ ಬಳಿ ಒಬ್ಬ ಸೆಕ್ಯುರಿಟಿಯವನು ನಿಂತಿದ್ದ. ಅದರ ಮೇಲೆ 'ವಿಶೇಷ ಪ್ರದೇಶ: ಪ್ರತ್ಯೇಕ ಅಪ್ಪಣೆ ಪಡೆದವರಿಗೆ ಮಾತ್ರ ಪ್ರವೇಶ' ಎಂದು ಬರೆದಿತ್ತು. ನನಗೆ ಸಂಜಯ ಸಿಂಗ್‌ನ ಮಾತು ನೆನಪಿಗೆ ಬಂದಿತು.

ಪ್ರೊಫೆಸರ್ ಬಾಗಿಲ ಬಳಿ ಬಂದಾಗ ಸೆಕ್ಯುರಿಟಿಯವನು ಅವರಿಗೆ ಸೆಲ್ಯೂಟ್ ಹೊಡೆದ. ನಾನು ಅವರ ಜೊತೆಗಿರುವುದನ್ನು ನೋಡಿ ನನ್ನನ್ನು ಪ್ರಶ್ನಿಸಲಿಲ್ಲ.

ಅಲ್ಲಿಂದ ಮುಂದಕ್ಕೆ ಸಂಜಯ ಸಿಂಗ್ ವಿವರಿಸಿದ್ದ ಕ್ಯೂಬಿಕಲ್‌ಗಳು ಕಂಡವು, ಒಂದರ ಮೇಲೆ 'ಡಾ। ವಿಜಯಕುಮಾರ್' ಎಂದು ದೊಡ್ಡ ಅಕ್ಷರಗಳು ಕಂಡವು. ಸಿಂಗ್ ಹೇಳಿದ್ದ ಮಾತು ಸರಿ ಎನ್ನಿಸಿತು. ಅನೇಕರು ಅಲ್ಲಿ ಕಾಣಿಸಲಿಲ್ಲ. ವಿಜಯನೂ ಕಾಣಿಸಲಿಲ್ಲ. ಅದರ ಬಗ್ಗೆ ಪ್ರೊ। ರಿಚರ್ಡ್‌ಸನ್ ನನಗೆ ಯಾವುದೇ ವಿವರಣೆ ಕೊಡಲು ಪ್ರಯತ್ನಿಸಲಿಲ್ಲ. 'ಅದು ನಿಮ್ಮ ಗೆಳೆಯ ವಿಜಯನ ಕ್ಯೂಬಿಕಲ್' ಎಂದು

ಹೇಳುತ್ತಾರೇನೋ ಎಂದುಕೊಂಡೆ. ಆದರೆ ಅವರು ಅದನ್ನು ಹೇಳಲಿಲ್ಲ. ಸುಮ್ಮನೆ ತಲೆಕೆಳಗೆ ಹಾಕಿಕೊಂಡು, ಮಾತನಾಡದೆ ನಡೆಯುತ್ತಿದ್ದರು.

ಅಲ್ಲಿಂದ ಮುಂದಕ್ಕೆ ಹೋದಂತೆಲ್ಲ ಭದ್ರತೆ ಮತ್ತಷ್ಟು ತೀವ್ರವಾದಂತೆ ಕಂಡಿತು. ಬಾಗಿಲುಗಳ ಮೇಲೆಲ್ಲ ಕೆಂಪು ದೀಪಗಳು 'ದೂರವಿರಿ' ಎಂಬ ಚಿಹ್ನೆಗಳು ಸ್ಪಷ್ಟವಾಗಿ ಕಂಡವು. ಆ ಬಾಗಿಲನ್ನು ದಾಟಿ ಇವರು ಒಳಗೆ ನಡೆದರು. ಅವರನ್ನು ಹಿಂಬಾಲಿಸಿ ನಾನು ನಡೆದೆ.

ಹೋಗುತ್ತಾ ಹೋದಂತೆ ಕೆಲವು ಸಣ್ಣ ಪ್ರಮಾಣದ ಕೊಠಡಿಗಳು ಕಂಡವು. ಅವುಗಳ ಹೊರಾವರಣ ಅಪಾರದರ್ಶಕ ಗಾಜಿನಿಂದ ಮಾಡಲಾಗಿತ್ತು. ಅವುಗಳ ಮೇಲೆ ಕೇವಲ ಸಂಖ್ಯೆಗಳಿದ್ದವು. ಆ ಕೊಠಡಿಗಳು ಏನು ಎಂದು ತಿಳಿಯಲು ಮತ್ತಾವುದೇ ಸೂಚನೆ ಸಿಗುತ್ತಿರಲಿಲ್ಲ.

ಆ ಕೊಠಡಿಗಳನ್ನು ನೋಡಿದಾಗ ಅದೇಕೋ ಆಸ್ಪತ್ರೆಯ ವಾತಾವರಣ ನೆನಪಿಗೆ ಬರುತ್ತಿತ್ತು... ಛೆ... ಛೆ... ಎಂದು ತಲೆ ಕೊಡವಿಕೊಂಡೆ. ಇಲ್ಲಿ ಎಂತಹ ಆಸ್ಪತ್ರೆ? ಮತ್ತೆ ನನ್ನ ಕಲ್ಪನೆ ದಾಪುಗಾಲಿಡುತ್ತಿದೆ ಎಂದುಕೊಂಡೆ.

ಆದರೆ ಆ ಕೊಠಡಿಗಳ ಕಡೆ ನೋಡುತ್ತ ನಡೆಯುತ್ತಿದ್ದ ಪ್ರೊ। ರಿಚರ್ಡ್‌ಸನ್ ಒಂದು ಕೊಠಡಿಯ ಎದುರು ನಿಂತರು. ಬಾಗಿಲ ಮೇಲೆ ಮೆಲ್ಲಗೆ ತಟ್ಟಿದರು. ಒಳಗಡೆಯಿಂದ 'ಬರಬಹುದು' ಎಂಬ ಮಾತು ಕೇಳಿಸಿತು. ಸಂದೇಹವೇ ಇರಲಿಲ್ಲ. ವಿಜಯನದೇ! ನನ್ನ ಎದೆ ಹೊಡೆದುಕೊಳ್ಳಲಾರಂಭಿಸಿತು. ಅಲ್ಲಿಗೆ ಇದು ಅವನು ಕೆಲಸ ಮಾಡಲು ವಿಶೇಷವಾಗಿ ನಿರ್ಮಿಸಿದ್ದ ಕೊಠಡಿ!

ಬಾಗಿಲು ತೆಗೆದು ಪ್ರೊಫೆಸರ್ ಒಳಗೆ ಹೋಗುತ್ತಾ, ನನ್ನನ್ನು 'ಬನ್ನಿ' ಎಂದರು.

ನಾನು ಬಾಗಿಲು ತೆರೆದು ನಿಂತು ಅಚ್ಚರಿಯಿಂದ ನೋಡಿದೆ. ಮತ್ತೆ ನನ್ನೆದುರಿಗೆ ಒಂದು ಗಾಜಿನ ಅಪಾರದರ್ಶಕ ಗೋಡೆ ಎದ್ದಿತ್ತು. ಅದರಲ್ಲಿ ಒಂದು ಕಿಂಡಿ. ಆ ಕಿಂಡಿಯನ್ನು ಮುಚ್ಚಲಾಗಿತ್ತು. ಆ ಕಿಂಡಿಯ ಎದುರಿಗೆ ಇತ್ತ ಕಡೆ ಒಂದು ಕುರ್ಚಿ ಹಾಕಲಾಗಿತ್ತು!

ಅಂದರೆ ಆ ಗೋಡೆಯಾಚೆ ವಿಜಯ ಕುಳಿತಿದ್ದಾನೆ!

ಇಷ್ಟು ಹತ್ತಿರ ಆದರೆ ನನಗೆ ಕಾಣಿಸುತ್ತಿಲ್ಲ. ಇದೇನು ಪರಿಸ್ಥಿತಿ!

ಪ್ರೊ। ರಿಚರ್ಡ್‌ಸನ್ ಅವರು,



'ಡಾ। ವಿಜಯಕುಮಾರ್, ನಿಮ್ಮ ಗೆಳೆಯರು ಬಂದಿದ್ದಾರೆ. ಅವರು ಹತ್ತು ನಿಮಿಷ ಇರಬಹುದು. ನಾನು ಹತ್ತು ನಿಮಿಷಗಳ ನಂತರ ಬರುತ್ತೇನೆ... ನೀವು ಮಾತನಾಡುವಾಗ ನಾನು ಇರುವುದಿಲ್ಲ... ಇದ್ದರೂ ಉಪಯೋಗವಿಲ್ಲ ಅಂದುಕೊಳ್ಳಿ; ನಿಮ್ಮದೇ ಭಾಷೆಯಲ್ಲಿ ಮಾತನಾಡುತ್ತೀರಿ... ಅದರ ಒಂದಕ್ಷರವೂ ನನಗೆ ಅರ್ಥವಾಗುವುದಿಲ್ಲ... ಓ.ಕೆ... ನಿಮ್ಮನ್ನು ನೋಡುತ್ತೇನೆ... ಹತ್ತು ನಿಮಿಷಗಳ ನಂತರ ಮಿ. ಆನಂದಕುಮಾರ್' ಎಂದು ನನ್ನ ಕಡೆ ತಲೆಯಾಡಿಸಿ ಬಾಗಿಲನ್ನು ಮುಚ್ಚಿಕೊಂಡು ಹೊರಟುಹೋದರು.

ನಾನು ಅಪ್ರತಿಭನಾಗಿ ಏನು ಮಾಡಲೂ ತೋಚದೆ, ಕಿಂಡಿಯ ಎದುರಿಗಿದ್ದ ಕುರ್ಚಿಯ ಮೇಲೆ ಕುಸಿದು ಕುಳಿತೆ. ಕ್ಷಣಕಾಲ ಮೌನ ನೆಲೆಸಿತ್ತು.

'ಆನಂದ' ಎಂದ ಅತ್ತಕಡೆಯಿಂದ ವಿಜಯ.

ನನಗೆ ಗಂಟಲು ಉಬ್ಬಿ ಬರುತ್ತಿತ್ತು. ಸಂತೋಷ ಎಂಬುದು ಮಾಯವಾಗಿ ಹೋಗಿತ್ತು. ಇದೆಂತಹ ಭಯಂಕರ ಶಿಕ್ಷೆ ನನಗೆ ಎನಿಸಿತ್ತು. ನನ್ನ ಗೆಳೆಯನನ್ನು ನೋಡುವ ಹಾಗಿಲ್ಲ. ಮಾತನಾಡಲೇಬೇಕು ಎಂದು ಬಲವಂತ ಮಾಡಿದ್ದಕ್ಕೆ, ಕೊಟ್ಟ ಅವಕಾಶ ಎಂತಹದು!

'ಏನೋ ಇದು ವಿಜಯ, ನನಗೊಂದೂ ಅರ್ಥವಾಗ್ತಿಲ್ಲವಲ್ಲೊ, ಆ ಗೋಡೆ ಆಚೆ ನೀನಿದ್ದೀಯ, ನನಗೆ ಎಷ್ಟು ಕೋಪ ಬರ್ತಾ ಇದೆ ಗೊತ್ತೆ...'

'ಗೊತ್ತು'

'ಗೊತ್ತು! ಮುಂಡಾಮೋಚಿಕೊಂಡು ಹೋಯಿತು. ಏನು ಗೊತ್ತು ನಿನಗೆ. ಈ ಮುಷ್ಟಿಯಿಂದ ಗುದ್ದಿ ಗಾಜನ್ನು ಪುಡಿ ಪುಡಿ ಮಾಡಿ ಬಿಡಲೇ ಎನ್ನಿಸ್ತಿದೆ.'

'ಹಾಗೆ ಮಾತ್ರ ಮಾಡಬೇಡ ಮಾರಾಯ'

'ಮತ್ತೆ ಏನಿದೆಲ್ಲ, ನನಗೊಂದೂ ಅರ್ಥವಾಗ್ತಿಲ್ಲ.'

'ಹೇಳ್ತೀನಿ. ಹೇಳಬೇಕು ಅಂತ ನಿರ್ಧಾರ ಮಾಡಿಯೇ ನಿನ್ನನ್ನು ಕರೆಸಿದ್ದು. ಇದನ್ನು ನನ್ನ ಹೆಂಡತಿ ಎದುರಿಗೆ ಹೇಳೋ ಧೈರ್ಯ ನನಗಿನ್ನು ಬಂದಿಲ್ಲ... ಬರೋದೂ ಇಲ್ಲ ಅನ್ನಿಸುತ್ತೆ... ಅದಕ್ಕೆ ಅವಳನ್ನ ಕರ್ಕೊಂಡು ಬರಬೇಡ ಅಂತ ಸ್ಪಷ್ಟವಾಗಿ ಹೇಳಿದ್ದು' ಎಂದು ಹೇಳತೊಡಗಿದ.

ಅಮೆರಿಕೆಗೆ ಬಂದು ಪ್ರಯೋಗಾಲಯದಲ್ಲಿ ಕೆಲಸಕ್ಕೆ ಸೇರಿಕೊಂಡ ಮೇಲೆ ವಿಜಯ ಹಂತ ಹಂತವಾಗಿ ಮೇಲೇರಿ ಬಂದಿದ್ದ. ಅವನಿಗೂ ಅಶೋಕನಿಗೆ ಆದಂತಹ ಅನುಭವವೇ ಆಗಿತ್ತು. ತನ್ನ ಸಮಾನ ಬುದ್ಧಿವಂತರಾಗದಿದ್ದರೂ ಅಮೆರಿಕನ್ನರು ಎಂದೋ ಬೇರಾವುದೇ ಕಾರಣದಿಂದ ಇವನಿಗಿಂತ ಮೇಲಿನ ದರ್ಜೆಯಲ್ಲಿ ಕುಳ್ಳಿರಿಸಿ ಬಿಡುತ್ತಿದ್ದರು, ಇವನು ಯಾವಾಗಲೂ ಎರಡನೆಯ ದರ್ಜೆಯ ನಾಗರಿಕನಾಗಿಯೇ ಉಳಿದಿದ್ದ.

ಆದರೆ ಭಾರತಕ್ಕೆ ಹೋಲಿಸಿಕೊಂಡಾಗ, ಇದೆಷ್ಟೋ ವಾಸಿ ಎನಿಸಿತ್ತು ಅವನಿಗೆ. ಹಾಗಾಗಿ ಅಮೆರಿಕೆಯಲ್ಲೆ ಉಳಿಯಲು ನಿರ್ಧರಿಸಿದ್ದ. ಭಾರತದಲ್ಲಿ ತನಗೆ ಕೆಲಸ ಕೊಡುವವರೇ ಇಲ್ಲ. ಇಲ್ಲಿ ತನಗೆ ತಕ್ಕ ಮಟ್ಟಿಗೆ ತೃಪ್ತಿ ಕೊಡುವ ಕೆಲಸವಿದೆ. ತನ್ನ ಪ್ರತಿಭೆಯನ್ನು ತೋರಿಸುವುದಕ್ಕೆ ಅವಕಾಶವಿದೆ. ತಾನು ಕೆಲಸ ಮಾಡಿದೆ ಎಂದು ತೃಪ್ತಿಪಡಬಹುದು. ಭಾರತಕ್ಕೆ ಹೋದರೆ ಏನು ಮಾಡುವುದು, ವಿದ್ಯಾವಂತ ನಿರುದ್ಯೋಗಿ?

ಹಾಗಾಗಿ ಅವಮಾನವಾದರೂ ಸಹಿಸಿಕೊಂಡಿರುವುದೇ ಮೇಲು ಎಂದು ನಿರ್ಧರಿಸಿದ್ದ. ಜೊತೆಗೆ ಪ್ರೊ। ರಿಚರ್ಡ್‌ಸನ್ ಅನೇಕ ವಿಷಯಗಳಲ್ಲಿ ಇವನಿಗೆ ಒತ್ತಾಸೆಯಾಗಿ ನಿಂತರು. ಹಾಗಾಗಿ ಬೇರೆಯವರಿಗೆ ಹೋಲಿಸಿದಾಗ, ವಿಜಯನ ಪರಿಸ್ಥಿತಿ ಅಷ್ಟು ಕೆಟ್ಟಿರಲಿಲ್ಲ.

ಹೀಗಿರುವಾಗ ಒಂದು ವಿಶೇಷವಾದ ಯೋಜನೆಯ ಘೋಷಣೆಯಾಯಿತು. ಅದರಲ್ಲಿ ಕೆಲಸ ಮಾಡುವುದಕ್ಕೆ ಸಿದ್ಧರಾಗಿರುವವರು ತಮ್ಮ ಒಪ್ಪಿಗೆ ಕೊಡಬೇಕು ಎಂದು ಕೇಳಿ ಒಂದು ರಹಸ್ಯ ಸುತ್ತೋಲೆ ಬಂದಿತು. ಈ ಯೋಜನೆಗೆ ಆತನ ಪ್ರೊಫೆಸರ್ ಅವರೇ ಮುಖ್ಯಸ್ಥರಾಗಿದ್ದರು.

ಹಾಗಾಗಿ ಎಲ್ಲರಿಗಿಂತ ಮುಂಚೆ ತಾನೇ ಆ ಪ್ರಾಜೆಕ್ಟ್‌ಗೆ ಮುಂದೆ ಬಿದ್ದು ಕೆಲಸಕ್ಕೆ ಸಿದ್ಧನಾದ. ಪ್ರೊಫೆಸರ್ ಸಹ ಇವನ ಕೆಲಸ ನೋಡಿದ್ದರಿಂದ, ಇವನನ್ನು ಆರಿಸುವುದಕ್ಕೆ ಹಿಂಜರಿಯಲಿಲ್ಲ.

ಇನ್ನು ಯೋಜನೆಯ ಉದ್ದೇಶ್ಯ? ಮೇಲ್ನೋಟಕ್ಕೆ ಅಂತಹ ವಿಶೇಷ ಎನಿಸುತ್ತಿರಲಿಲ್ಲ – 'ಅಂತರಿಕ್ಷದ ವಿಕಿರಣಗಳ ಸೂಕ್ಷ್ಮತಮ ಅಧ್ಯಯನ– ಅದರ ಪ್ರಬಲತೆ, ಅದರ ತಡೆಗಟ್ಟುವಿಕೆ– ಆಕಾಶಯಾನದ ದೃಷ್ಟಿಯಿಂದ' – ಎಂದಿತ್ತು.

ಅಮೆರಿಕೆ ಅನೇಕ ಗಗನಯಾತ್ರಿಗಳನ್ನು ಬಾಹ್ಯಾಕಾಶ ನೌಕೆಗಳಲ್ಲಿ ಕಳಿಸುತ್ತಿದ್ದುದರಿಂದ, ವಾತಾವರಣದ ಅನುಕೂಲವಿಲ್ಲದ ಆಕಾಶದಲ್ಲಿ, ಅಪಾಯಕಾರಿ ಘಟ್ಟ ಮುಟ್ಟುವ ವಿಕಿರಣಗಳಿಂದ, ಗಗನಯಾತ್ರಿಗಳನ್ನು ಸಂರಕ್ಷಿಸುವ ಉಪಾಯಗಳನ್ನು ಕಂಡುಹಿಡಿಯಬೇಕಿತ್ತು. ಇತ್ತೀಚಿನ ದಿನಗಳಲ್ಲಿ ದೀರ್ಘಕಾಲದ ಯಾತ್ರೆ ಮಾಡುವವರ ಸಂಖ್ಯೆ ಹೆಚ್ಚಾಗಿ, ಈ ಬಗ್ಗೆ ಹೆಚ್ಚು ಗಮನ ಕೊಡಬೇಕಾಗುತ್ತಿತ್ತು.

ವಾಸ್ತವವಾಗಿ ಇಂತಹ ಅಧ್ಯಯನ ನಡೆದಿಲ್ಲ ಎಂದಲ್ಲ ಅಥವಾ ಇಂತಹ ರಕ್ಷಣೆ ಇಲ್ಲದೆ ಇಂದಿನ ಗಗನಯಾತ್ರಿಗಳು ಹೋಗುತ್ತಿದ್ದಾರೆ ಎಂದಲ್ಲ. ಇದರ ಬಗ್ಗೆ ಸಾಕಷ್ಟು ಮಾಹಿತಿ ಇದ್ದರೂ, 'ಸಮತೋಲನ' ಮಟ್ಟದ ಅಧ್ಯಯನ ನಡೆದಿರಲಿಲ್ಲ. ಇದರ ಅಗತ್ಯ ಈಗ ಹೆಚ್ಚಿಗೆ ಬೇಕಾಗಿದ್ದರ ಕಾರಣ ಎರಡು ರೀತಿಯದಾಗಿತ್ತು. ಮೊದಲನೆಯ ಕಾರಣ ಎಂದರೆ ನೌಕೆಗಳ ನಿರ್ಮಾಣದಲ್ಲಿ ಉಪಯೋಗಿಸುವ ಧಾತುಗಳ

ನನ್ನೂರು ನನ್ನ ಜನ

## ಬೇಡರಿಗೊಲಿದ ಜಗದೊಡೆಯ

ಬಿಟ್ಟದೇವ ಅಥವಾ ವಿಷ್ಣುವರ್ಧನ ಎಲ್ಲರಿಗೂ ಗೊತ್ತು. ಶಾಂತಲೆ ಅವನ ಪಟ್ಟಮಹಿಷಿ. ಅವಳ ಬಗೆಗಿನ ಶಾಸನ, ಕಥೆ, ಕಾದಂಬರಿ, ನಾಟಕ ಇತ್ಯಾದಿ ಅಪಾರ. ವಿಷ್ಣುವರ್ಧನನ ಪಂಚನಾರಾಯಣರುಗಳಲ್ಲಿ ಒಬ್ಬ ಕೀರ್ತಿನಾರಾಯಣ ಇಲ್ಲಿ ನೆಲೆಸಿದ್ದಾನೆ. ಹಾಗೆಯೇ ಇಲ್ಲಿ ಇನ್ನೊಬ್ಬ ನಾರಾಯಣ ವೈಕುಂಠನಾರಾಯಣನೂ ಇದ್ದಾನೆ. ಇದು ಯಾವ ಊರು ಎಂದಿರಾ? ತಪ್ಪಾಗಿ ದಾಖಲಿಸಲ್ಪಡುತ್ತಿರುವ ತಲಕಾಡು. ತಮಿಳರ ತಲೆಗೆ ಸಿಕ್ಕರೆ 'ತಲೈಕಾಟ್ಟು'. ಆದರೆ ಕೆಲ ಕನ್ನಡಿಗರು ಹೇಳುವಂತೆ ತಳಕಾಡು ಕೂಡಾ ಅಲ್ಲ. ಇದರ ನಿಜವಾದ ಹೆಸರು ತಲಕಾಡ. ಇವರು ಇಬ್ಬರು ಬೇಡರು. ಪಂಚಲಿಂಗದರ್ಶನ ಎಂಬ ಲಕ್ಷಾಂತರ ಜನರು ಸೇರುವ ಅಪರೂಪದ ಜಾತ್ರೆ ನಡೆಯುವ ತಲಕಾಡು ಮರಳಿಗೆ ಪ್ರಸಿದ್ಧಿ. ಆದರೆ ಎಲ್ಲ ಜನರು, ಲೇಖಕರು, ಯಾತ್ರಿಕರು ಮತ್ತಿತರರುಗಳ ಜನಜನಿತ ಕಲ್ಪನೆಯಂತೆ ತಲಕಾಡು ಮರಳಿನಲ್ಲಿ ಮುಚ್ಚಿಹೋಗಿಲ್ಲ. ಜಾತ್ರೆ ಸಮಯದಲ್ಲಿ ತೆರೆದುಕೊಳ್ಳುವುದಿಲ್ಲ. ಪದವಿಪೂರ್ವ ಕಾಲೇಜ್, ಮಂಡಲ ಪಂಚಾಯಿತಿಗಳುಳ್ಳ ಒಂದು ಪುಟ್ಟ ಪಟ್ಟಣ ಈ ತಲಕಾಡು. ಇಲ್ಲಿ ಗೋಡಂಬಿ ಪ್ರಸಿದ್ಧ, ರಫ್ತು ಮೌಲ್ಯದ ಸರಕು. ಇಲ್ಲಿ ಹಳೆಯ ಕಾಲದಿಂದ ಪರಂಪರೆ ಉಳಿಸಿದ ಬ್ರಾಹ್ಮಣರ ಜಗದ್ಗುರುಪೀಠ ಶ್ರೀ ಬಾಲಕೃಷ್ಣಾನಂದ ಸಂಸ್ಥಾನಂ ಎಂಬುದು ಹಾಗೂ ವಿಷಚಿಕಿತ್ಸಾತಜ್ಞ ಶ್ರೀ ಸಿದ್ಧಮಲ್ಲಿಕಾರ್ಜುನರ ಖ್ಯಾತಿಯ ವೀರಶೈವ ಪಂಚಾಚಾರ್ಯ ಶಾಖೆಯ ಹಸ್ತಿಕೇರಿಮಠ ಇದೆ. ಬೇಡರಿಬ್ಬರಾದ ತಲ ಮತ್ತು ಕಾಡರಿಗೆ ಒಲಿದ ಜಗದೊಡೆಯ ವೈದ್ಯನಾಥೇಶ್ವರನಾಗಿ ಪಂಚಲಿಂಗಗಳ ಅಧಿಪತಿಯಾಗಿ ಕಂಗೊಳಿಸಿದ್ದಾನೆ. ಇಲ್ಲಿನ ಪ್ರಕೃತಿ ಸೌಂದರ್ಯ ಅವರ್ಣನೀಯವಾಗಿದೆ. ಈ ಪರ್ಯಾಯ ದ್ವೀಪ ಪ್ರವಾಸಿ ತಾಣವಾಗಿದೆ. ಕೆಂಗಲ್ ಹನುಮಂತಯ್ಯನವರ ಸೋದರ ವಿ. ನಂಜಪ್ಪನವರಿಂದಾಗಿ ಇದೀಗ ಯಾತ್ರಿಕರ ಹೊಟ್ಟೆಪಾಡಿನ ಉಪಟಳ ನೀಗಲು ದಾಸೋಹಭವನ ಎದ್ದು ನಿಂತಿದೆ!

● ಆರ್. ವೆಂಕಟೇಶ್, ತಲಕಾಡು

ಅಧ್ಯಯನ. ಇಂದು ನೌಕೆಗಳ ಮೂಲಕ ಅನೇಕ ಕ್ಷಿಪಣಿಗಳನ್ನೂ ಯಂತ್ರಗಳನ್ನೂ ದೂರದರ್ಶನಗಳನ್ನೂ ಕ್ಯಾಮೆರಾಗಳನ್ನೂ ಸ್ಕೈಲಾಬ್‌ಗಳನ್ನೂ ಉಪಗ್ರಹಗಳನ್ನೂ ಕಳಿಸುತ್ತಿದ್ದರು. ಅದಾಗಿ ನೌಕೆಯ ಭಾರ ಹೆಚ್ಚಾಗುತ್ತಿತ್ತು. ಆದರೆ ಹೀಗೆ ಹೆಚ್ಚಾಗುವುದು ವಿಜ್ಞಾನಿಗಳಿಗೆ ಸಮ್ಮತವಾಗಿರಲಿಲ್ಲ. ಹಾಗಾಗಿ ಭಾರವನ್ನು ಕಡಿಮೆ ಮಾಡುವ ಧಾತುಗಳನ್ನು ನೌಕೆಯ ನಿರ್ಮಾಣದಲ್ಲಿಯೇ ಉಪಯೋಗಿಸುವ ಆಲೋಚನೆ ನಿರಂತರವಾಗಿ ನಡೆದಿತ್ತು.

ಎರಡನೆಯ ಮಹತ್ವದ ಮಾತು ಮನುಷ್ಯನಿಗೆ ನೌಕೆಯ ಒಳಗೆ ಹಾಗೂ ಹೊರಗೆ ನೀಡಬೇಕಾದ ರಕ್ಷಣೆಯನ್ನು ಕುರಿತಾಗಿತ್ತು. ಈಗಿರುವ ದಿರಿಸು ಆತನ ಓಡಾಟಕ್ಕೆ ಬಹಳ ತೊಂದರೆಯುಂಟು ಮಾಡಿದೆ ಎನಿಸಿತ್ತು. ಸಹಜವಾಗಿ ಧರಿಸುವ ಪ್ಯಾಂಟ್-ಷರ್ಟನಂತಹ, ಅತಿ ಹೆಚ್ಚೆಂದರೆ ಕೋಟ್‌ನಂತಹ ಸಾಧನದ ಮೂಲಕ, ವಿಜ್ಞಾನಿಗಳು ಅವನ ಮೇಲೆ ವಿಕಿರಣಗಳ ಆಘಾತದ ಪ್ರಮಾಣವನ್ನು ನಿಯಂತ್ರಿಸಲು ಪ್ರಯತ್ನಿಸುತ್ತಿದ್ದರು.

ಇಷ್ಟು ದೀರ್ಘವಾದ ಮುನ್ನುಡಿ ಕೊಟ್ಟು ವಿಜಯ ಹೇಳತೊಡಗಿದ:

'ಇದೆಲ್ಲ ವೈಜ್ಞಾನಿಕ-ತಾಂತ್ರಿಕ ವಿಷಯಗಳಾದವು. ಇದರಲ್ಲಿ ನಾವುಗಳು ನಮ್ಮ ಕ್ಷೇತ್ರಗಳಿಗೆ ತಕ್ಕಂತೆ ಒಬ್ಬೊಬ್ಬರು ಒಂದೊಂದು ಭಾಗವನ್ನೂ ಹಂಚಿಕೊಂಡೆವು. ನಮಗೆ ಫಲಿತಾಂಶವನ್ನು ಇಂತಿಷ್ಟೆ ತಿಂಗಳುಗಳಲ್ಲಿ ಕೊಡಬೇಕು ಎಂಬ ಆದೇಶ ಮೇಲಿಂದ ಬಂದಿತ್ತು.

ನನ್ನ ಕ್ಷೇತ್ರ ವಿಕಿರಣಗಳ ಪರೀಕ್ಷೆ. ನಿನಗೆ ತಿಳಿದಂತೆ ನಾನು ಎಂ. ಎಸ್‌ಸಿ. ಮಾಡಿದ್ದು ಅಣುವಿಜ್ಞಾನದಲ್ಲಿ. ಡಾಕ್ಟರೇಟ್ ಪಡೆದ ವಿಕಿರಣಗಳ ಪರೀಕ್ಷಣದಲ್ಲಿ, ಅದನ್ನೇ ಇಲ್ಲಿ ಮುಂದುವರೆಸಿದೆ.

ವಿಕಿರಣಗಳ ಪರೀಕ್ಷೆಗೆ ಎಂದು ವಿಶೇಷವಾದ ಕೊಠಡಿಗಳು ಇರುತ್ತವೆ. ಅಲ್ಲಿ ಒಂದು ವಸ್ತುವಿನ ಸಾಮರ್ಥ್ಯವನ್ನು ಪರೀಕ್ಷೆ ಮಾಡುವ ಮೊದಲು, ವಿಕಿರಣಗಳನ್ನು ಕೃತಕವಾಗಿ ಸೃಷ್ಟಿಸಬೇಕಾಗುತ್ತದೆ. ಅದನ್ನು ಈ ಕೊಠಡಿಗಳಲ್ಲಿ ಮಾಡುತ್ತಿದ್ದೆವು. ಆಕಾಶದಲ್ಲಿ ಹುಟ್ಟುವ ವಿಧವಿಧವಾದ ವಿಕಿರಣಗಳನ್ನು, ಅಲ್ಲಿ ಅವುಗಳು ದೊರಕುವ ಶಕ್ತಿಯ ಪ್ರಮಾಣಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಇಲ್ಲಿ ಪ್ರಯೋಗಾಲಯದೊಳಗೆ ಸೃಷ್ಟಿಸುತ್ತಿದ್ದೆವು. ನಂತರ ನಮ್ಮ ಸಹೋದ್ಯೋಗಿಯು ಸಂಶೋಧಿಸಿದ ಧಾತುಗಳ ಮೂಲಕ ಅವನ್ನು ಹಾಯಿಸಿ, ಈ ಧಾತುಗಳು ಆ ವಿಕಿರಣಗಳನ್ನು ಎಷ್ಟರಮಟ್ಟಿಗೆ ತಡೆಯಲು ಶಕ್ತಿಯುತವಾಗಿವೆ ಎಂದು ಪರೀಕ್ಷಿಸುತ್ತಿದ್ದೆವು.

ಆದರೆ ಇಂತಹ ಪರೀಕ್ಷಣೆ ನಡೆಯುವಾಗ, ನಮ್ಮಂತಹ ಪರೀಕ್ಷಕರ ಜೀವಕ್ಕೆ ಅಪಾಯವಿರುತ್ತದೆ. ಕಾರಣ, ಆ ವಿಕಿರಣ ನಮ್ಮ ಮೇಲೆ ಹಾಯ್ದರೆ ನಾವು ಕ್ಷಣ ಮಾತ್ರದಲ್ಲಿ ಧ್ವಂಸವಾಗಿ ಬಿಡುತ್ತಿದ್ದೆವು. ಹಾಗಾಗಿ ನಾವು ಈ ಪರೀಕ್ಷೆಯನ್ನು ಬೇರೊಂದು ಕೊಠಡಿಯಲ್ಲಿ ನಡೆಸುತ್ತಿದ್ದೆವು. ನಮಗೂ ಪರೀಕ್ಷಣ ಸ್ಥಳಕ್ಕೆ ನಡುವೆ ಸತುವಿನಂತಹ ಧಾತುವಿನಿಂದ ಮಾಡಿದ ದಪ್ಪ ಗೋಡೆ ಇರುತ್ತಿತ್ತು. ಈ ಗೋಡೆಯ ನಡುವೆ ಪಾರದರ್ಶಕ ಗಾಜುಗಳ ಮೂಲಕ ಪರೀಕ್ಷಣೆಯನ್ನು ನಿರೀಕ್ಷಿಸಬಹುದಿತ್ತು. ಫಲಿತಾಂಶಗಳನ್ನು ಗುರುತು ಹಾಕುವ ಉಪಕರಣಗಳು ನಮ್ಮ ಬಳಿಯೇ ಇರುತ್ತಿತ್ತು.

ಆದರೂ ನಾವು ಪೂರ್ಣ ಪ್ರಮಾಣದಲ್ಲಿ ಇಂತಹ ವಿಕಿರಣಗಳಿಂದ ಸುರಕ್ಷಿತವಾಗಿರುತ್ತೇವೆ ಎಂದು ಹೇಳಲಾಗದು. ಹಾಗಾಗಿ ನಮ್ಮ ದೇಹದ ಪರೀಕ್ಷೆಯನ್ನು, ಅದರಲ್ಲಿರುವ ವಿಕಿರಣಗಳ ಅಪಾಯದ ಮಟ್ಟವನ್ನು, ವೈದ್ಯರು ಆಗಾಗ್ಗೆ ಅಳೆಯುತ್ತಲೇ ಇರುತ್ತಾರೆ' ಎಂದು ಹೇಳಿ ಕ್ಷಣಕಾಲ ನಿಲ್ಲಿಸಿದ. ವಿಜಯನ ಮಾತುಗಳು, ನನ್ನನ್ನು ಯಾವುದೋ ಬೇರೊಂದು ಲೋಕಕ್ಕೆ ಕರೆದುಕೊಂಡು ಹೋಗಿದ್ದವು. ಇದನ್ನು ಗಾಢವಾಗಿಸುವುದಕ್ಕೆ ನನ್ನೆದುರಿಗೆ ಏಕಾಂತ, ವಿಜಯನ ಧ್ವನಿ ಮಾತ್ರ ಕೇಳಿಸುತ್ತಿತ್ತು. ಇಡೀ ಕೊಠಡಿಯಲ್ಲಿ ಭಯವನ್ನು ಹುಟ್ಟಿಸುವ ವಾತಾವರಣ ನಿರ್ಮಾಣವಾಗಿತ್ತು.

ಅವನು ಮಾತಾಡುತ್ತ ನಿಲ್ಲಿಸಿದ್ದಕ್ಕೆ ಕಾರಣವಿತ್ತು ಎನಿಸುತ್ತದೆ. ಮುಂದಕ್ಕೆ ಹೇಗೆ ಮಾತನ್ನು

ಮುಂದುವರಿಸುವುದು ಎಂಬುವುದು ಅವನ ಆಲೋಚನೆಯಾಗಿರಬೇಕು.

'ನಾನು... ನಾನು... ಈ ಮಾತು ನಿನ್ನ ಬಳಿ ಮಾತ್ರ ಹೇಳಬಲ್ಲೆ. ನನ್ನ ಆತ್ಮೀಯ ಗೆಳೆಯ ನೀನು. ನಿನಗೆ ನನ್ನ ಭಾವನೆಗಳನ್ನು ತೋಡಿ ಕೊಳ್ಳುವುದಕ್ಕೆ ಸಂಕೋಚವಾಗುವುದಿಲ್ಲ. ಹಾಗಾಗಿ ಈ ಮಾತನ್ನು ಹೇಳುವ ಧೈರ್ಯ ಮಾಡುತ್ತಿದ್ದೇನೆ.

... ಈಗ ತಾನೇ ಹೇಳಿದಂತೆ, ನಮ್ಮ ದೇಹದ ಆರೋಗ್ಯವನ್ನು ವೈದ್ಯರು ಆಗಾಗ್ಗೆ ತಪಾಸಿಸು ತ್ತಿದ್ದರು ಎಂದು ನಿನಗೆ ಹೇಳಿದೆ. ಅವರು ನನಗೆ ಒಳ್ಳೆ ಆರೋಗ್ಯವಿದೆ ಎಂದೂ ಹೇಳಿದ್ದರು. ಆದರೆ ಆರು ತಿಂಗಳ ಕೆಳಗೆ ಒಂದು ಸಮಸ್ಯೆ ನನ್ನ ಮುಂದೆ ಇದ್ದಕ್ಕಿದ್ದಂತೆ ಬಂದಿತು. ರಾಧೆಯ ಜೊತೆ ಲೈಂಗಿಕವಾಗಿ ನನಗೆ ಸಂಪರ್ಕ ಹೊಂದಲು ಸಾಧ್ಯವಾಗಲಿಲ್ಲ! ನನ್ನ ಮನುಷ್ಯತ್ವ ಸ್ಪಂದಿಸಲಿಲ್ಲ! ಇದು ನನ್ನ ಮನಸ್ಸಿನ ಮೇಲೆ ಆಘಾತವುಂಟು ಮಾಡಿತು. ನಂತರ ವೈದ್ಯರನ್ನು ಕಂಡು, ಈ ಮಾತನ್ನು ಹೇಳಿದೆ. ಅವರು ಅದನ್ನು ಅಷ್ಟು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಮಾನಸಿಕ ಒತ್ತಡವಿರುವಾಗ ಹೀಗೇ ಆಗುತ್ತದೆ. ಗಾಬರಿಯಾಗಬೇಡಿ. ನೀವು ಶಾಂತವಾಗಿರಿ. ನಾಲ್ಕು ಐದು ದಿನ ಬಿಟ್ಟು ಪ್ರಯತ್ನಿಸಿ, ಎಲ್ಲವೂ ಸರಿ ಹೋಗುತ್ತದೆ ಎಂದರು.

ನಾಲ್ಕೈದು ದಿನವಲ್ಲ, ಹದಿನೈದು ದಿನದ ನಂತರ ಪ್ರಯತ್ನಿಸಿದರೂ ಪರಿಸ್ಥಿತಿಯಲ್ಲಿ ಬದಲಾವಣೆಯಾಗಿರಲಿಲ್ಲ. ರಾಧೆಯಾದರೆ ಹೆಂಗಸು, ಅವಳೂ ಸಹ, ಇದರ ಬಗ್ಗೆ ನೀವು ಯಾಕೆ ಹೆಚ್ಚು ತಲೆ ಕೆಡಿಸಿಕೊಳ್ಳುತ್ತೀರಿ. ಆಮೇಲೆ ಸರಿಹೋಗುತ್ತದೆ ಎಂದು ಬಿಟ್ಟಳು. ಆದರೆ ನನಗೆ ಸಂದೇಹ ಕೊರೆಯುತ್ತಲೇ ಇತ್ತು.

ಇದು ಆಗಿ ಎರಡು ತಿಂಗಳ ನಂತರ ನಮ್ಮ ಫ್ಯಾಮಿಲಿ ಫೋಟೋ ಆಲ್ಬಮ್ ತೆಗೆದು ನೋಡಿದೆ. ನನಗೆ ಷಾಕ್ ಆಯಿತು. ನನ್ನ ಮುಖದ ಬಣ್ಣದಲ್ಲಿ ಬದಲಾವಣೆ ಆಗಿತ್ತು! ಅದು ನಾನು ಅಮೆರಿಕೆಯಲ್ಲಿ ನೆಲೆಸಿದೆ ಎಂದು ಆದ ಬದಲಾವಣೆ ಖಂಡಿತ ಅಲ್ಲ, ರಾಧೆ ಸಹ ಅದನ್ನೂ ಗಮನಿಸಿರಲಾರಳು. ಆದರೆ ನಾನು ಈ



ಬಾರಿಗೆ ರಾಧೆಗೆ ಹೇಳಲಿಲ್ಲ. ನನ್ನ ಲೈಂಗಿಕ ಸಮಸ್ಯೆಗೆ ಕಾರಣ ಬೇರೆ ಏನೋ ಇರಬೇಕು ಎಂಬುದು ಈಗ ಗೊತ್ತಾಯಿತು. ಇದು ಗುರುತರ ವಾದ ಸಮಸ್ಯೆ ಎನ್ನಿಸಿ, ಪ್ರೊ। ರಿಚರ್ಡ್ಸನ್ ಅವರ ಬಳಿಯೇ ಮಾತನಾಡಿದೆ.

ಅವರು ಮತ್ತೆ ನನ್ನನ್ನು ದೀರ್ಘ ವೈದ್ಯಕೀಯ ತಪಾಸಣೆಗೆ ಕಳಿಸಿದರು. ವೈದ್ಯಕೀಯ ತಪಾಸಣೆ ಯಲ್ಲಿ ಮತ್ತೆ ನನ್ನ ಬಗ್ಗೆ 'ಎಲ್ಲಾ ಸರಿಯಾಗಿದೆ' ಎಂಬ ರಿಪೋರ್ಟ್ ಬಂದಿತು. 'ನೀವು ಸುಮ್ಮನೆ ಗಾಬರಿಯಾಗುತ್ತಿದ್ದೀರಿ ಡಾ। ವಿಜಯಕುಮಾರ್' ಎಂದುಬಿಟ್ಟರು ಪ್ರೊಫೆಸರ್.

ಹೀಗೆ ಈ ನಾಲ್ಕು ತಿಂಗಳು ಕಳೆದು ಹೋಯಿತು. ನನ್ನ ಪರಿಸ್ಥಿತಿಯಲ್ಲಿ ಬದಲಾವಣೆ ಕಾಣಲಿಲ್ಲ. ಆದರೆ ನಾನು ನನ್ನಲ್ಲೇ ತರ್ಕಿಸಿ ಕೊಂಡೆ. ಇಷ್ಟೆಲ್ಲ ವೈದ್ಯಕೀಯ ತಪಾಸಣೆ ಆಗಿ ರಿಪೋರ್ಟ್ ಬಂದಿದೆ. ಸುಮ್ಮನೆ ಸಂದೇಹ ಪಡುವುದು ಸರಿಯಲ್ಲ ಎಂದುಕೊಂಡೆ. ಮುಖ್ಯ ವಾಗಿ ನನ್ನ ಮಾನಸಿಕ ಸ್ವಾಸ್ಥ್ಯವನ್ನು ಕಾಪಾಡಿ ಕೊಂಡು ಬರುವುದು ಅತ್ಯಗತ್ಯ ಎನ್ನಿಸಿತು. ಆದರೆ ಡೋಲಾಯಮಾನ ಪರಿಸ್ಥಿತಿಯಲ್ಲಿದ್ದ ನಾನು ಅಸಫಲನಾಗುತ್ತಿದ್ದೆ. ಇದೇ ಮಾತನ್ನು ಮತ್ತೆ ಪ್ರೊಫೆಸರ್ ಅವರ ಎದುರಿಗೆ ಎತ್ತಿದರೆ ಅವರು ನನ್ನನ್ನು ಹೀಗಳೆದು ಮಾತನಾಡಬಹುದು. ನಿಮಗೆ ಜೀವಭಯ ಎಂದು ರೇಗಿಸಬಹುದು ಎಂದುಕೊಂಡು ಸುಮ್ಮನಾದೆ.

ಆದರೆ ಈಗ್ಗೆ ಹದಿನೈದು ದಿನಗಳ ಕೆಳಗೆ ಪರಿಸ್ಥಿತಿ ವಿಪರೀತಕ್ಕೆ ಹೋದಾಗ, ಪ್ರೊಫೆಸರ್ ಅವರಿಗೆ ತಾನಾಗಿಯೇ ಗೊತ್ತಾಯಿತು. ನನಗೆ ಕೆಲಸ ಮಾಡುತ್ತಿದ್ದಾಗ ತೀವ್ರವಾಗಿ ವಾಂತಿ ಯಾಯಿತು! ಈ ತಪಾಸಣೆಯಲ್ಲಿ ಸ್ಪಷ್ಟ ವಾಯಿತು – ನನ್ನ ದೇಹದ ಪರಿಸ್ಥಿತಿ ವಿಪರೀತವಾಗಿದೆ ಎಂಬುದು ಖಾತರಿ ಯಾಯಿತು. ನನ್ನ ಮೇಲೆ ವಿಕಿರಣಗಳು ತಮ್ಮ ಪ್ರಭಾವವನ್ನು ಬೀರಿದ್ದವು.

ಇದಕ್ಕೆ ಯಾರನ್ನು ಹೊಣೆ ಎಂದು ಹೇಳಲಿ? ಇಂತಹ ಪ್ರಯೋಗದಲ್ಲಿ ಕೈಹಾಕು ತ್ತೇನೆ ಎಂದು ಮುಂದೆ ಬಿದ್ದಿದ್ದಕ್ಕೆ, ಸಮಸ್ಯೆ ಯನ್ನು ಮತ್ತೆ ಮತ್ತೆ ಹೇಗೆ ಮುಂದಿಡುವುದು ಎಂದು ಭಯಪಟ್ಟಿದ್ದಕ್ಕೆ, ನನ್ನನ್ನೆ? 'ನೀವು ಸುಮ್ಮನೆ ಗಾಬರಿಯಾಗುತ್ತಿದ್ದೀರಿ' ಎಂದು ಹೇಳಿ ನನ್ನ ಮಾತನ್ನು ತಳ್ಳಿ ಹಾಕಿದ ಪ್ರೊಫೆಸರ್ ಅವರನ್ನೇ? ನನ್ನ ಬಗ್ಗೆ ತಪಾಸಣೆ ಮಾಡಿ ವೈದ್ಯಕೀಯ ರಿಪೋರ್ಟ್ ನೀಡಿದ ವೈದ್ಯರನ್ನೇ? ಅಂತೂ ನನ್ನ ಕಾಲ ಮೇಲೆ ನಾನೇ ಕೊಡಲಿ ಹಾಕಿಕೊಂಡೆ, ಆನಂದ' ಎಂದು ವಿಜಯ ಬಿಕ್ಕಿ ಬಿಕ್ಕಿ ಅಳತೊಡಗಿದ.

ನನಗೆ ತಡೆಯಲಾಗಲಿಲ್ಲ. ನಮ್ಮ ನಡುವೆ ನಿಂತಿದ್ದ ಗೋಡೆಯನ್ನು ಒಡೆದು ಬಿಡಲೇ ಅನ್ನಿಸಿತ್ತು. ಕಡೆಯಪಕ್ಷ ಆ ಕಿಟಕಿ-ಕಿಂಡಿಯನ್ನು ಮುಚ್ಚಿದ್ದ ಕಿಟಕಿ... ಹೌದು, ಅದನ್ನೇ ಸರಿಸುವುದು ಎಂದು ನಿರ್ಧರಿಸಿ, ಅದರ ಮೇಲೆ ಕೈಹಾಕಿ ಪಕ್ಕಕ್ಕೆ ಸರಿಸಿದೆ. ಸರಾಗವಾಗಿ ಸರಿಯಿತು. ಒಳಗಡೆಯಿಂದ ಚಿಲಕ ಹಾಕಿರಲಿಲ್ಲ!

ನಾನು ಕಿಟಕಿಯನ್ನು ಸರಿಸಿದ ಸದ್ದು ಕೇಳಿ ಭಯಭ್ರಾಂತನಾಗಿ ನನ್ನೆದುರಿಗೆ ಆ ಕಡೆ ಕುರ್ಚಿ ಯಲ್ಲಿ ಕುಳಿತಿದ್ದ ಅವನು ನನ್ನ ಕಡೆ ಕತ್ತೆತ್ತಿ ನೋಡಿದ.

ಆ ದೃಶ್ಯ! ನಾನೆಂದಿಗೂ ಮರೆಯಲಾರೆ!

ಆ ಮುಖ! ಆ ಸುಂದರವಾದ ಮುಖವೆಲ್ಲಿ! ನನ್ನ ಗೆಳೆಯ ವಿಜಯನ ಮುಖವೆಲ್ಲಿ, ನಾನು ನೋಡುತ್ತಿರುವ ಮುಖವೇನು? ಇಡೀ ಮುಖದ ತುಂಬಾ ಗುಳ್ಳೆಗಳು, ಡೊಗರುಗಳು, ವ್ರಣ ಬಂದು ಒಡೆದು ಕೀವು ಸೋರಿ ಅಲ್ಲೆಲ್ಲ ದೊಡ್ಡ ಡೊಗರು ಬಿದ್ದಿತ್ತು! ಕಣ್ಣುಗಳು ಗುಳಿಬಿದ್ದಿದ್ದವು, ತುಟಿ ಮಾಯವಾಗುವುದ ರಲ್ಲಿತ್ತು. ಮೂಗಿನ ಮೇಲೆಲ್ಲ ಚರ್ಮ ಸುಲಿದು ಹೋಗಿತ್ತು. ರೆಪ್ಪೆಯ ಮೇಲೆ, ಹುಬ್ಬಿನ ಮೇಲೆ ಕೂದಲೇ ಇರಲಿಲ್ಲ! ತಲೆಯ ಕೂದಲೂ ಸಹ ನಾಲ್ಕಾರು ಮಾತ್ರ ಅಂಟಿಕೊಂಡಿದ್ದವು.

ಯಾವುದೋ ಭಯಾನಕ ಜೀವಿಯನ್ನು ನೋಡುವ ಹಾಗೆ ನೋಡಿದೆ. ನನಗೆ ಗೊತ್ತಿತ್ತು, ವಿಕಿರಣದ ಪ್ರಭಾವಕ್ಕೆ ಒಳಗಾದವರ ದೇಹದಲ್ಲಿ ಇಂತಹ ವಿಪರೀತವಾದ ಪರಿವರ್ತನೆಗಳಾಗು ತ್ತವೆ ಎಂದು ಕೇಳಿ ಬಲ್ಲೆ. ಆದರೆ ಎಂದೂ ಕಣ್ಣಾರೆ ಕಂಡಿರಲಿಲ್ಲ. ವಿಕಿರಣಗಳು ಜೈವಿಕ ಸಮತೋಲನವನ್ನು ಹಾಳು ಮಾಡಿ, ದೇಹದ

ಸ್ಥಿರತೆಯನ್ನೇ ಅಲ್ಲಾಡಿಸಿ ಬಿಡುತ್ತವೆ. ಹಾಗಾಗಿ ವಿಜಯನ ದೇಹದಲ್ಲಾದ ಪ್ರಕ್ರಿಯೆಗಳು– ಲೈಂಗಿಕ ಅಸಾಮರ್ಥ್ಯ, ವಾಂತಿ ಭೇದಿ, ದೇಹ ವಿಕಾರವಾಗುವುದು, ಜೀವಕಣಗಳ ಉತ್ಪತ್ತಿಯಲ್ಲಿ ತಡೆ– ಇವೆಲ್ಲ ನಿರೀಕ್ಷಿಸುವ ಘಟನೆಗಳೇ ಆಗಿದ್ದವು.

ಅಷ್ಟರಲ್ಲಿ ವಿಜಯ ಎಚ್ಚೆತ್ತುಕೊಂಡಿದ್ದ. ಅವನು ಚೀರುತ್ತ ಕಿಟಕಿಯನ್ನು ಮುಚ್ಚಲು ಪ್ರಯತ್ನಿಸಿದ. ನಾನು ತಟ್ಟನೆ ನನ್ನ ಕೈಯನ್ನು ಅಡ್ಡ ಹಿಡಿದು ತಡೆದೆ.

'ಇರಲಿ ಬಿಡು ವಿಜಯ... ಇರಲಿ ಬಿಡು... ನೀನು ಮುಖವನ್ನು ಮುಚ್ಚಿಕೊಂಡ ಮಾತ್ರಕ್ಕೆ ಸತ್ಯ ಮುಚ್ಚಿ ಹೋಗುವುದಿಲ್ಲ. ನೀನೇನೋ ಪ್ರಪಂಚಕ್ಕೆ ಮುಖವನ್ನು ತೋರಿಸಲು ಹೆದರಿರಬಹುದು. ವೈದ್ಯಕೀಯ ಚಿಕಿತ್ಸೆ ಪಡೆದು ಸರಿ ಹೋಗುತ್ತದೆ ಎಂಬ ಆಸೆ ಹೊಂದಿರಬಹುದು... ಆದರೆ, ಗೆಳೆಯ... ನಾನು ಏನು ಹೇಳಲಿ... ನನಗೆ ಏನೂ ಹೇಳಲೂ ತೋಚುತ್ತಿಲ್ಲ. ನೀನೇನು ಮಾಡಿಕೊಂಡೆ! ನಿನ್ನ ಮುಖ ಮಾತ್ರವಲ್ಲ, ನಿನ್ನ ಇಡೀ ದೇಹದಲ್ಲೇ ವಿಷ ಹರಡಿರುತ್ತದಲ್ಲ... ಅದನ್ನು ಸರಿ ಮಾಡಿಕೊಳ್ಳಬಲ್ಲೆಯಾ?... ಎಷ್ಟು ದಿನ ನಿನ್ನ ಮನೆಯವರಿಂದ ಮುಚ್ಚಿಡಬಲ್ಲೆ... ಆದದ್ದಾಯಿತು... ನೀನು ಧೈರ್ಯ ಮಾಡಬೇಕು... ಯೋಚಿಸು' ಎಂದೆ.

ಅವನು ಮಾತನಾಡಲಿಲ್ಲ. ತಲೆ ತಗ್ಗಿಸಿದ. ಅವನ ಕಣ್ಣಿಂದ ನೀರು ತೊಟ್ಟಿಕ್ಕುತ್ತಿತ್ತು.

ಬಾಗಿಲು ತೆಗೆದ ಶಬ್ದ ಕೇಳಿಸಿತು. ತಿರುಗಿ ನೋಡಿದೆ.

ಪ್ರೊಫೆಸರ್ ರಿಚರ್ಡ್‌ಸನ್ ನಿಂತಿದ್ದರು.

* * *

ನಂತರ ನಡೆದಿದ್ದನ್ನು ಏನೆಂದು ಹೇಳಲಿ? ನನ್ನ ಮನಸ್ಥೈರ್ಯವೂ ಕುಸಿದಿತ್ತು. ವಿಜಯನ ಎದುರಿಗೇನೋ ಧೈರ್ಯದ ಮಾತನಾಡಿದ್ದೆ. ಆದರೆ ರಾಧಾಳಿಗೆ ತಿಳಿಸುವ ಧೈರ್ಯ ನನಗಿರಲಿಲ್ಲ. ಹಾಗಾಗಿ ಅವಳಿಗೆ ಕೊಟ್ಟ ಮಾತನ್ನು ಪಾಲಿಸಲಿಲ್ಲ. ಅವಳಿಗೆ ಮುಖ ತೋರಿಸದೆ ಅಲ್ಲಿಂದ ಕಾಲ್ಕಿತ್ತೆ. ಅವಳ ದುಃಖವನ್ನು ನೋಡುವ ಶಕ್ತಿ ನನ್ನಲ್ಲಿರಲಿಲ್ಲ.

ಭಾರತಕ್ಕೆ ವಾಪಸ್ಸು ಬಂದ ಮೇಲೆ ತಿಳಿಯಿತು– ನಾನು ಅಲ್ಲಿಂದ ಹೊರಟ ಮಾರನೇ ದಿನ ಡಾ। ವಿಜಯಕುಮಾರ್ ಸತ್ತುಹೋದ ಎಂದು. ●

ನನ್ನೂರು ನನ್ನ ಜನ

## ನಂಜನಗೂಡು

ನಂಜನಗೂಡು ಕಪಿಲಾ ನದಿ ತೀರದಲ್ಲಿರುವ ಒಂದು ಪುಣ್ಯಕ್ಷೇತ್ರ. ನಂಜನಗೂಡು ಎಂದೊಡನೆ ನೆನಪಿಗೆ ಬರುವುದು ಕರ್ನಾಟಕಕ್ಕೇ ಅತಿ ದೊಡ್ಡ ದೇವಸ್ಥಾನ ಎನಿಸಿಕೊಂಡಿರುವ ನಂಜನಗೂಡಿನ ಶ್ರೀ ಶ್ರೀಕಂಠೇಶ್ವರ ದೇವಸ್ಥಾನ, ಪ್ರಸಿದ್ಧ ಪತ್ತೇದಾರಿ ಕಾದಂಬರಿಗಳನ್ನು ಬರೆಯುತ್ತಿದ್ದ ನಂಜನಗೂಡು ತಿರುಮಲಾಂಬ, ರುಚಿಕೆ ಹೆಸರುವಾಸಿಯಾದ ನಂಜನಗೂಡಿನ ರಸಬಾಳೆ ಮತ್ತು ಇಲ್ಲಿ ನಡೆಯುವ ಜಾತ್ರೆಗಳು.

ಆದರೆ ನಂಜನಗೂಡು ಇವೆಲ್ಲವುಗಳ ಜೊತೆ ಸಣ್ಣ, ಮಧ್ಯಮ ಹಾಗೂ ದೊಡ್ಡ ಕೈಗಾರಿಕೆಗಳಿಂದಲೂ ಮುಂದುವರೆದಿದೆ. ಸಣ್ಣ ಕೈಗಾರಿಕೆಗಳನ್ನು ಬಿಟ್ಟರೆ ಮಧ್ಯಮ ಕೈಗಾರಿಕೆಗಳಾದ ಬಿ. ವಿ. ಪಂಡಿತರ ಸದ್ವೈದ್ಯ ಶಾಲೆ, ಸುಜಾತ ಟೆಕ್ಸ್‌ಟೈಲ್ಸ್ ಇನ್ನೂ ಹಲವು ಕಾರ್ಖಾನೆಗಳಿದ್ದು ಇವುಗಳಿಗಿಂತ ದೊಡ್ಡದಾದ NESTLE (ನೆಸ್ಲೆ) ಮತ್ತು INDOL (ಇಂಡಾಲ್)ನಂತಹ ದೊಡ್ಡ ದೊಡ್ಡ ಕೈಗಾರಿಕೆಗಳೂ ಸ್ಥಾಪಿತವಾಗಿವೆ. ಈ ಎಲ್ಲಾ ಕೈಗಾರಿಕೆಗಳೊಂದಿಗೆ ಇನ್ನೂ ಹಲವು ದೊಡ್ಡ ಕಾರ್ಖಾನೆಗಳು ಸ್ಥಾಪನೆಯಾಗುತ್ತಿವೆ.

● ಸುನಿಲ್, ನಂಜನಗೂಡು

# ಮನ-ಮುದ್ರೆ

• ಚಿರಂಜೀವಿ

ಮೈಸೂರು ನಗರ-ಬರೀ ನೆನಪು ಮಾತ್ರದಿಂದಲೇ ನನ್ನನ್ನು ಭಾವಪರವಶನನ್ನಾಗಿ ಮಾಡಿಬಿಡುತ್ತದೆ. ಆ ನಗರದ ನವಿರು-ಸೂಕ್ಷ್ಮಗಳು ಸಂತೋಷವನ್ನುಂಟು ಮಾಡುತ್ತವೆ. ಮೈಸೂರು ನಗರವನ್ನು ನೋಡುವ ಮೊದಲೇ, ಅಲ್ಲಿ ಅರಮನೆ ಇದೆ, ಮಹಾರಾಜರಿದ್ದಾರೆ, ಚಾಮುಂಡಿ ಬೆಟ್ಟ ಇದೆ, ಜೂ ಇದೆ ಎಂದೆಲ್ಲಾ ಚಿಕ್ಕಂದಿನಲ್ಲಿ ಕಿವಿಗೆ ಬೀಳುತ್ತಿದ್ದದ್ದೆ ಆಕರ್ಷಕವಾಗಿತ್ತು. ಪ್ರತಿ ವರ್ಷ ನಮ್ಮ ಶಾಲೆಗಳಲ್ಲಿ 'ಮಹಾರಾಜರ ವರ್ಧಂತಿ' (ಹುಟ್ಟುಹಬ್ಬ) ಎಂದು ಲಾಡು ಕೊಟ್ಟು ರಜ ಸಾರುತ್ತಿದ್ದರು. ಇದ್ದಕ್ಕಿದ್ದ ಹಾಗೆಯೇ ಎಲ್ಲೊ ಒಂದು ಕಡೆ ನಾಲ್ಕು ರಸ್ತೆಗಳು ಸೇರುವ ಕಡೆ, ಕಾರುಗಳ ಸಾಲು ಕಾಣಿಸಿದಾಗ ಜನರೆಲ್ಲರೂ 'ಮಹಾರಾಜರು, ಮಹಾರಾಜರು' ಎಂದು ಭಯಭಕ್ತಿಗಳಿಂದ ನಿಂತು, ಹಾದು ಹೋದ ರೋಲ್ಸ್‌ರಾಯ್ಸ್ ಕಾರಿಗೆ ಕೈಮುಗಿಯುತ್ತಿದ್ದರು. ಶಾಲಾ ಪಾಠಗಳಲ್ಲಿ ಮೈಸೂರು ಅರಸರ ಇತಿಹಾಸದ ಕಥೆ ಇರುತ್ತಿತ್ತು. ಮಹಿಷಾಸುರನನ್ನು ಮರ್ಧಿಸಿದ ಚಾಮುಂಡೇಶ್ವರಿಯ ಕಥೆ, ಜಟ್ಟಿಗಳೊಂದಿಗೆ ಜಯಿಸಿದ ಕಂಠೀರವ ನರಸರಾಜ ಒಡೆಯರ ಕಥೆ. ಅತಿ ಹತ್ತಿರದಲ್ಲಿ ಬೆಂಗಳೂರಿನಲ್ಲಿದ್ದರೂ ಮೈಸೂರು ನೋಡಿರಲಿಲ್ಲ. ಆದರೆ ಮೈಸೂರಿನ ವೈಭವ, ಅಲ್ಲಿನ ಶಾಲಾ–ಕಾಲೇಜುಗಳು, ಸುಪ್ರಸಿದ್ಧ ಪ್ರಿನ್ಸಿಪಾಲರು-ಮೇಷ್ಟ್ರುಗಳ ಬಗ್ಗೆ (ಅಲ್ಲೆ ಹುಟ್ಟಿ ಬೆಳೆದು ವಿದ್ಯೆಕಲಿತ ನನ್ನ ತಂದೆಯವರಿಂದ) ಬೇಕಾದಷ್ಟು ವಿಷಯ ಕೇಳಿದ್ದೆ. ಮಹಾರಾಜಾ ಕಾಲೇಜಿನ ಶತಮಾನೋತ್ಸವ ನಡೆದಾಗ ನನ್ನ ತಂದೆ ಹೋಗಿ ಬಂದು ದೊಡ್ಡದಾಗಿ ವರ್ಣಿಸಿದ್ದರು.



ಮೈಸೂರು ಮಹಾರಾಜ ಜಯಚಾಮರಾಜ ಒಡೆಯರು ರಾಜಪ್ರಮುಖರಾಗಿ, ಸುಪ್ರಸಿದ್ಧ ದಸರಾ ಮೆರವಣಿಗೆಯಲ್ಲಿ ಇನ್ನು ಮುಂದೆ ಮಹಾರಾಜರ ಪಾತ್ರ ಇರುವುದಿಲ್ಲ ಎಂದೆಲ್ಲ ಕೇಳಿಬಂದಾಗ, ನಾವು ಕೆಲ ವರು ಟೀನ್‌ಏಜ್ ಹುಡುಗರು, ಮಹಾರಾಜರು ಅಂಬಾರಿ ಯಲ್ಲಿ ಕುಳಿತು ನಡೆಯುವ ದಸರಾ ನೋಡಿಯೇ ಬಿಡ ಬೇಕು ಎಂದು ಮೈಸೂರಿಗೆ ಹೊರಟುಬಿಟ್ಟೆವು.

ಮೈಸೂರು ತುಂಬಾ ಜನ, ಎಲ್ಲೆಲ್ಲೂ ಸಂಭ್ರಮ, ಎಲ್ಲೆಲ್ಲೂ ಅಲಂಕಾರ. ಅಂದೆಲ್ಲ ಅರಮನೆ ಸುತ್ತ ಮುತ್ತ ಓಡಾಡಿ, ಮಧ್ಯಾಹ್ನದ ವೇಳೆಗೆ ಸ್ಟ್ಯಾಚ್ಯೂ ಸ್ಕ್ವೇರ್ ಬಳಿ ಗುಂಪಿನಲ್ಲಿ ಜಾಗ ಹಿಡಿದು ನಿಂತೆವು. ದಸರಾ ಮೆರವಣಿಗೆ ಪ್ರಾರಂಭ, ಮಹಾರಾಜರನ್ನು ಕಾಣಿಸಿದ ಭವ್ಯವಾದ ಆನೆ-ಉಳಿದೆಲ್ಲ ಆಟನೋಟಗಳು ಅದ್ಭುತ ಅನುಭವವೆನಿಸಿದವು. ಬಹುಶಃ ಮಹಾರಾಜರು ಆನೆ ಮೇಲೆ ಕೂತದ್ದು ಅದೇ ಕೊನೆ ವರ್ಷ.

ದಸರಾ ಗದ್ದಲದಲ್ಲಿ ನೋಡಿದ ಮೈಸೂರನ್ನು ಶಾಂತ ವಾತಾವರಣದಲ್ಲಿ ನೋಡಬೇಕೆಂದು ಆಮೇಲಾ ಮೇಲೆ ಹೋಗುವುದು ಸಾಧ್ಯ ವಾಯಿತು. ಮೈಸೂರಿನ ವಿಶಾಲ ರಸ್ತೆಗಳು, ಇಕ್ಕೆಲದ ಮರ ಗಳು– ಉದ್ಯಾನಗಳು, ಶಿಲೆ ಗಳು, ಸಾಂಪ್ರದಾಯಿಕ ಕಟ್ಟಡ ಗಳು– ವಾಸಸ್ಥಳಗಳು, ಮತ್ತೆ ನೂರಾರು ವರ್ಷಗಳ ಇತಿಹಾಸಕ್ಕೆ ಸಾಕ್ಷಿ ಎಂಬಂತೆ ದೊಡ್ಡದಾಗಿ ನಿಂತಿರುವ ಅರಮನೆ-ಇವೆಲ್ಲ ಏನೋ ಒಂದು ಸೊಗಸು-ಸೌಂದರ್ಯ ಕಾಣಿಸಿದವು. ಇವುಗಳನ್ನು ನೆನಪು ಮಾಡಿಕೊಂಡಾಗಲೆಲ್ಲ ಏನೊ ಕಾಡುವಿಕೆಯ ಅನುಭವ ವಾಗುತ್ತಿತ್ತು.

ಇಂದಿಗೂ ಮೈಸೂರಿನಲ್ಲಿ ಓಡಾಡಿದಾಗ ಅಲ್ಲಿನ ಜನ ಬದುಕು, ಎಲ್ಲಿ ನಿಂತರೂ ಕಾಣುವ ಅರಮನೆ-ಚಾಮುಂಡಿಬೆಟ್ಟ, ಸೇಂಟ್ ಫಿಲೋಮಿನಾ ಚರ್ಚ್‌ನಂಥ ಪಳೆಯುಳಿಕೆಗಳು, ವಿಶಾಲ ವಾದ ರಸ್ತೆಗಳು– ಮನಸ್ಸಿಗೆ ಮುದವನ್ನುಂಟು ಮಾಡುವು ದಲ್ಲದೆ, ಇಲ್ಲಿಯೆ ವಾಸ ಮಾಡುವಂತಿದ್ದರೆ ಎಷ್ಟು ಚೆನ್ನಾಗಿರಬಹುದು ಅನ್ನಿಸು ವಂತಾಗುತ್ತದೆ.

ಹೀಗೆ– ನನಗೆ ಮೈಸೂರಿ ನೊಂದಿಗೆ ಏನೊ ಒಂದು ರೀತಿಯ ಮಾನಸಿಕ ನಂಟು.

* * *

ಪ್ರೊಫೆಸರ್ ನಿಸಾರ್ ಅಹಮದ್– ಕನ್ನಡ ಕಾವ್ಯ ಲೋಕದ ಸುಪ್ರಸಿದ್ಧ ಹೆಸರು. ಹಿಂದೆಲ್ಲ ನಾನವರನ್ನು ಭೇಟಿ ಯಾಗಿದ್ದು, ಮಾತನಾಡಿಸಿದ್ದು ಬಹಳ ಕಡಿಮೆ. ಅವರ ಬಗ್ಗೆ ಮಾತನಾಡಿದವರು, ಅವರ ಕಾವ್ಯವನ್ನು ವಿಮರ್ಶಿಸಿದ ವರು– ಟೀಕಿಸಿದವರು, ಅವರ ವ್ಯಕ್ತಿತ್ವವನ್ನು ಭಿನ್ನಭಿನ್ನ ವಾಗಿ ಕಂಡವರು– ಇವ ರೆಲ್ಲರನ್ನೂ ಕೇಳಿಸಿಕೊಂಡಿದ್ದೆ. ಮುಸ್ಲಿಮರಾಗಿ ಅವರು ಪುರಂದರದಾಸರ ಬಗ್ಗೆ ಹಾಡು ಬರೆದಾಗ ಆಶ್ಚರ್ಯ ಸಂತೋಷ ಗೊಂಡಿದ್ದೆ. ಅವರ ವ್ಯಕ್ತಿತ್ವ, ನಡವಳಿಕೆ, ಬರವಣಿಗೆ ಇವೆಲ್ಲ ನನಗೆ ದೂರದಿಂದ ಕುತೂಹಲದ ಅಂಶಗಳಾ ಗಿಯೇ ಉಳಿದುಕೊಂಡಿ ದ್ದವು.

ಆದರೆ– ಒಂದು ವಿಷಯದ ಬಗ್ಗೆ ಮಾತ್ರ ಅವರ ಬಗ್ಗೆ ತುಂಬಾ ಆಕರ್ಷಣೆಯುಂಟಾ ಯಿತು; ಕನ್ನಡ ಸಾಹಿತ್ಯದ ಅತ್ಯುತ್ತಮ ಬರೆಹಗಳ ಬಗ್ಗೆ ಅತ್ಯಂತ ಸೂಕ್ಷ್ಮವಾಗಿ, ನವಿರಾಗಿ, ಪದರುಪದರಾಗಿ ಒಳನೋಟಗಳನ್ನು ತಾವೂ ಕಂಡು, ಇತರರಿಗೂ ತಿಳಿಸಿ ಕುಶಿಪಡುವ ಅವರ ಗುಣ, ಇದನ್ನು ನನಗೆ ತಿಳಿಸಿದವರು ಲೇಖಕ– ಗೆಳೆಯ ಎಂ. ಕೆ. ಗೋಪಿನಾಥ್ (ಇವರೂ ಇಂಥ ಸೂಕ್ಷ್ಮ ಆಲೋಚನೆ



ಗಳನ್ನು ಮಾಡಬಲ್ಲಂಥ ವರು).

ಏನೋ ಒಂದು ಕಾರಣ; ಈಚೆಗೆ ಎರಡು-ಮೂರು ತಿಂಗಳು ಅವರನ್ನು ನಾನು ಅನೇಕ ಸಲ ಭೇಟಿ ಮಾಡು ವಂತಾಯಿತು. ಎಲ್ಲೊ ಹೋಗಲು ಹೊರಟು ಅವರ ಮನೆಯ ಹತ್ತಿರವೇ ಬಂದು, ಅವರ ಮನೆಯೊಳಗೆ ನುಗ್ಗಿ ಕೆಲಹೊತ್ತು ಮಾತನಾಡು ವುದು ಸಾಧ್ಯವಾಯಿತು– ಈ ಘಟ್ಟದಲ್ಲಿ ಒಂದು ಮಾತು ಹೇಳಿಬಿಡಬೇಕು; ಬೆಂಗಳೂರು ಪದ್ಮನಾಭ ನಗರದಲ್ಲಿ ನಿಸಾರ್ ಅಹಮದ್ ಸೊಗ ಸಾದ ದೊಡ್ಡ ಮನೆ ಕಟ್ಟಿ ಕೊಂಡಿದ್ದಾರೆ. ಮಹಡಿ ಪೂರ್ತಿ ಅವರ ಲೈಬ್ರೆರಿ, ಬರೆವಣಿಗೆ, ಗೆಳೆಯರೊಂದಿಗೆ ಹರಟೆಗೆ ಜಾಗ. ಜೊತೆಗೆ ಹಿಂದಿನ ಬಾಲ್ಕನಿ ಯಂಥ ಜಾಗದಲ್ಲಿ ನಿಂತರೆ, ದೂರದಲ್ಲಿ ಸುಂದರವಾಗಿ ಕಾಣಿಸುವ ಗುಡ್ಡ.

ಆ ದಿನ ಅವರ ಮನೆಯಲ್ಲಿ ಮಾತನಾಡಿದ್ದು 'ಮಾಸ್ತಿ ಕಥೆ ಗಳ ಅದ್ಭುತ'. ಗೋಪಿನಾಥ್ ಜೊತೆಗಿದ್ದರು. ಮಾಸ್ತಿ ಅವರ ಸಮಗ್ರ ಕಥೆಗಳ ಒಂದು ಪಕ್ಷಿ ನೋಟ, ಅವರ ಅತ್ಯುತ್ತಮ ಕಥೆಗಳು, ಮಾಸ್ತಿ ಮನೋ ಭಾವ– ಅದರಂತೆ ಶೈಲಿ, ಇವೆಲ್ಲ ಮಾತನಾಡಿದೆವು. ಸಾಹಿತ್ಯ ಸೂಕ್ಷ್ಮಗಳ ಅವರ ನೋಟದ ಸುಳಿವು ನನ ಗಾಯಿತು.

ಇನ್ನೊಮ್ಮೆ – ತುಷಾರದ 'ಹಿರಿಯರ ಆಯ್ಕೆ ಕವನ' ಗಳನ್ನು ಪರಿಶೀಲಿಸಿ ಆಯ್ಕೆ ಮಾಡಲು ಅವರೇ 'ಮಣಿಪಾಲ್ ಸೆಂಟರ್'ಗೆ ಬಂದರು. ಶಾಂತವಾಗಿ ಒಂದಿಷ್ಟು ಹೊತ್ತು ಕೂತು, ಕವನಗಳನ್ನು ಓದಿ, ಆಯ್ಕೆ ಮಾಡಿ, ವಿಮರ್ಶೆ ಬರೆದು ಕೊಟ್ಟರು. ಅನಂತರ ಒಂದಿಷ್ಟು ಸಾಹಿತ್ಯ ಚರ್ಚೆ. ಕೆಳಗೆ ಹೋಟಲ್‌ಗೆ ಹೋಗಿ ತಿಂಡಿ ಕಾಫಿ ಮಾಡಿದೆವು. ಮತ್ತೆ ಒಂದಿಷ್ಟು ದೂರ ಮಾತನಾಡುತ್ತಲೇ ಸಾಗಿ ದೆವು.

'ಕನ್ನಡ ಸಾಹಿತ್ಯದ ವಿವಿಧ ಅದ್ಭುತಗಳ ಬಗ್ಗೆ, ನವಿರಾದ ಬರೆಹ ಶೈಲಿಯ ಬಗ್ಗೆ ನೀವೇಕೆ ತುಷಾರಕ್ಕೆ ಬರೆಯಬಾರದು?' ಎಂದೊ ಏನೊ ಎರಡು ಮೂರು ಸಲ ಕೇಳಿ ಕೇಳಿ ಕೊನೆಗೆ 'ಬರೆದು ಕೊಡುತ್ತೇನೆ'– ಎಂದುಬಿಟ್ಟರು.

ವ್ಯಕ್ತಿಯಾಗಿ, ನಿಸಾರ್ ಒಬ್ಬೊಬ್ಬ ಸ್ನೇಹಿತನಿಗೆ ಒಂದೊಂದು ರೀತಿ ಕಂಡಿರ ಬಹುದು. ಅವರ ಗುಣವನ್ನು ಒಬ್ಬೊಬ್ಬರು ಒಂದೊಂದು ರೀತಿ ವಿಶ್ಲೇಷಿಸಿ ನಿರ್ಧರಿಸಿ ರಬಹುದು. ಇಂಥ ವಿಶ್ಲೇಷಣೆ ಗಳಿಗೆಲ್ಲ ನಿಸಾರ್ ಅವರ ಮುಕ್ತ ಮಾತು ಬೇಕಾದಷ್ಟು ಆಸ್ಪದ ನೀಡುತ್ತದೆ. ಮನಸ್ಸಿಗೆ ಅನ್ನಿಸಿದ್ದನ್ನು ಹೇಳಿಬಿಡು ತ್ತಾರೆ– ಒಂದಿಷ್ಟು ಚಡಪಡಿಕೆ (ಅಥವ ಕಳಕಳಿ) ತುಂಬಿ ಮಾತನಾಡುತ್ತಾರೆ.

ಇವೆಲ್ಲ ಅವರವರು ಕಂಡಂತೆ. ನಾನೂ ಅವರನ್ನು ಪೂರ್ತಿಯಾಗಿ ಕಾಣಬೇಕಾ ಗಿದೆ. ಆದರೆ, ಒಂದಂತೂ ನನಗೆ ಸ್ಪಷ್ಟವಾಗಿ– ಖಚಿತ ವಾಗಿ ಕಂಡಿದೆ: ಅವರ ಸಾಹಿತ್ಯದ ಸೂಕ್ಷ್ಮ ಒಳ ನೋಟ. ಖಂಡಿತ, ಆದರಲ್ಲಿ ಗೌರವವಿದೆ, ಅಧ್ಯಯನದ ಶ್ರಮವಿದೆ.

ಈ ವಿಶಿಷ್ಟ ನಿಸಾರ್ ಮುಖ ವನ್ನು ಈ ಸಂಚಿಕೆಯಿಂದ ಪ್ರತಿ ತಿಂಗಳೂ ನೋಡಲು– ಓದಲು ನಾನೂ ಕುತೂಹಲ ದಿಂದಿದ್ದೇನೆ: 'ಅಚ್ಚುಮೆಚ್ಚು' ಲೇಖನಗಳ ಮೂಲಕ.

* * *

ಬೆಂಗಳೂರಿನಲ್ಲಿ ಪ್ರೊಫೆಸರ್ ಜಿ. ವೆಂಕಟಸುಬ್ಬಯ್ಯ ಮತ್ತು ಧಾರವಾಡದಲ್ಲಿ ಎನ್ಕೆ ಆರು ದಿನಗಳ ಅಂತರದಲ್ಲಿ ಎಂಭತ್ತರ ಗಡಿ ತಲುಪಿದ್ದಾರೆ. ಜಿವೆಂ ಆರು ದಿನ ಮೊದಲು ಹುಟ್ಟಿ ಹಿರಿಯರೆನ್ನಿಸಿದ್ದಾರೆ. ಎನ್ಕೆ ಆರುದಿನಗಳಾದ ಮೇಲೆ ಹುಟ್ಟಿ 'ತಮ್ಮ' ಎನಿಸಿ ಕೊಂಡಿದ್ದಾರೆ.

ಜಿವೆಂ ಹುಟ್ಟಿದ್ದು 23 ಆಗಸ್ಟ್ 1913. ಎನ್ಕೆ ಹುಟ್ಟಿದ್ದು 29 ಆಗಸ್ಟ್ 1913 ಇವರಿಬ್ಬರೂ ಎಂ.ಎ., ಬಿಟಿ ಮಾಡಿದವರು. ಜಿವೆಂ ಶಿಕ್ಷಣ ಕ್ಷೇತ್ರಕ್ಕೆ ಮುಡಿಪಾದರು, ಎನ್ಕೆ ಪ್ರಸಾರ ಮಾಧ್ಯಮ ಆಕಾಶವಾಣಿಗೆ ತಮ್ಮನ್ನು ಅರ್ಪಿಸಿಕೊಂಡರು. ಇಬ್ಬರೂ ಸಾತ್ವಿಕರು. ಮೃದು ಸ್ವಭಾವ ದವರು. ಅತ್ಯಂತ ಸರಳರು, ನಿಗರ್ವಿಗಳು.



ಕಾಲೇಜ್ ಉಪನ್ಯಾಸಕ, ಪ್ರಾಧ್ಯಾಪಕ, ಪ್ರಿನ್ಸಿಪಾಲ್ ಆಗಿ, ವಿಶೇಷ ಪ್ರಾಧ್ಯಾಪಕರು, ವಿಶ್ವವಿದ್ಯಾಲಯಗಳ ಅಕಾಡೆಮಿಕ್ ಕೌನ್ಸಿಲ್ ಸದಸ್ಯರು, ಸೆನೆಟ್ ಸದಸ್ಯರು ಆಗಿ ಕನ್ನಡ ಸಾಹಿತ್ಯ ಪರಿಷತ್ತಿಗೆ 1954 ರಿಂದಲೂ ದುಡಿಯುತ್ತ, ಕಾರ್ಯದರ್ಶಿ, ಅಧ್ಯಕ್ಷರೂ ಆಗಿ, ಕನ್ನಡ ನಿಘಂಟಿನ ಸಂಪಾದಕರಾಗಿ– ಇತ್ತೀಚೆಗೆ ಹೊರ ಬರುವಂತಾಯಿತು–ಕರ್ನಾಟಕಕ್ಕೆ– ಕನ್ನಡ ಭಾಷೆಗೆ ಅಖಂಡ ಸೇವೆ ಸಲ್ಲಿಸಿರುವ ಜಿವೆಂ– ಇದೀಗ ವಿಶೇಷ ಬರವಣಿಗೆಗಳ ಸೃಷ್ಟಿಯನ್ನು ಆಲೋಚಿಸುತ್ತಿದ್ದಾರೆ. ಇತ್ತೀಚೆಗೆ ಪತ್ನಿ ಸಮೇತ ಕೆನಡಾಕ್ಕೆ ಹೋಗಿ ಬಂದರು.

ಎನ್ಕೆ, ಬದುಕಿನ ನೋವು-ನಲಿವುಗಳನ್ನು ಅಖಂಡವಾಗಿ ಉಂಡಿದ್ದರೂ ಬದುಕಿನ ಪ್ರತಿಕ್ಷಣದಲ್ಲೂ ಸಂತೋಷ ಹೆಕ್ಕಿ ತೆಗೆಯಲು ಪ್ರಯತ್ನಿಸಿದವರು. ಬದುಕು ಅವರು ನಿರೀಕ್ಷಿಸುವಷ್ಟು ಸರಾಗವಾಗಲಿಲ್ಲ. ಆದರೆ ಅವರಿಗೆ ಅದ್ಭುತವಾದ ಜೀವನಾನುಭವವನ್ನು ನೀಡಿತು. ಎನ್ಕೆಯಲ್ಲಿನ ಬರೆಹಗಾರ ಅವನ್ನು ವಿಡಂಬನೆ ಮಾಡಿ ಕುಶಿಪಡುವಷ್ಟು ತ್ರಿವಿಕ್ರಮ ರೂಪದಲ್ಲಿ ಬದುಕು ಅವರಿಗೆ ಕಂಡಿತು. ಎನ್ಕೆ ಸಂತೋಷ– ಸಂಕಟಗಳನ್ನು ಕುತೂಹಲದಿಂದ ನೋಡಿದ್ದಾರೆ. ಅವರ ಹೃದಯದಲ್ಲಿ ಈಗಲೂ ನೋವಿನ ನೆನಪುಗಳು, ವಿಧವಿಧ ಚಡಪಡಿಕೆಗಳು ತುಂಬಿಕೊಂಡಿದ್ದರೂ ಅವರ ಮುಖದಲ್ಲಿ ಯಾವಾಗಲೂ ಶಾಂತ– ಸಾತ್ವಿಕ ಭಾವ, ಆತ್ಮೀಯ ನಗೆ.

'ಇನ್ನು ಕಥೆ ಕಾದಂಬರಿ– ಹಾಸ್ಯಲೇಖನ– ನಾಟಕ ಎಂದು ಬರೆದದ್ದೆಲ್ಲ ಸಾಕು. ಅದು ಉಂಟುಮಾಡುವ ಚಡಪಡಿಕೆಗಳೂ ಸಾಕು. ಇನ್ನು ನನಗಾಗಿ, ನನಗೆ ಸಂತೋಷ ಕೊಡುವುದನ್ನು ಮಾತ್ರ ಬರೆಯಲಿದ್ದೇನೆ'-ಎಂದು ಭೀಷ್ಮ ಪ್ರತಿಜ್ಞೆ ಮಾಡಿದ್ದರೂ ಆತ್ಮೀಯರಿಗಾಗಿ ಇದನ್ನು ಸಡಲಿಸಲು ಅಡ್ಡಿಯಿಲ್ಲ ಎನ್ನುತ್ತಾರೆ, ಎನ್ಕೆ.



'ನನ್ನ ಕೆಲವು ವಿಶೇಷ ಅಧ್ಯಯನದ– ಸಂಶೋಧನೆಯ ಬರವಣಿಗೆಗಳನ್ನು ಕೃತಿರೂಪಕ್ಕೆ ತರಲು ನಿರ್ಧರಿಸಿದ್ದೇನೆ'– ಎಂದು ಹೊಸ ಉತ್ಸಾಹದಿಂದ ಹೇಳುತ್ತಾರೆ, ಪ್ರೊ। ಜಿವೆಂ.

'ಎಂಭತ್ತರ ಅಲುಗು' ಇವರಿಬ್ಬರಿಗೂ ಪ್ರಕಾಶಮಾನವಾಗಿ ಝಳಪಿಸಲಿ ಎಂದೇ ಕನ್ನಡಿಗರೆಲ್ಲರ ಶುಭ ಹಾರೈಕೆ.

* * *

ಮೊನ್ನೆ ಮೊನ್ನೆ– ಕಡ್ಡಾಯವಾಗಿ ಹಿರಿಯರೊಬ್ಬರನ್ನು ನೋಡಲೇಬೇಕಾಗಿ ಬಂದಿತ್ತು. 'ನನ್ನಲ್ಲಿರುವ ಗ್ರಂಥ ರಾಶಿಯನ್ನು ಹಂಚಿ ಬಿಡುತ್ತಿದ್ದೇನೆ. ನಿಮಗಾಗಿ ಕೆಲವು ಪುಸ್ತಕಗಳನ್ನಿಟ್ಟಿದ್ದೇನೆ. ಕೂಡಲೇ ಬನ್ನಿ'– ಎಂದು ಪ್ರೀತಿಯಿಂದ ಕರೆಬಂತು. ಪುಸ್ತಕದಾಸೆಗೆ ಬೇರೆ ಕೆಲಸಗಳನ್ನು ಬದಿಗೊತ್ತಿ ಒಂದು ಭಾನುವಾರ ಅವರ ಮನೆಗೆ ಹೆಜ್ಜೆ ಇಟ್ಟೆ. ಅನಾರೋಗ್ಯದಲ್ಲಿದ್ದರೂ ಲವಲವಿಕೆ, ಉತ್ಸಾಹಗಳಿಂದ ಸ್ವಾಗತಿಸಿ ಪುಸ್ತಕಲೋಕದತ್ತ ನನ್ನನ್ನು ಎಳೆದೊಯ್ದರು ಆ ಹಿರಿಯರು.

ಅವರು, ಪ್ರೊಫೆಸರ್ ಪಿ. ಕೆ. ಪಾಟೀಲ್: ಕರ್ನಾಟಕ

ರಾಜ್ಯ ಮುಖ್ಯ ಗ್ರಂಥಾಧಿಕಾರಿ ಆಗಿ ನಿವೃತ್ತರಾಗಿದ್ದವರು. ನನಗಾಗಿ ಇಟ್ಟಿದ್ದ ಪುಸ್ತಕಗಳನ್ನು ನನಗೆ ದಾಟಿಸುತ್ತ ಕೆಲ ದಶಕಗಳ ಪುಸ್ತಕ ಪ್ರಪಂಚದ ನಂಟನ್ನು ಅವರು ನೆನಪು ಮಾಡಿಕೊಂಡರು.

ಪ್ರೊ। ಪಾಟೀಲರು ಎಂಎಬಿಎಲ್ ಪದವಿಗಳೊಂದಿಗೆ ಲೈಬ್ರೆರಿ ವಿಜ್ಞಾನದಲ್ಲೂ ಅನೇಕ ಪದವಿಗಳನ್ನು, ಗೌರವಗಳನ್ನು ಪಡೆದುಕೊಂಡವರು. ಮೈಸೂರು ವಿಶ್ವವಿದ್ಯಾಲಯದ ಗ್ರಂಥಾಲಯ ಬೋಧನ ಇಲಾಖೆಯ ಪ್ರಾಧ್ಯಾಪಕರೂ-ಮುಖ್ಯಸ್ಥರೂ ಆಗಿ ಅನೇಕ ಗಂಥಗಳನ್ನು ರಚಿಸಿ, ವಿದೇಶಗಳಲ್ಲೂ ಉಪನ್ಯಾಸ ನೀಡಿ ಬಂದಿದ್ದವರು.

ಪ್ರೊ। ಪಾಟೀಲರು ತಮ್ಮ ಒಳಕೋಣೆಯಲ್ಲಿರುವ ಪುಸ್ತಕ



ಗಳನ್ನು ತೋರಿಸಿ 'ಇವೆಲ್ಲ ನನಗೇ ಬೇಕು, ಯಾವಾಗಲೂ ನನ್ನ ಓದಿಗೆ-ಅಧ್ಯಯನಕ್ಕೆ ಬೇಕು. ಇವನ್ನು ಯಾರಿಗೂ ಕೊಡುವುದಿಲ್ಲ'-ಎಂದರು.

'ಲೈಬ್ರೆರಿ ಸೈನ್ಸ್' ಬಗ್ಗೆ ಅಪಾರ ಕಳಕಳಿ-ಜ್ಞಾನವಿದ್ದ ಪ್ರೊ। ಪಾಟೀಲರು, ದೇಶದ ಗ್ರಂಥಾಲಯ ಪರಿಣತರುಗಳಲ್ಲಿ ಒಬ್ಬರು.

ಬೆಂಗಳೂರಿನ 'ಮಣಿಪಾಲ್ ಸೆಂಟರ್'ನಲ್ಲಿ ಪುಟ್ಟದೊಂದು 'ರೆಫರೆನ್ಸ್ ಲೈಬ್ರೆರಿ' ಮಾಡಲು ಪ್ರಯತ್ನಿಸುತ್ತಿರುವುದಾಗಿ ಹೇಳಿದಾಗ– 'ನಾನೇ ಬಂದು ಅದನ್ನು ವ್ಯವಸ್ಥಿತವಾಗಿ ರೂಪಿಸಿ ಕೊಡುತ್ತೇನೆ' – ಎಂದರು.

ಆದರೆ, ಅವರ ಈ ಕೊನೆ ಬಯಕೆ ಈಡೇರಲಿಲ್ಲ. ಹೋದ ತಿಂಗಳು ಅನಿರೀಕ್ಷಿತವಾಗಿ ಅವರು ಕೊನೆಯುಸಿರೆಳೆದರು. ಸುದ್ದಿ ಆಘಾತದಂತೆ ಬಂದರೂ ಅವರೊಂದಿಗೆ ನಾಲ್ಕಾರು ಘಂಟೆಗಳು ಕಳೆದ ಸಂತೋಷ-ನೆನಪು ಮಾತ್ರ ನನ್ನದಾಯಿತು.

* * *

ಮಣಿಪಾಲದ ಮುದ್ರಣಾಲಯದಲ್ಲಿ ಬೆಳಗ್ಗೆ, ಮಧ್ಯಾಹ್ನ, ಸಂಜೆ– ಹೀಗೆ ಯಾವಾಗ ಬಂದರೂ ಕಾಣಿಸುತ್ತಿದ್ದ ಒಂದು ಆತ್ಮೀಯ ವ್ಯಕ್ತಿತ್ವ – ಬಿ. ಕೃಷ್ಣಯ್ಯ. ಮಣಿಪಾಲ ಮುದ್ರಣಾಲಯದ ಜನರಲ್ ಮ್ಯಾನೇಜರ್.

ಆಗಸ್ಟ್ ಹತ್ತೊಂಭತ್ತರಂದು ಕೃಷ್ಣಯ್ಯ ಕೊನೆಯುಸಿರೆಳೆದರು – ತಮ್ಮ ಎಪ್ಪ



ತ್ತೈದನೆಯ ವಯಸ್ಸಿನಲ್ಲಿ. ಒಂದು ರೀತಿ ಇಲ್ಲಿನ ಎಲ್ಲರಿಗೂ ಅವರದು ಅನಿರೀಕ್ಷಿತ ವಿದಾಯ.

ನಾ ಕಂಡಂತೆ ಕೃಷ್ಣಯ್ಯ ಅತಿ ಅಪರೂಪದ ವ್ಯಕ್ತಿ. ವಯಸ್ಸಿನಲ್ಲಿ, ಸ್ಥಾನದಲ್ಲಿ ಹಿರಿಯರಾಗಿದ್ದರೂ ಅತ್ಯಂತ ಸರಳರಾಗಿದ್ದರು. ಎಲ್ಲರೊಂದಿಗೂ ಆತ್ಮೀಯತೆಯಿಂದ ನಗುಮುಖದಿಂದ ಬೆರೆಯುತ್ತಿದ್ದರು. ನಾನು ಅವರನ್ನು ಭೇಟಿಯಾದ ಮೊದಲ ಕ್ಷಣದಿಂದಲೇ ನನ್ನ ಸ್ನೇಹಿತರಾದರು. ಇದು ಎಲ್ಲರದೂ ಅನುಭವ.

ಮಣಿಪಾಲ ಮುದ್ರಣಾಲಯಕ್ಕೆ ಮೊದಲ ಮುದ್ರಣ ಯಂತ್ರ ಬಂದಾಗ ಸೇರಿದ ಕೃಷ್ಣಯ್ಯ ಐವತ್ತೆರಡು ವರ್ಷಗಳ ಸೇವೆಯಲ್ಲಿ – ಸಂಸ್ಥೆ ಉಚ್ಛ್ರಾಯ ಸ್ಥಿತಿಯಲ್ಲಿರುವುದನ್ನು ನೋಡಿ ಕಣ್ಮುಚ್ಚಿದ್ದಾರೆ. ಅವರ ದುಡಿಮೆ ಸಾರ್ಥಕವಾಗಿದೆ. ಎಲ್ಲರಿಗೂ ಮಾದರಿಯಾಗಿದೆ.

ಅರ್ಧಶತಮಾನ ದುಡಿದ ಸಂಸ್ಥೆಗೆ, ಕೆಲಸಕ್ಕೆ ಅತ್ಯಂತ ನಿಷ್ಠರಾಗಿದ್ದ ಕೃಷ್ಣಯ್ಯ ಬದುಕಿನಲ್ಲೂ ವ್ಯವಸ್ಥಿತರಾಗಿದ್ದವರು. ಒಂದು ನಿಮಿಷವನ್ನೂ ವ್ಯರ್ಥವಾಗಿಸುತ್ತಿರಲಿಲ್ಲ. ಬೆಳಗ್ಗೆ ನಸುಕಿನಲ್ಲೆ ಎದ್ದು ತಣ್ಣೀರು ಸ್ನಾನ, ಸುಂದರಕಾಂಡ ಪಾರಾಯಣ ಎಂದಿಗೂ ಬಿಡಲಿಲ್ಲ. ದೆಹಲಿಯ ಮತ್ತು ಅಮೆರಿಕಾದ ಕೊರೆಯುವ ಚಳಿಯಲ್ಲೂ ಬಿಡಲಿಲ್ಲ. ಐವತ್ತೆರಡು ವರ್ಷಗಳ ದುಡಿಮೆಯಲ್ಲಿ ಅವರು ರಜೆ ತೆಗೆದುಕೊಂಡದ್ದೇ ಅಪರೂಪ. ಮನೆಯ ಹಬ್ಬ-ಸಮಾರಂಭಗಳ ದಿನವೂ ಭಾನುವಾರ– ರಜಾ ದಿನಗಳಂದೂ ಕಚೇರಿಗೆ ಬರುವುದನ್ನು ತಪ್ಪಿಸುತ್ತಿರಲಿಲ್ಲ.

ಅದ್ಭುತ– ಅಪರೂಪದ ವ್ಯಕ್ತಿ. ಮಣಿಪಾಲದ ನಾವೆಲ್ಲರೂ ಆತ್ಮೀಯ ಹಿರಿಯರೊಬ್ಬರನ್ನು ಕಳೆದುಕೊಂಡಿದ್ದೇವೆ; ಇಂಥವರನ್ನು ಮತ್ತೆ ಕಾಣುವುದು ಎಂದಿಗೊ?

* * *

ಮಣಿಪಾಲದಲ್ಲಿದ್ದು ಈ ಸಂಚಿಕೆ ತಯಾರಿಸುತ್ತಿರುವಾಗಲೇ ಬೆಂಗಳೂರಿನಿಂದ ಬಂದ ಒಂದು ಆಘಾತದ ಸುದ್ದಿ– ಹಿರಿಯ ಕಲಾವಿದ ಎಂ. ಟಿ. ವಿ. ಆಚಾರ್ಯ ಅವರ ನಿಧನ. ಮೊನ್ನೆ ಮೊನ್ನೆಯವರೆವಿಗೂ ಚಟುವಟಿಕೆಯಿಂದಿದ್ದರು. ಹದಿನೈದು ದಿನಗಳ ಹಿಂದೆ ಬೆಂಗಳೂರು ಕಚೇರಿಗೆ ಫೋನ್ ಮಾಡಿ ನನ್ನೊಂದಿಗೆ ಮಾತನಾಡಿದ್ದರು. 'ಬೇಗ ಬಂದು ನೋಡುತ್ತೇನೆ'– ಎಂದಿದ್ದೆ.

'ಚಂದಮಾಮ' ಪತ್ರಿಕೆಯ ಕನ್ನಡ ಸಂಪಾದಕರೂ ಮುಖಚಿತ್ರ ಕಲಾವಿದರೂ ಆಗಿ ದುಡಿದು, ಕನ್ನಡನಾಡಿನ ಪ್ರೀತಿಯಿಂದ ಬೆಂಗಳೂರಿಗೆ ಬಂದರು. ಆಲೋಚನೆಗಳೆಲ್ಲ ಏರುಪೇರಾದಾಗ ಸ್ವತಂತ್ರವಾಗಿ ಕಲಾಸಂಸ್ಥೆ ಪ್ರಾರಂಭಿಸಿದರು. ಕಿರಿಯ ಕಲಾವಿದರಿಗಾಗಿ 'ಆಚಾರ್ಯ ಚಿತ್ರ ಕಲಾಭವನ' ಪ್ರಾರಂಭಿಸಿ, ಕರ್ನಾಟಕದ ಮೊಟ್ಟಮೊದಲು ಅಂಚೆ ಮೂಲಕ ಕಲಾಶಿಕ್ಷಣ ನಡೆಸಿ, ಬೇಕಾದಷ್ಟು ಕಲಾವಿದರನ್ನು ಸೃಷ್ಟಿಸಿದರು.

ಶಿಷ್ಯರನ್ನು ಕಂಡರೆ ಪಿತೃ ವಾತ್ಸಲ್ಯ. ಯಾರಾದರೂ ಸ್ವಲ್ಪ ದಿನ ಕಾಣದಾದರೂ ಚಡಪಡಿಸುತ್ತ, ಅವರಿಗಾಗಿ ವಿಚಾರಿಸುತ್ತ, ಮುಖ ನೋಡಿದ ಕೂಡಲೇ ಸಂತೋಷ ಪಡುವ ಆತ್ಮೀಯ ಗುರುಗಳು. ಅತ್ಯಂತ ಮೃದು ಮಾತಿನ– ಸ್ವಭಾವದ ವ್ಯಕ್ತಿ. ಅದ್ಭುತ ಶಿಕ್ಷಕರು.

ಕರ್ನಾಟಕದಲ್ಲಿ ಅಂಚೆ ಮೂಲಕ ಕಲಾಶಿಕ್ಷಣ ಪ್ರಾರಂಭಿಸಲೇಬೇಕು ಎನ್ನುವುದಕ್ಕಾಗಿ ಬೆಂಗಳೂರಿನ ಒಳ್ಳೆಯ ಮನೆಯನ್ನು ಮಾರಿಬಿಟ್ಟು, ಅನಂತರ ಸ್ವಂತ ನೆಲೆಯೇ ಇಲ್ಲದಂತಾಯಿತು. ಕಲಾಶಿಕ್ಷಣಕ್ಕಾಗಿ ಅವರು ಮಾಡಿರುವ ದೊಡ್ಡ ತ್ಯಾಗ ಇದು. ಸದ್ದುಗದ್ದಲ



ವಿಲ್ಲದೆ ದೊಡ್ಡದಾಗಿ ದುಡಿದ ಹಿರಿಯ ವ್ಯಕ್ತಿ.

ಸ್ವಚ್ಛ ಬಣ್ಣಗಳ ವರ್ಣಚಿತ್ರಗಳನ್ನು ಅದ್ಭುತವಾಗಿ ಸೃಷ್ಟಿಸುತ್ತಿದ್ದರು. ರವಿವರ್ಮನ ಪ್ರಭಾವವಿರುವಂತೆ ಕಂಡರೂ ಆಚಾರ್ಯರ ಕಲೆಗಾರಿಕೆಯಲ್ಲಿ ಅವರದೇ ವಿಶೇಷವಾದ ಛಾಪು ಇತ್ತು. ಈ ಶೈಲಿಯವರು ಭಾರತದಲ್ಲೆ ಅಪರೂಪ. ಕರ್ನಾಟಕದಲ್ಲಂತೂ ಅಂಥವರು ಅವರೊಬ್ಬರೆ ಇರಬೇಕು.

ಅವರ ನೂರಾರು ಅಪರೂಪ ಕಲಾಕೃತಿಗಳು ನಿರಂತರವಾಗಿ ಒಂದೆಡೆ ಎಲ್ಲರಿಗೂ ಕಾಣಲು ಸಾಧ್ಯವಾಗುವಂತಾಗಬೇಕು. ಎಂ. ಟಿ. ವಿ. ಆಚಾರ್ಯರ ಹೆಸರಿನಲ್ಲಿ ಶಾಶ್ವತವಾಗಿ ಉಳಿಯುವಂಥದ್ದೇನಾದರೊಂದನ್ನು ಸರ್ಕಾರ ಮತ್ತು ಲಲಿತಕಲಾ ಅಕೆಡೆಮಿ ಮಾಡಬೇಕು.

ಆ ನಗುಮುಖದ ವಾತ್ಸಲ್ಯ ಮೂರ್ತಿ ಇನ್ನಿಲ್ಲ. ●

Edited, Printed and Published by T. Satish U. Pai, at Udayavani Press, for the Proprietors
The Manipal Printers and Publishers Ltd., Manipal - 576 119


ಏನು ಕಡಿಮೆ
ಬೆಲೆಯೇ
ಎಲ್ಲಾನು ನಾ?
"ಎಂದೂ ಇಲ್ಲ ಅವ್ವನಾಗಿ
ಮತ್ತು ಡಾಕ್ಟರಳಾಗಿ ನಾನು
ನನ್ನ ಮಗುವಿಗೆ
ಯಾವುದು ಒಳ್ಳೇದು
ಎಂದು ಅರಿತಿದ್ದೇನೆ.
ಆದ್ದರಿಂದಲೇ ನನ್ನ ಗಮನ
ಮೊದಲು ಕ್ವಾಲಿಟಿ ಮತ್ತು
ಶುದ್ಧತೆಯ ಕಡೆಗೆ. ಆದರೆ
ಅದೇ ಉಚ್ಚ ಕ್ವಾಲಿಟಿ ಮತ್ತು
ಶುದ್ಧತೆ ಕಡಿಮೆ ಬೆಲೆಯಲ್ಲಿ
ಸಿಕ್ಕರೆ ಆಗ್ಲೂ ನಾ ಜಾಸ್ತಿ ಬೆಲೆ
ಕೊಡುವೆನೇ? ಎಂದೂ ಇಲ್ಲ.
ಆದ್ದರಿಂದಲೇ ನಾನು ನನ್ನ
ಮಗುವಿಗಾಗಿ ನನ್ನದಾಗಿಸಿ
ಕೊಂಡಿದ್ದೇನೆ. ಶುದ್ಧ,
ಕೋಮಲ ಮತ್ತು
ಸ್ಟರ್‌ಲಾಯಿಜ್ಡ್
ವಿಪ್ರೋಬೇಬಿ ಸಾಫ್ಟ್ ಪೌಡರ್.
ವಿಶೇಷ ಪ್ಲೇಟಲೆಟ್ ಗ್ರೇಡಿನ ಈ ಪೌಡರ್
ಸಾಮಾನ್ಯ ಪೌಡರ್‌ಗಳಂತೆ ಚರ್ಮದೊಳಗೆ
ನುಗ್ಗಿ ಚರ್ಮದ ತೂತು ಗಳನ್ನು
ಮುಚ್ಚುವುದಿಲ್ಲ. ಮೇಲೆ ಮೇಲೆಯೇ ಇದ್ದು
ಚರ್ಮಕ್ಕೆ ಸುಲಭವಾಗಿ ಉಸಿರಾಡುವುದಕ್ಕೆ
ಅವಕಾಶ ಮಾಡಿಕೊಡುತ್ತದೆ. ಅಂದರೆ
ಮಗುವಿಗೆ ಪೂರ್ಣವಾಗಿ ಸುರಕ್ಷಿತವಾದದ್ದು.
ಇದೆಲ್ಲಾ ಇದ್ದರೂ ಸಹ ಬೆಲೆ ಅತಿ ಕಮ್ಮಿ.
ಏನು ಈಗ್ಲೂ ಜಾಸ್ತಿ ಬೆಲೆಕೊಟ್ಟು
ಬೇರೆ ಯಾವುದೇ ಪೌಡರ್
ಕೊಂಡುಕೊಳ್ಳುವಿರಾ ನೀವು?"
WIPRO
BABY SOFT
24 ರೂ.ಗಳು
100 ಗ್ರಾಂಗೆ
ಎಲ್ಲಾ ತೆರಿಗೆ
ಸೇರಿ.
ವಿಪ್ರೋ
ಬೇಬಿ ಸಾಫ್ಟ್
ಪೌಡರ್
ಶುದ್ಧತೆ ಪಾಪನಿಗೆ, ಉಳಿತಾಯ ನಿಮಗೆ.
everest/92/WL/235-kn

